# ಹೊಸತು

ನೆಮ್ಮದಿಯ ನಾಳೆ ನಮ್ಮದು

## ಒಳಗೇನಿದೆ ...

ನ್ಯಾಯಮೂರ್ತಿ ಎ. ಜೆ. ಸದಾಶಿವ ಆಯೋಗ ವರದಿ ಜಾರಿಯಾಗಲೇ ಬೇಕು — *ಶ್ರೀನಿವಾಸ ಮರಡ್ಡಿ* ... ೧೬

ಸಮಾನತೆಯು ಅಪಾರ್ಥಕ್ಕೀಡಾಗುವುದು ಸಲ್ಲ — *ಡಾ|| ಜಿ. ರಾಮಕೃಷ್ಣ* ... ೨೫

ಭಾಗೀರತಿ : ಮೌನರೋದನ, ಸಂಕಟದ ಸಂಕಥನ — *ಡಾ|| ರಂಗಾರೆಡ್ಡಿ ಕೋಡಿರಾಂಪುರ* ... ೫೯

ಪತ್ರಕರ್ತ ವಿ. ಎನ್. ಸುಬ್ಬರಾವ್‌ಗೆ ನಮನ — *ಸಿ. ಆರ್. ಕೃಷ್ಣರಾವ್* ... ೩೬

ನಮ್ಮನ್ನಗಲಿದ ವಿನಯಶೀಲ ನಟ ಎ. ಕೆ. ಹಂಗಲ್ — *ಎಸ್. ಸುರೇಂದ್ರ* ... ೩೧

ನೆಲಮೂಲ ಬದುಕಿನ ಹುಡುಕಾಟದ ‘ಬುದ್ದಣ್ಣ’ — *ಡಾ|| ಕೆ. ಎನ್. ದೊಡ್ಡಮನಿ* ... ೫೬

ಕಾವ್ಯಧಾರೆ — ೨೪,೩೦,೩೮,೫೧,೫೬,೫೮,೬೧

ಗುಮಾಸ್ತ ಮತ್ತು ರಾವಣ — *ಮೂಲ : ಡಾ|| ಹರಿಕೃಷ್ಣ ದೇವಸರೆ; ಕನ್ನಡಕ್ಕೆ : ಡಾ|| ಪಂಚಾಕ್ಷರಿ ಹಿರೇಮಠ* ... ೨೩

ನರಸಯ್ಯನ ಸಂನ್ಯಾಸತ್ವ — *ಡಾ|| ವಿಜಯಕುಮಾರ್ ಎಂ. ಬೋರಟ್ಟಿ* ... ೪೫

ಹಂದಿ ಸ್ವಾಮಿ — *ಸಂಪತ್ ಬೆಟ್ಟಗೆರೆ* ... ೫೩

ಭೋಜನಶಾಲಾ ಮತ್ತು ವೈಭವೀಕರಣ — *ಶ್ರೀಧರ ಪಿಸ್ಸೆ* ... ೪೯

ಅರ್ಥವಂತ ಇತಿಹಾಸಕಾರ : ಎರಿಕ್ ಹಾಬ್ಸ್‌ಬಾಮ್ — *ಡಾ|| ಎಚ್. ಎಸ್. ಗೋಪಾಲ ರಾವ್* ... ೪೩

ಕಾಗದದ ಕಥೆ — *ಸುಮಂಗಲ ಎಸ್. ಮುಮ್ಮಿಗಟ್ಟಿ* ... ೩೬

ಸಿರಿಯಾ ವಿರುದ್ಧ ಅಪಪ್ರಚಾರ — *ಮೂಲ : ಥಿಯೆರ್ರಿ ಮೇಯ್ಸನ್; ಕನ್ನಡಕ್ಕೆ : ಸುರೇಶ್ ಭಟ್ ಬಾಕ್ರಬೈಲ್* ... ೨೧

ಬಹುತ್ವದ ಸಮಸ್ಯೆಗಳು — *ಮೂಲ : ಡಾ|| ಅಸ್ಗರ್ ಅಲಿ ಎಂಜಿನಿಯರ್; ಕನ್ನಡಕ್ಕೆ : ಹಸನ್ ನಯೀಂ ಸುರಕೋಡ* ... ೧೩

ನಾನು ಓದಿದ ಪುಸ್ತಕ : ‘ತಳಸಂಸ್ಕೃತಿ’ — *ಡಾ|| ಸೂರ್ಯಕಾಂತ ಎಸ್. ಸುಜ್ಯಾತ್* ... ೪೮

ವಿಶ್ವವೀಕ್ಷಣೆ : ಅಮೆರಿಕದ ಅಧ್ಯಕ್ಷೀಯ ಚುನಾವಣೆ — *ಸೀಯಾರ್ಕೆ* ... ೨೯

ಹೊಸ ಓದು / ಸಾದರ ಸ್ವೀಕಾರ — *ರಮೇಶ ಕೋಲಾರ* ... ೩೪

ನಭಾವಲೋಕನ : ಗ್ರಹಣವಲ್ಲದ ಗ್ರಹಣ — *ಡಾ|| ಬಿ. ಎಸ್. ಶೈಲಜಾ* ... ೨೦

ತಿಳಿವು : ಪ್ರಕ್ಷೇಪಣೆ — *ಎಚ್. ಎಸ್. ಈಶ್ವರ* ... ೬೨

**ಚಿತ್ರಗಳು :** ಉಮೇಶ್ ಹಿರೇಮಠ, ವಿ. ಗೋಪಾಲ್, ಪ್ರತೀಕ್ ಸಿನ್ಹಾ, ಕಮಲಂ ಅರಸು, ಶ್ರೀಹರಿ, ರವಿ ಹೆಗ್ಗಡಿ, ಬಿ.ವಿ.ಎಚ್., ಗೋಪಿ

**ಮುಖಚಿತ್ರ :** ಎ. ಕೆ. ಹಂಗಲ್

**ವಿನ್ಯಾಸ :** ನವಕರ್ನಾಟಕ ವಿನ್ಯಾಸ

**ಕಚೇರಿ ಸಹಕಾರ :** ಜಿ. ವಿ. ತೇಜೋವತಿ

## ಈ ತಿಂಗಳು

ನೊಬೆಲ್ ಶಾಂತಿ ಪುರಸ್ಕಾರ ಯಾವತ್ತೂ ವಿವಾದಗಳನ್ನು ಸೃಷ್ಟಿಸುತ್ತಾ ಬಂದಿದೆ. ಯಾವುದೇ ಆಕ್ಷೇಪಗಳಿಲ್ಲದೆ ಅದು ವಿತರಣೆಯಾಗಿರುವುದು ಕಡಿಮೆ, ಒಂದು ನೂರು ವರ್ಷಗಳಲ್ಲಿ. ಈ ವಿಭಾಗದಲ್ಲಿ ಹೆಚ್ಚಿನ ಪುರಸ್ಕಾರಗಳು ರಾಜಕೀಯ ಪ್ರೇರಿತವಾಗಿದ್ದು, ಕೆಲವೊಮ್ಮೆ ಹಾಸ್ಯಾಸ್ಪದವಾಗಿಯೂ ಇವೆ. ಅಮೆರಿಕದ ಅಧ್ಯಕ್ಷ ಬರಾಕ್ ಒಬಾಮಾಗೆ ಅಧಿಕಾರ ವಹಿಸಿಕೊಂಡ ಕೆಲವೇ ದಿನಗಳಲ್ಲಿ ನೊಬೆಲ್ ಶಾಂತಿ ಪುರಸ್ಕಾರ ನೀಡಿದ್ದು ಅದಕ್ಕೆ ಉದಾಹರಣೆ. ಈತ ಆ ಪುರಸ್ಕಾರಕ್ಕೆ ಎಷ್ಟು ಅರ್ಹ ಎನ್ನುವುದಕ್ಕೆ ಆಫ್ಘಾನಿಸ್ತಾನದಲ್ಲಿ ಅಮಾಯಕರ ಮೇಲೆ ನಡೆಯುತ್ತಿರುವ ‘ಡ್ರೋನ್’ ಕ್ಷಿಪಣಿಗಳ ಹಾವಳಿ, ಲಿಬಿಯಾ ಮೇಲೆ ನಡೆಸಿದ ದಾಳಿ, ಸಿರಿಯ ಮತ್ತು ಇರಾನ್‌ಗಳ ಮೇಲೆ ಎರಗಲು ನಡೆಸುತ್ತಿರುವ ಹುನ್ನಾರ ಸಾಕ್ಷಿಯಾಗಿದೆ. ಕೆಲ ವರ್ಷಗಳ ಹಿಂದೆ ಅಮೆರಿಕದ ಹೆನ್ರಿ ಕಿಸಿಂಜರ್, ಇಸ್ರೇಲಿನ ಯಿಜಾಕ್ ರ್‍ಯಾಬಿನ್ ಮತ್ತು ಷಿಮೋನ್ ಪೆರೇಜ್‌ಗೆ ನೀಡಿದ ಪುರಸ್ಕಾರವನ್ನು ನೆನಪಿಸಿಕೊಳ್ಳಬಹುದು. ಬ್ರಿಟಿಷ್ ಸಾಮ್ರಾಜ್ಯಶಾಹಿಯ ವಿರುದ್ಧ ಅಹಿಂಸಾ ಹೋರಾಟವನ್ನು ನಡೆಸಿದ ಮಹಾತ್ಮ ಗಾಂಧಿಯನ್ನು ನೊಬೆಲ್ ಸಮಿತಿ ಕಡೆಗಣಿಸಿದ ನೋವು ಭಾರತೀಯರಿಗೆ ಇದ್ದೇ ಇದೆ. ಈ ವರ್ಷದ ನೊಬೆಲ್ ಪುರಸ್ಕಾರ ಯೂರೋಪಿಯನ್ ಯೂನಿಯನ್ನಿನ ಮುಡಿಲು ಸೇರಿರುವುದು ನಗೆಪಾಟಲಿಗೀಡಾಗಿದೆ. ಎರಡನೇ ಮಹಾಯುದ್ಧದ ನಂತರ ಅಸ್ತಿತ್ವಕ್ಕೆ ಬಂದ ಈ ಸಂಘಟನೆ ಮುಖ್ಯವಾಗಿ ಅಂದಿನ ಸೋವಿಯೆತ್ ಒಕ್ಕೂಟ ಮತ್ತು ಪೂರ್ವ ಯೂರೋಪಿನ ಕಮ್ಯುನಿಸ್ಟ್ ದೇಶಗಳನ್ನು ಎದುರಿಸುವುದಕ್ಕಾಗಿಯೇ ಸ್ಥಾಪಿತವಾದ್ದು. ಈಗ ಆರ್ಥಿಕ ಬಿಕ್ಕಟ್ಟಿನಿಂದ, ನಿರುದ್ಯೋಗ ಮತ್ತು ಸಾಲಬಾಧೆಯಿಂದ ತತ್ತರಿಸುತ್ತಿರುವ ಈ ಒಕ್ಕೂಟ ಅಳಿವಿನ ಅಂಚಿನಲ್ಲಿದೆ. ಅದನ್ನು ಉಳಿಸುವುದಕ್ಕಾಗಿ, ನೈತಿಕ ಬೆಂಬಲವಾಗಿ ನೀಡಲಾಗಿದೆಯೇ ನೊಬೆಲ್ ಪುರಸ್ಕಾರ ಎನ್ನುವ ಗುಮಾನಿ! ಇನ್ನು ಈ ಸಂಘಟನೆ ಪ್ರಪಂಚದಲ್ಲಿ ಶಾಂತಿ ಸ್ಥಾಪನೆಗೆ ನೀಡಿರುವ ಕಾಣಿಕೆ ಶೂನ್ಯ. ಸದಾ ಅಮೆರಿಕದ, ಅದರ ನಿಕಟವರ್ತಿ ಬ್ರಿಟನ್ನಿನ ಮರ್ಜಿಗೆ ತಕ್ಕಂತೆ ತಾಳ ಹಾಕುತ್ತಿರುವ ಈ ಒಕ್ಕೂಟ, ನಡೆದ ಎಲ್ಲ ದುರಾಕ್ರಮಣಗಳಲ್ಲೂ ಭಾಗಿ. ಯುಗೋಸ್ಲಾವಿಯದ ವಿಘಟನೆ, ಕೊಸಾವೋದಲ್ಲಿ ನಡೆದ ನರಮೇಧ, ಸೆರ್ಬಿಯದ ಮೇಲೆ ನಡೆದ ದಾಳಿ ಎಲ್ಲ ಸಂಭವಿಸಿದ್ದು ಯೂರೋಪಿನಲ್ಲೆ, ಒಕ್ಕೂಟದಲ್ಲಿ ಪಾಲ್ಗೊಂಡಿತ್ತೇ ಹೊರತು, ಅದನ್ನು ತಪ್ಪಿಸಲು ಪ್ರಯತ್ನಿಸಲಿಲ್ಲ. ಪಶ್ಚಿಮ ಏಶಿಯಾದ ಎಲ್ಲ ದುರಾಕ್ರಮಣಗಳಲ್ಲೂ ಈ ಒಕ್ಕೂಟದ ದೇಶಗಳ ಸಹಭಾಗಿತ್ವ ಇದೆ. ಆಫ್ಘಾನಿಸ್ತಾನ, ಸಿರಿಯಾ, ಲಿಬಿಯಾ, ಇರಾಕ್ ಮುಂತಾದ ದೇಶಗಳಲ್ಲಿ ಹರಿದಿರುವ ನೆತ್ತರಿನಲ್ಲಿ ಅದರ ಪಾಲು ನಗಣ್ಯವೇನಲ್ಲ. ಇವನ್ನೆಲ್ಲ ಗಣನೆಗೆ ತೆಗೆದುಕೊಂಡು ನೊಬೆಲ್ ಶಾಂತಿ ಸಮಿತಿ ಪುರಸ್ಕಾರ ನೀಡಿದೆಯೆ? ಈ ಪುರಸ್ಕಾರ ಯೂರೋಪಿನವರಿಗೇ ಅಚ್ಚರಿ ತಂದಿದೆ. ಪ್ರತಿಭಟನೆಗಳೂ ವ್ಯಕ್ತಗೊಂಡಿವೆ. ಸಮಿತಿಯ ತೀರ್ಮಾನ ಕಟುಟೀಕೆಗೆ ಗುರಿಯಾಗಿದೆ. ನೊಬೆಲ್ ಶಾಂತಿ ಪುರಸ್ಕಾರ ಎನ್ನುವುದು ಇಂಥ ನಿರ್ಧಾರಗಳಿಂದ ತನ್ನ ಮೌಲ್ಯವನ್ನು ಕಳೆದುಕೊಂಡಿದೆ.

✶ ✶ ✶

ಮನಮೋಹನ ಸಿಂಗ್ ಮತ್ತು ಸೋನಿಯಾ ಗಾಂಧಿ ನೇತೃತ್ವದ ಯುಪಿಎ-೨ ಸರಕಾರ ದಿನಕ್ಕೊಂದು ಭ್ರಷ್ಟಾಚಾರದ ಪ್ರಕರಣದಲ್ಲಿ ಸಿಕ್ಕಿಹಾಕಿಕೊಂಡು ಒದ್ದಾಡತೊಡಗಿದೆ. ಇದರಿಂದ ಪಾರಾಗಲು ವಿದೇಶೀ ಬಂಡವಾಳದ ಮೊರೆ ಹೋಗಿರುವ ಈ ಸರಕಾರ ಇನ್ನೆಷ್ಟು ದಿನ ಉಳಿದೀತೋ ಎನ್ನುವ ಸಂಶಯ ಇದ್ದೇ ಇದೆ. ಚುನಾವಣೆಗಳನ್ನು ಎದುರಿಸಲು ರಾಜಕೀಯ ಪಕ್ಷಗಳ ಮೀನಾಮೇಷವೇ ಸಿಂಗ್ - ಗಾಂಧಿ ಜೋಡಿಗೆ ಶ್ರೀರಕ್ಷೆ. ಎಷ್ಟೇ ನಿಷ್ಠೆ ತೋರುತ್ತಿದ್ದರೂ ಅಮೆರಿಕದ ಪ್ರಭೃತಿಗಳಿಗೂ ಈಗ ಅವರು ಬೇಡವಾಗುತ್ತಿದ್ದಾರೆ. ಪ್ರಧಾನಿಯಾಗಿ ಮನಮೋಹನ ಸಿಂಗ್ ಸಾಧನೆ ಎಂದರೆ ಭಾರತವನ್ನು ಅಮೆರಿಕಾಕ್ಕೆ ಒತ್ತೆ ಇಟ್ಟಿರುವುದು ಎಂದು ಧಾರಾಳವಾಗಿ ಹೇಳಬಹುದು. ಮೊದಲ ಅವಧಿಯಲ್ಲಿ ನ್ಯೂಕ್ಲಿಯರ್ ಒಪ್ಪಂದಕ್ಕೆ ಸಹಿ ಹಾಕಿದರೆ, ಈಗ ಬಂಡವಾಳಕ್ಕಾಗಿ ಹೆಬ್ಬಾಗಿಲು ತೆರೆದಿದ್ದಾರೆ. ಎರಡೂ ಕೂಡ ದೇಶದ ಹಿತಕ್ಕೆ ಮಾರಕವೆ. ಮುಂದೇನಾಗುತ್ತದೋ ಎಂಬ ಸಂದೇಹದಿಂದಲೋ ಏನೋ ಆದಷ್ಟು ಬಾಚಿಕೊಳ್ಳುವ ದುರಾಸೆಯಿಂದ ಭ್ರಷ್ಟಾಚಾರ ಮುಗಿಲು ಮುಟ್ಟಿದೆ. ಟೆಲಿಕಾಮ್ ಹಗರಣದಿಂದ ಪ್ರಾರಂಭವಾದ ಪ್ರಕರಣದಲ್ಲಿ ಕಿಚಡಿ ಸರಕಾರದ ಪಾಲುದಾರ

*(೬ನೇ ಪುಟಕ್ಕೆ)*

ತಿಂಗಳ ಪತ್ರಿಕೆ

# ಹೊಸತು

ನಿಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೧೪ ಸಂಚಿಕೆ-೪ ನವೆಂಬರ್ ೨೦೧೨

**ಗೌರವ ಸಂಪಾದಕ**

ಜಿ. ರಾಮಕೃಷ್ಣ

**ಸಂಪಾದಕ**

ಸಿದ್ದನಗೌಡ ಪಾಟೀಲ

**ಸಹಸಂಪಾದಕರು**

ಇಂದಿರಾ ಕುಮಾರಿ
ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ರಾಮಲಿಂಗಪ್ಪ ಟಿ. ಬೇಗೂರು
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೯೬೪೨೬

**ಹೊಸತು ಕಚೇರಿಯ ವಿಳಾಸ**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೯೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೬೮೦೨೯, ೨೨೨೦೩೫೮೦
ಫ್ಯಾಕ್ಸ್ : ೩೦೫೬೮೦೨೩
**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http : //navakarnataka.blogspot.in**
**http : //hosathumonthly.blogspot.in**




# ಮತ್ತೆ ಪಿಸುಗುಡುತ್ತಿರುವ ಪೋಸ್ಕೊ

ಕರ್ನಾಟಕದಲ್ಲಿ ಪೋಸ್ಕೊ ಉಕ್ಕು ಕಂಪನಿ ಸ್ಥಾಪಿಸಲು ಅವಕಾಶ ಕೊಡುವುದಿಲ್ಲ ಎಂದು ೨೦೧೧ರ ಜುಲೈ ತಿಂಗಳಿನಲ್ಲಿ ಅಂದಿನ ಮುಖ್ಯಮಂತ್ರಿ ಬಿ. ಎಸ್. ಯಡಿಯೂರಪ್ಪನವರು ಘೋಷಿಸಿದರು. ಅವರ ಘೋಷಣೆಗೆ ಒಂದು ಕಾರಣವಿತ್ತು. ಗದಗ ಜಿಲ್ಲೆಯ ಹಳ್ಳಿಗುಡಿ - ಜಂತ್ಲಿ ಶಿರೂರ ಮಧ್ಯೆ ಪೋಸ್ಕೊ ಕಂಪನಿಗಾಗಿ ಮೂರು ಸಾವಿರ ಎಕರೆಗೂ ಅಧಿಕ ಜಮೀನನ್ನು ಸ್ವಾಧೀನ ಪಡಿಸಿಕೊಳ್ಳುವುದಾಗಿ ಕೆ.ಐ.ಎ.ಡಿ.ಬಿ. ನೋಟೀಸ್ ಜಾರಿ ಮಾಡಿತ್ತು. ಅಲ್ಲಿನ ಭೂಸ್ವಾಧೀನವನ್ನು ವಿರೋಧಿಸಿ ಪ್ರಗತಿಪರ ಸಂಘಟನೆಗಳು, ಮಠಾಧೀಶರು, ಸ್ಥಳೀಯ ರೈತರು ತೀವ್ರವಾದ ಹೋರಾಟ ನಡೆಸಿದರು. ಪೋಸ್ಕೊ ವಿರೋಧಿ ಹೋರಾಟ ರಾಜ್ಯದ ಗಮನ ಸೆಳೆಯಿತು. ಒರಿಸ್ಸಾ ರಾಜ್ಯದ ಪೋಸ್ಕೊ ವಿರೋಧಿ ಹೋರಾಟ ಸಮಿತಿಯಂತೆ ಗದಗ ಜಿಲ್ಲೆಯಲ್ಲಿ ಭೂಸ್ವಾಧೀನ ವಿರೋಧಿ ಸಂಗ್ರಾಮ ಸಮಿತಿ ರಚನೆಯಾಯಿತು. ಹೋರಾಟದ ತೀವ್ರತೆಯನ್ನು ಕಂಡ ಅಂದಿನ ಮುಖ್ಯಮಂತ್ರಿಗಳು ಭೂಸ್ವಾಧೀನವನ್ನು ಕೈಬಿಡುವುದಾಗಿ, ಪೋಸ್ಕೊ ಕಂಪನಿ ಸ್ಥಾಪಿಸುವುದಿಲ್ಲವೆಂದು ಹೇಳಿಕೆ ಕೊಟ್ಟರು. ಆದರೆ ಭೂಸ್ವಾಧೀನಕ್ಕೆ ಆದೇಶ ಹೊರಟ ತಕ್ಷಣ ಭೂಗಳ್ಳರ ಗುಂಪು ಬೇನಾಮಿ ಹೆಸರಿನಲ್ಲಿ ಕಡಿಮೆ ಬೆಲೆಗೆ ರೈತರ ಭೂಮಿ ಖರೀದಿಸಿತ್ತು. ಯಾವಾಗ ಸರಕಾರ ಭೂಮಿ ಸ್ವಾಧೀನಪಡಿಸಿಕೊಳ್ಳುವುದಿಲ್ಲ ಎಂದು ಲಿಖಿತ ಭರವಸೆ ಕೊಟ್ಟಿತೋ ಭೂಗಳ್ಳರ ಗುಂಪು ಆತಂಕಕ್ಕೀಡಾಯಿತು. ಕೆಲವು ರೈತರನ್ನು ಮುಂದಿಟ್ಟುಕೊಂಡು ನಮ್ಮ ಭೂಮಿಯನ್ನು ಸ್ವಾಧೀನಪಡಿಸಿಕೊಳ್ಳಿ ಎಂದು ಅಂದಿನ ಮುಖ್ಯಮಂತ್ರಿ, ಕೈಗಾರಿಕಾ ಮಂತ್ರಿಗಳಿಗೆ ಮನವಿ ಮಾಡತೊಡಗಿದರು. ಇದರಲ್ಲಿ ಸ್ಥಳೀಯ ಬಿಜೆಪಿ ನಾಯಕರೂ ಕೈಗೂಡಿಸಿದರು. ಕೊನೆಗೆ ಕೆಲವು ರೈತರಿಂದ ಭೂಮಿ ಸ್ವಾಧೀನಪಡಿಸಿಕೊಂಡು ಪೋಸ್ಕೊ ಕಂಪನಿ ಸ್ಥಾಪಿಸಲು ಸರಕಾರಕ್ಕೆ ನಿರ್ದೇಶನ ನೀಡುವಂತೆ ರಾಜ್ಯದ ಶ್ರೇಷ್ಠ ನ್ಯಾಯಾಲಯಕ್ಕೆ ಮೊರೆಹೋದರು. ನ್ಯಾಯಾಲಯ ಅವರ ಕೋರಿಕೆಯನ್ನು ತಳ್ಳಿಹಾಕಿತು. ಈಗ ಮತ್ತೆ ಈ ಭೂಗಳ್ಳರ ಗುಂಪು ಕೆಲವು ಅಮಾಯಕ ರೈತರನ್ನು ಮುಂದಿಟ್ಟುಕೊಂಡು ಬೀದಿಗಿಳಿದಿದೆ. ಈ ಬಾರಿ ಅವರ ಬೇಡಿಕೆ ಭಿನ್ನವಾಗಿದೆ. ಬರಗಾಲ ಬಿದ್ದಿದೆ, ರೈತರು ಸಂಕಷ್ಟದಲ್ಲಿದ್ದಾರೆ, ರೈತರ ಭೂಮಿಯನ್ನು ಸ್ವಾಧೀನ ಪಡಿಸಿಕೊಂಡು ಅವರಿಗೆ ಹಣ ಕೊಡಬೇಕು, ಕೈಗಾರಿಕೆ ಬಂದರೆ ಸ್ಥಳೀಯ ರೈತರಿಗೆ ಕೆಲಸ ಸಿಗುತ್ತದೆ ಎಂದು ಪ್ರಚಾರ ನಡೆಸಿದ್ದಾರೆ. ಇದೇ ಕೋರಿಕೆಯನ್ನು ಸ್ಥಳೀಯ ಜಿಲ್ಲಾಧಿಕಾರಿಗಳ ಮುಂದಿಟ್ಟಿದ್ದಾರೆ. ವಾಸ್ತವವಾಗಿ ಕೈಗಾರಿಕೆ ಬರುತ್ತದೆಂದು ಭೂಮಿ ಖರೀದಿಸಿ ಲಾಭ ಮಾಡಿಕೊಳ್ಳಲು ಹೊಂಚು ಹಾಕಿದ್ದ ಭೂಗಳ್ಳರದೇ ಈ ಕಿತಾಪತಿ. ಇದಕ್ಕೆ ಕೈಗಾರಿಕಾ ಮಂತ್ರಿ ಮತ್ತು ಸ್ಥಳೀಯ ಬಿಜೆಪಿ ನಾಯಕರ ಕುಮ್ಮಕ್ಕಿದೆ. ಪೋಸ್ಕೊ ಕಂಪನಿಯಿಂದ ಈಗಾಗಲೇ ೬೦ ಕೋಟಿ ಮುಂಗಡ ಪಡೆದ ಸರಕಾರ ಸ್ಥಳೀಯ ರೈತರು ಬೀದಿಗೆ ಬಿದ್ದರೂ ಚಿಂತೆಯಿಲ್ಲ, ಪೋಸ್ಕೊ ಕಂಪನಿಗೆ ಜಮೀನು ಕೊಡಲು ತುದಿಗಾಲ ಮೇಲೆ ನಿಂತಿದೆ. ಕೈಗಾರಿಕಾ ಮಂತ್ರಿ ಮುರುಗೇಶ ನಿರಾಣಿಯವರು ಅವಕಾಶ ಸಿಕ್ಕಾಗಲೊಮ್ಮೆ ಪೋಸ್ಕೊ ಭಜನೆ ಮಾಡುತ್ತಲೇ ಇರುತ್ತಾರೆ. ಈಗ ಮತ್ತೆ ಪೋಸ್ಕೊ ಬೇಕು ಎಂದು ಹೇಳುವವರ ಹಿಂದೆ ಕೈಗಾರಿಕಾ ಮಂತ್ರಿ, ಸ್ಥಳೀಯ ಮಂತ್ರಿಗಳ ಕೈವಾಡವೂ ಇದೆ. ನೀವು ಚಳುವಳಿ ಮಾಡಿ ನಾವು ಸರಕಾರದ ನಿರ್ಧಾರವನ್ನು ಮರುಪರಿಶೀಲಿಸಿ ಪೋಸ್ಕೊ ಕಂಪನಿ ಸ್ಥಾಪನೆಗೆ ಚಾಲನೆ ನೀಡುತ್ತೇವೆ ಎಂಬ ಭರವಸೆ ಕೊಟ್ಟಿದ್ದಾರೆ. ಪೋಸ್ಕೊ ಕಂಪನಿ ಮತ್ತು ನಮ್ಮ ಕೈಗಾರಿಕಾ ಮಂತ್ರಿ ನಿರಾಣಿಯವರು ಎಷ್ಟು ಕ್ರಿಯಾಶೀಲರಾಗಿದ್ದಾರೆಂದರೆ, ಗದಗ ಜಿಲ್ಲೆಯಲ್ಲಿ ಪೋಸ್ಕೊ ಸ್ಥಾಪನೆ ಇಲ್ಲ ಎಂದು ಅಂದಿನ ಮುಖ್ಯಮಂತ್ರಿ ಹೇಳಿದ ತಕ್ಷಣ, ಬೇರೆ ಜಿಲ್ಲೆಯಲ್ಲಿ ಪೋಸ್ಕೊ ಸ್ಥಾಪಿಸುತ್ತೇವೆಂದು ನಿರಾಣಿ ಹೇಳಿದರು. ಭೂಸ್ವಾಧೀನಕ್ಕೆ ಮುಂದಾದ ಹಳ್ಳಿಗುಡಿಗೆ ಗ್ರಾಮದ ಸಮೀಪದಲ್ಲಿಯೇ ಪಕ್ಕದ ಕೊಪ್ಪಳ ಜಿಲ್ಲೆಯಲ್ಲಿ ಭೂಮಿ ಕೊಡುವುದಾಗಿ ಹೇಳಿದರು. ಇದಕ್ಕೆ ಪ್ರತಿಯಾಗಿ ಕೊಪ್ಪಳ ಜಿಲ್ಲೆಯ ಗಡಿಭಾಗದ ಒಂದು ಹಳ್ಳಿಯಲ್ಲಿ ಸ್ಥಳೀಯ ಬಿ.ಜೆ.ಪಿ. ಪುಢಾರಿಯೊಬ್ಬ ನಮ್ಮ ಹಳ್ಳಿಯ ಜಮೀನನ್ನು ಪೋಸ್ಕೊ ಕಂಪನಿಗೆ ಕೊಡುತ್ತೇವೆ ಎಂದು ಊರಿನ ತುಂಬ ಸ್ವತಃ ಮುಂದೆ ನಿಂತು ಡಂಗುರ ಬಾರಿಸಿದ.

ಬಿ.ಜೆ.ಪಿ. ಸರಕಾರದ ಅವಧಿ ಕೊನೆಗೊಳ್ಳುತ್ತ ಬಂದಿದೆ. ಹೋಗುವಾಗಲಾದರೂ ಪೋಸ್ಕೊ ಸೇವೆ ಸಲ್ಲಿಸಿ, ಭೂಗಳ್ಳರಿಗೆ ಲಾಭವಾಗುವಂತೆ ಮಾಡಿ, ಮುಂದಿನ ಚುನಾವಣೆಗೆ ಖರ್ಚಿನ ವ್ಯವಸ್ಥೆ ಮಾಡಿಕೊಳ್ಳುವ ಹುನ್ನಾರ ಭರದಿಂದ ನಡೆದಿದೆ. ಈಗ ಭೂಮಿ ಕೊಡಲು ಮುಂದಾಗಿರುವವರ ಹೇಳಿಕೆಗಳನ್ನು ಗಮನಿಸಿದರೆ ಇಡೀ ಕರ್ನಾಟಕ ರಾಜ್ಯವನ್ನೇ ಯಾವುದಾದರೂ ಕಂಪನಿಗೆ ಮಾರಬೇಕಾಗುತ್ತದೆ. ಕೊಳ್ಳಲು ಸಾಕಷ್ಟು ಕಂಪನಿಗಳಿವೆ. ಬರಗಾಲ ಬಿದ್ದಿದೆ, ರೈತರು ಕಷ್ಟದಲ್ಲಿದ್ದಾರೆ, ಕಂಪನಿ ಬಂದರೆ ಕೆಲಸ ಸಿಗುತ್ತದೆ ಎಂಬುದು ಅವರ ವಾದ. ಕರ್ನಾಟಕದಲ್ಲಿ ಈ ಬಾರಿ ವಾಡಿಕೆಗಿಂತ ಶೇ. ೩೦-೪೦ರಷ್ಟು ಮಳೆ ಕೊರತೆಯಾಗಿದೆ. ಖಂಡಿತ ರೈತರು ಗಂಭೀರ ಸ್ಥಿತಿಯನ್ನು ಎದುರಿಸುತ್ತಿದ್ದಾರೆ. ಇದು ಗದಗ ಮಾತ್ರವಲ್ಲ, ರಾಜ್ಯದ ೧೪೯ ತಾಲೂಕುಗಳಲ್ಲಿ ಇದೇ ಸ್ಥಿತಿ ಇದೆ. ೧೨೩ ತಾಲೂಕುಗಳು ಗಂಭೀರ ಪರಿಸ್ಥಿತಿಯಲ್ಲಿವೆ. ಹಾಗಾದರೆ ಈ ಎಲ್ಲ ತಾಲೂಕುಗಳಲ್ಲಿ ರೈತರ ಜಮೀನನ್ನು ಒಂದೊಂದು ಕಂಪನಿಗೆ ಕೊಟ್ಟು ರೈತರಿಗೆ ದುಡ್ಡು ಕೊಟ್ಟರೆ ಸಮಸ್ಯೆ ಪರಿಹಾರ ವಾಗುತ್ತದೆಯೆ? ಗದಗ ಜಿಲ್ಲೆಯ ರೈತರು ರಾಜ್ಯದ ಇತರ ರೈತರಂತೆಯೇ ಕಷ್ಟದಲ್ಲಿದ್ದಾರೆ ನಿಜ. ಆದರೆ ಅಲ್ಲಿನ ಭೂಗಳ್ಳರು ರೈತರಿಗಿಂತ ಹೆಚ್ಚು ಕಷ್ಟದಲ್ಲಿದ್ದಾರೆ. ಅವರಿಗೆ ತಕ್ಷಣ ಆ ಭೂಮಿ ಪೋಸ್ಕೊ ಪಾಲಾಗಬೇಕು. ತಮಗೆ ಬರುವ ಲಾಭ ಬರಬೇಕು. ಕರ್ನಾಟಕ ಹೈಕೋರ್ಟ್ ತೀರ್ಪಿನಿಂದಾಗಿ ಇವರು ಹತಾಶರಾಗಿದ್ದಾರೆ. ಇನ್ನೊಂದೆಡೆ ಪೋಸ್ಕೊ ಕಂಪನಿ ಒತ್ತಡ, ಸರಕಾರದ ಒಳಗಿರುವವರಿಂದಲೇ ಕುಮ್ಮಕ್ಕು. ಹೀಗಾಗಿ ಪೋಸ್ಕೊ ಭೂತ ಮತ್ತೆ ಎದ್ದು ಕುಳಿತಿದೆ.

ರಾಜ್ಯದ ರೈತರ ಸಮಸ್ಯೆಗೆ ಸರಕಾರ ಸೂಕ್ತವಾಗಿ ಸ್ಪಂದಿಸಬೇಕು. ಭೀಕರ ಬರಗಾಲಕ್ಕೆ ತುತ್ತಾಗಿರುವ ರೈತರ ಸಹಾಯಕ್ಕೆ ನಿಲ್ಲಬೇಕು. ಕೃಷಿ ಬದುಕಿಗೆ ಪೂರಕವಾಗಿಲ್ಲ ಎಂಬ ಭಾವನೆ ರೈತವರ್ಗದಲ್ಲಿ ಬಂದರೆ ರಾಜ್ಯದ ಕೃಷಿ ವ್ಯವಸ್ಥೆಯೇ

ಕುಸಿದುಬೀಳುತ್ತದೆ. ರೈತರಲ್ಲಿ ಆತ್ಮವಿಶ್ವಾಸ ತುಂಬಬೇಕಾದದ್ದು ಸರಕಾರದ ಜವಾಬ್ದಾರಿ. ಬದಲಾಗಿ ಬರಗಾಲವಿದೆ, ರೈತರು ಕಷ್ಟದಲ್ಲಿದ್ದಾರೆ, ಅವರ ಭೂಮಿ ಸ್ವಾಧೀನಪಡಿಸಿಕೊಂಡು ಹಣ ಕೊಡಿ ಎಂಬ ಭೂಗಳ್ಳರ ಬೇಡಿಕೆಗೆ ಮಣೆ ಹಾಕಿದರೆ, ಅಥವಾ ಅಂಥವರಿಗೆ ಕುಮ್ಮಕ್ಕು ಕೊಟ್ಟರೆ, ರಾಜ್ಯದ ಇತರೆ ಭಾಗದಲ್ಲಿ ಉಂಟಾಗಿರುವ ಬರಗಾಲಕ್ಕೆ ಕೈಗಾರಿಕೆಯೇ ಉತ್ತರವೆ ? ಪೋಸ್ಕೊ ಕಂಪನಿ ಭೂಮಿ ಕೇಳಿರುವ ಪ್ರದೇಶದಲ್ಲಿ ಸುಮಾರು ಐದುನೂರು ರೈತರಿದ್ದಾರೆ. ಅದರಲ್ಲಿ ಕೆಲವು ಜನ ಪರವಾಗಿ, ಹೆಚ್ಚಿನ ಜನ ವಿರೋಧವಾಗಿದ್ದರೆ, ಕೆಲವು ಜನ ತಟಸ್ಥವಾಗಿದ್ದಾರೆ. ಭೂಮಿ ಕೊಡಬೇಕೆನ್ನುವ ರೈತರಲ್ಲಿಯೇ ಅರ್ಧ ಜನ ಹೆದರಿಕೆಗೆ, ಇನ್ನರ್ಧ ಜನ ಭೂಗಳ್ಳರ ಆಮಿಷಕ್ಕೆ ಬಲಿಯಾಗಿದ್ದಾರೆ. ಹೋಗಲಿ, ಹಳ್ಳಿಗುಡಿ ಗ್ರಾಮದ ಎಲ್ಲ ಜನ ಒಪ್ಪಿದರೂ (ಬಹುತೇಕರ ಒಪ್ಪಿಗೆ ಇಲ್ಲ) ಅವರ ಭೂಮಿ ಪಡೆದು ಪರಿಹಾರ ಕೊಡಬಹುದು. ಆದರೆ ಪಕ್ಕದ ಜಮೀನುಗಳ ರೈತರೂ, ಪಕ್ಕದ ಹಳ್ಳಿಯ ರೈತರೂ ಬರಗಾಲದಿಂದ ಪರಿತಪಿಸುತ್ತಿದ್ದಾರೆ, ಅವರಿಗೂ ಕೆಲಸವಿಲ್ಲ. ಸರಕಾರ ಅವರಿಗೇನು ಮಾಡುತ್ತದೆ ? ಅವರ ಭೂಮಿಯನ್ನೂ ಸ್ವಾಧೀನಪಡಿಸಿಕೊಂಡು ಇನ್ನೊಂದು ಕಂಪನಿಗೆ ಕೊಡುತ್ತಾರಾ ? ರಾಜ್ಯದ ಬರಗಾಲ ಪ್ರದೇಶದಲ್ಲೆಲ್ಲ ಒಂದೊಂದು ಕಂಪನಿಗಾಗಿ ಭೂಸ್ವಾಧೀನ ಮಾಡಿಕೊಂಡು ಒಂದೊಂದು ಕಂಪನಿಗೆ ಕೊಟ್ಟರೆ ರಾಜ್ಯದಲ್ಲಿ ಅದ್ಭುತವಾಗಿ ಕೈಗಾರಿಕೋದ್ಯಮ ಬೆಳೆಯುತ್ತದೆ. ಸರಕಾರಕ್ಕೆ, ಸ್ಥಳೀಯ ಮಂತ್ರಿ ಕಳಕಪ್ಪ ಬಂಡಿ, ಕೈಗಾರಿಕಾ ಮಂತ್ರಿ ಮುರುಗೇಶ ನಿರಾಣಿ, ಮುಖ್ಯಮಂತ್ರಿ ಜಗದೀಶ ಶೆಟ್ಟರ್ ಅವರುಗಳಿಗೆ ರಾಜ್ಯದ ಬಗ್ಗೆ ಏನಾದರೂ ಕನಿಷ್ಠ ಪ್ರೀತಿ, ಕಳಕಳಿ ಇದ್ದರೆ ಮೊದಲು ಬರಗಾಲದ ದವಡೆಗೆ ಸಿಕ್ಕು ನಲುಗುತ್ತಿರುವ ರೈತರ ಬೆಂಬಲಕ್ಕೆ ನಿಲ್ಲಬೇಕು. ಪೋಸ್ಕೊ ಕಂಪನಿಯ ಬೆಂಬಲಕ್ಕೆ ನಿಂತರೆ ಒಂದಷ್ಟು ದುಡ್ಡು ಬರಬಹುದು. ಚುನಾವಣಾ ಖರ್ಚಿಗಾಗಬಹುದು, ಇಲ್ಲವೆ ಹಿಂಬಾಲಕ ಭೂಗಳ್ಳರ ಪಡೆಗೆ ಲಾಭವಾಗಬಹುದು. ಅಮಾಯಕ ರೈತರನ್ನು ಬಲಿಕೊಟ್ಟು, ಕೃಷಿ ಭೂಮಿಯನ್ನು ನಾಶ ಮಾಡಿದರೆ ಇತಿಹಾಸದಲ್ಲಿ ಖಾಯಂ ಖಳನಾಯಕರಾಗಿ ನಿಲ್ಲಬೇಕಾಗುತ್ತದೆ.

ಒರಿಸ್ಸಾ ರಾಜ್ಯದಲ್ಲಿ ಜೂನ್ ೨೦೦೫ರಲ್ಲಿ ಪೋಸ್ಕೊ ಕಂಪನಿ ಜೊತೆ ಒಪ್ಪಂದ ಮಾಡಿಕೊಂಡ ಸರಕಾರ ಇವತ್ತಿಗೂ ತನ್ನ ಒಪ್ಪಂದವನ್ನು ಜಾರಿಗೆ ತರಲು ಸಾಧ್ಯವಾಗುತ್ತಿಲ್ಲ. ಜನತೆಯ ಪ್ರತಿರೋಧ ತೀವ್ರವಾಗಿದೆ. ಕರ್ನಾಟಕದಲ್ಲಿ ಅದರಲ್ಲಿಯೂ ಗದಗ ಜಿಲ್ಲೆಯಲ್ಲಿ ಭೂಗಳ್ಳರ ದುರಾಸೆಗೆ ಬಲಿಯಾಗಿ ಕೆಲವು ರೈತರು ಭೂಮಿ ಕೊಡುತ್ತೇವೆಂದು ಹೇಳಿರಬಹುದು. ಆದರೆ ಉಳಿದವರ ಮೌನವನ್ನು ಸಮ್ಮತಿಯೆಂದು ಭಾವಿಸಬೇಕಿಲ್ಲ. ಹಿಂದೆ ಪೋಸ್ಕೊ ವಿರೋಧಿ ಚಳುವಳಿ ನಡೆಸಿದವರೆಲ್ಲರೂ ಮೌನವಾಗಿ ಸರಕಾರದ ನಡೆಯನ್ನು ಗಮನಿಸುತ್ತಿದ್ದಾರೆ. ಸರಕಾರ ವೇನಾದರೂ ಭೂಗಳ್ಳರ ಒತ್ತಡಕ್ಕೆ ಮಣಿದರೆ ಮತ್ತೆ ಭೂಸ್ವಾಧೀನ ವಿರೋಧಿ ಹೋರಾಟ ಭುಗಿಲೇಳುತ್ತದೆ ಎಂಬ ಸತ್ಯ ಸರಕಾರಕ್ಕೆ ತಿಳಿದಿರಲಿ.

[signature]

## ಸ್ವತಂತ್ರ ದಕ್ಷಿಣ ಅಮೆರಿಕದ ಧ್ರುವತಾರೆ ಹ್ಯೂಗೋ ಚಾವೆಜ್

ದಕ್ಷಿಣ ಅಮೆರಿಕದ ಜನಪ್ರಿಯ ನಾಯಕ ಹ್ಯೂಗೋ ಚಾವೆಜ್ ಕಳೆದ ತಿಂಗಳು ಜರುಗಿದ ಅಧ್ಯಕ್ಷೀಯ ಚುನಾವಣೆಗಳಲ್ಲಿ ಮತ್ತೊಮ್ಮೆ ಜಯ ಗಳಿಸಿದ್ದಾರೆ. ಹದಿನಾಲ್ಕು ವರ್ಷಗಳ ಹಿಂದೆ ತಾನು ಪ್ರಾರಂಭಿಸಿದ ಬೊಲಿವರಿಯನ್ ಕ್ರಾಂತಿಯನ್ನು ಮುಂದುವರಿಸಿಕೊಂಡು ಹೋಗಲಿದ್ದಾರೆ. ಶೇ. ೮೧ರಷ್ಟು ಮತದಾರರು ಭಾಗವಹಿಸಿದ್ದ ಈ ಮಹಾ ಚುನಾವಣೆಗಳಲ್ಲಿ ಚಾವೆಜ್ ಶೇ. ೫೫ರಷ್ಟು ಮತ ಗಳಿಸಿ ಜಯಶಾಲಿಯಾಗಿದ್ದಾರೆ. ಇವರನ್ನು ಸೋಲಿಸಲು ವಿರೋಧಿಗಳಿಗೆ ಅಮೆರಿಕ ಡಾಲರುಗಳ ಹೊಳೆಯನ್ನೇ ಹರಿಸಿದರೂ ಪ್ರಯೋಜನವಾಗಲಿಲ್ಲ. ಚಾವೆಜ್ ಆರೋಗ್ಯದ ಬಗೆಗೆ ಇಲ್ಲದ ಅಪಪ್ರಚಾರವನ್ನು ಮಾಡಲಾಯಿತು. ಚುನಾವಣೆಯಲ್ಲಿ ಚಾವೆಜ್‌ರ ವಿಜಯ ಲ್ಯಾಟಿನ್ ಅಮೆರಿಕಾಗಷ್ಟೇ ಅಲ್ಲ, ಅಭಿವೃದ್ಧಿ ಪಥದಲ್ಲಿರುವ ಎಲ್ಲ ಸ್ವತಂತ್ರ ರಾಷ್ಟ್ರಗಳಿಗೂ ಸಂತಸ ತಂದಿದೆ. ಏಕೆಂದರೆ ಅವರು ಈ ಭೂಭಾಗದಲ್ಲಿ ಬದಲಾವಣೆಗಳ ಹರಿಕಾರರಷ್ಟೇ ಅಲ್ಲದೆ ಜಾಗತಿಕ ವ್ಯವಸ್ಥೆಯಲ್ಲಿ ಕೂಡ ಬದಲಾವಣೆಗಳ ಭರವಸೆ ಮೂಡಿಸಿದ್ದಾರೆ. ಅಮೆರಿಕದ ಮುಕ್ತ ಮಾರುಕಟ್ಟೆಯ ಧೋರಣೆ, ಜಾಗತೀಕರಣ, ಉದಾರೀಕರಣ ನೀತಿಗಳಿಗೆ ಪರ್ಯಾಯವನ್ನು ಇಂದು ದಕ್ಷಿಣ ಅಮೆರಿಕ ತೋರಿಸಿದೆ. ಕಳೆದ ಒಂದು ದಶಕದಲ್ಲಿ ವೆನಿಜುವೇಲಾದಲ್ಲಿ ಬೀಸತೊಡಗಿದ ಪರಿವರ್ತನೆಯ ಗಾಳಿ ಇಡೀ ದಕ್ಷಿಣ ಅಮೆರಿಕಾವನ್ನು ಆವರಿಸಿದೆ. ಐದು ನೂರು ವರ್ಷಗಳ ಅಮೆರಿಕ ಮತ್ತು ಐರೋಪ್ಯ ದೇಶಗಳ ಆಧಿಪತ್ಯ ಮತ್ತು ಶೋಷಣೆಯನ್ನು ಮೆಟ್ಟಿನಿಂತು ಹೊಸ ಆರ್ಥಿಕ ನೀತಿಯನ್ನು ಅನುಸರಿಸಲು ಅಡಿ ಇರಿಸಿವೆ. ಒಂದಾದ ಮೇಲೊಂದು ದಕ್ಷಿಣ ಅಮೆರಿಕದ ದೇಶಗಳಲ್ಲಿ ಎಡ ಮತ್ತು ಪ್ರಗತಿಪರ ಸರಕಾರಗಳು ಅಸ್ತಿತ್ವಕ್ಕೆ ಬಂದು ಹೊಸ ಹಾದಿಯಲ್ಲಿ ಅಡಿ ಇರಿಸತೊಡಗಿವೆ. ಅಮೆರಿಕ ಮತ್ತು ಪಾಶ್ಚಾತ್ಯ ದೇಶಗಳ ಮೇಲೆ ಅವಲಂಬನೆಯನ್ನು ಮೊಟಕುಗೊಳಿಸುತ್ತಾ, ತಮ್ಮೊಳಗೇ ಪರಸ್ಪರ ಸಹಕಾರದ ಮೂಲಕ ಪರ್ಯಾಯ ಆರ್ಥಿಕ ವ್ಯವಸ್ಥೆಯನ್ನು ರೂಪಿಸಲು ಸನ್ನದ್ಧವಾಗಿವೆ. ಈ ದಾರಿ ಸುಗಮವೇನಲ್ಲ, ಸಾಮ್ರಾಜ್ಯಶಾಹಿ ದೇಶಗಳು ತಮ್ಮ ಹಿತಾಸಕ್ತಿಗಳಿಗೆ ಒದಗುತ್ತಿರುವ ವಿಪತ್ತನ್ನು ಎದುರಿಸಲು ನಾನಾ ಬಗೆಯ ತಂತ್ರಗಾರಿಕೆಯನ್ನು ಅನುಸರಿಸುತ್ತವೆ. ಶತಮಾನಗಳ ಕಾಲ ನಡೆಸಿರುವ ಶೋಷಣೆಯನ್ನು ಅವು ಸುಲಭವಾಗಿ ಬಿಟ್ಟುಕೊಡುವುದಿಲ್ಲ. ಎಲ್ಲ ದೇಶಗಳಲ್ಲಿಯೂ ಅವರಿಗೆ ಅನುಕೂಲವಾಗಿರುವ ಭಂಟರುಗಳಿದ್ದಾರೆ ಎಂಬುದನ್ನು ಮರೆಯುವಂತಿಲ್ಲ. ಈ ಭೂಭಾಗದ ನೈಸರ್ಗಿಕ ಸಂಪತ್ತನ್ನು ಸೂರೆ ಮಾಡಿರುವ ಕಾರ್ಪೊರೇಟ್ ಪ್ರಭೃತಿಗಳು ತಮ್ಮ ಸರಕಾರಗಳ ಬೆಂಬಲದಿಂದ ಒಡ್ಡುವ ಅಡ್ಡಿಗಳು ಒಂದಲ್ಲ ಎರಡಲ್ಲ, ನಾನಾ ಬಗೆಯವು. ಆದರೆ ಈ ಎಲ್ಲ ಅಡ್ಡಿಗಳನ್ನು ಎದುರಿಸಿ ಪ್ರಗತಿಪರ ಶಕ್ತಿಗಳು ಮುನ್ನಡೆ ಸಾಧಿಸುವುದರಲ್ಲಿ ಸಂಶಯವಿಲ್ಲ. ವೆನೆಜುವೇಲದಲ್ಲಿ ಚಾವೆಜ್ ಮತ್ತೆ ಅಧಿಕಾರದ ಚುಕ್ಕಾಣಿ ಹಿಡಿಯುತ್ತಿರುವುದು ಅದರ ಸಂಕೇತ ಎಂದರೆ ತಪ್ಪಾಗದು. ಈ ಬದಲಾವಣೆಗಳಿಗೆ ಒತ್ತಾಸೆಯಾಗಿ ಕೆರೆಬ್ಬಿಯನ್‌ನ ದೇಶ ಫೀಡೆಲ್ ಕ್ಯಾಸ್ಟ್ರೋರ ಕ್ಯೂಬಾ ಇದೆ. ಅಮೆರಿಕ ನೆರೆಯಲ್ಲೇ ಇದ್ದುಕೊಂಡು ಕ್ಯೂಬಾ ಎಲ್ಲ ಕಷ್ಟನಷ್ಟಗಳನ್ನು ಎದುರಿಸಿ ಮುಂದುವರಿಯುತ್ತಿರುವುದು ದಕ್ಷಿಣ ಅಮೆರಿಕದ ದೇಶಗಳಿಗೆ ಮಾದರಿಯಾಗಿದೆ.

ಶತಮಾನಗಳಿಂದ ಅಮೆರಿಕದ ಹಿತ್ತಲು ಎಂದೇ ದಕ್ಷಿಣ ಅಮೆರಿಕ ಕರೆಯಲ್ಪಡುತ್ತಿತ್ತು. ಅದರ ನೈಸರ್ಗಿಕ ಸಂಪನ್ಮೂಲಗಳ

ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ

**ಸಮಾಲೋಚಕ ಮಂಡಲಿ**

ಟಿ. ಆರ್. ಅನಂತರಾಮು
ಎಚ್. ಎಸ್. ಗೋಪಾಲ ರಾವ್
ಸಿ. ಆರ್. ಚಂದ್ರಶೇಖರ್
ವಿ. ಚಂದ್ರಶೇಖರ ನಂಗಲಿ
ಜಿ. ನಾಗಕುಮಾರ್
ನೇಮಿಚಂದ್ರ
ಪ್ರಕಾಶ್ ಸಿ. ರಾವ್
ಬರಗೂರು ರಾಮಚಂದ್ರಪ್ಪ
ಕೆ. ಮರುಳಸಿದ್ದಪ್ಪ
ಮುರಳೀಧರ್
ವಿಜಯಾ
ಎಲ್. ಹನುಮಂತಯ್ಯ

**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೫೦/- |
| ಮೂರು ವರ್ಷಕ್ಕೆ | ರೂ. ೩೫೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು - ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೦೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨

ಮೇಲೆ ಪಾಶ್ಚಾತ್ಯದೇಶಗಳ ಹಿಡಿತ ಶಾಶ್ವತ ಎಂದೇ ಪರಿಗಣಿಸಲಾಗಿತ್ತು. ಈ ಹಿಡಿತದಿಂದ ಬಿಡಿಸಿಕೊಳ್ಳಲು ನಡೆದ ಪ್ರಯತ್ನಗಳೆಲ್ಲ ಸಾಮ್ರಾಜ್ಯಶಾಹಿ ದಬ್ಬಾಳಿಕೆಯಿಂದ ವಿಫಲಗೊಳ್ಳುತ್ತಿತ್ತು. ಚಿಲಿಯಲ್ಲಿ ಅಲೆಂಡೆ ಸರಕಾರದ ದುರಂತದ ಇತಿಹಾಸ ನಮ್ಮ ಮುಂದಿದೆ. ಕ್ಯೂಬಾದಲ್ಲಿ ಸಮಾಜವಾದಿ ಪಥದಲ್ಲಿ ಅಡಿಯಿರಿಸಿದ ಕ್ಯಾಸ್ಟ್ರೋ ಸರಕಾರವನ್ನು ಮಣಿಸಲು ಅಮೇರಿಕ ನಡೆಸಿದ ಪ್ರಯತ್ನಗಳ ನಿದರ್ಶನ ಇದೆ. ಈಗಲೂ ಕ್ಯೂಬಾದ ಮೇಲೆ ಆರ್ಥಿಕ ದಿಗ್ಬಂಧನ ಮುಂದುವರಿಯುತ್ತಿದೆ. ಈಗ ಕ್ಯೂಬಾ ಏಕಾಂಗಿಯಾಗಿಲ್ಲ, ದಕ್ಷಿಣ ಅಮೇರಿಕದ ದೇಶಗಳು ಅದರ ಬೆಂಬಲಕ್ಕಿವೆ. ಆದರಿಂದ ಸ್ಫೂರ್ತಿ ಪಡೆದಿವೆ. ೧೯೯೮ರಲ್ಲಿ ವೆನೆಜುವೇಲದಲ್ಲಿ ಹ್ಯೂಗೋ ಚಾವೆಜ್ ಅಧ್ಯಕ್ಷೀಯ ಚುನಾವಣೆಗಳಲ್ಲಿ ಜಯ ಗಳಿಸಿದಾಗಲೇ ಬದಲಾವಣೆಯ ಗಾಳಿ ಬೀಸಲಾರಂಭಿಸಿತು. ಎಲ್ಲ ಪ್ರತಿರೋಧಗಳನ್ನು ಎದುರಿಸಿ ಜಯ ಗಳಿಸಿದ ಚಾವೆಜ್ ಮೊದಲು ಮಾಡಿದ ಸುಧಾರಣೆ ಎಂದರೆ ಅಮೇರಿಕದ ಮೇಲೆ ಆರ್ಥಿಕ ಅವಲಂಬನೆಯನ್ನು ಮೊಟಕುಗೊಳಿಸುವುದು. ಪ್ರಪಂಚದಲ್ಲೇ ಅತ್ಯಧಿಕ ತೈಲ ನಿಕ್ಷೇಪ ಹೊಂದಿರುವ ವೆನೆಜುವೇಲ ತನ್ನ ಉತ್ಪಾದನೆಯಲ್ಲಿ ಬಹುಭಾಗವನ್ನು ಅಮೇರಿಕದ ಮಾರುಕಟ್ಟೆಗೇ ಒದಗಿಸುತ್ತಿತ್ತು. ಈ ಗುತ್ತೇದಾರಿಯನ್ನು ತೊಡೆದು ಹಾಕಿ ಮಾರುಕಟ್ಟೆಯನ್ನು ವಿಸ್ತರಿಸಿದ್ದು ಮೊದಲ ಹೆಜ್ಜೆ. ಇಡೀ ದಕ್ಷಿಣ ಅಮೇರಿಕದ ದೇಶಗಳಿಗೆ ಮಾರ್ಗದರ್ಶಿಯಾಗಿ ಪರಿವರ್ತನೆಯ ಹಾದಿ ರೂಪಿಸಲು ಚಾವೆಜ್ ನಡೆಸಿದ ಪ್ರಯತ್ನಕ್ಕೆ ದೊರೆತ ಬೆಂಬಲ ಅಪಾರ. ಅಮೇರಿಕದ ಅರ್ಥಸೂಚಿಗೆ ಪರ್ಯಾಯ ಸೂತ್ರ ಸಿದ್ಧವಾಯಿತು. ಸಹಜವಾಗಿಯೇ ಇದು ಅಮೇರಿಕದ ಅಧಿಪತಿಗಳಿಗೆ ಆಕ್ರೋಶವನ್ನು ತಂದಿತು. ದಕ್ಷಿಣ ಅಮೇರಿಕದ ದೇಶಗಳು ಈ ಒಂದು ದಶಕದಲ್ಲಿ ಎಷ್ಟುಮಟ್ಟಿಗೆ ಅಮೇರಿಕಾಗೆ ಸವಾಲಾಗಿ ನಿಂತಿವೆ ಎನ್ನುವುದಕ್ಕೆ ಇತ್ತೀಚಿನ ಒಂದು ಉದಾಹರಣೆ, ವಿಕಿಲೀಕ್ಸ್‌ನ ಜೂಲಿಯನ್ ಅಸಾಂಜ್‌ಗೆ ದಕ್ಷಿಣ ಅಮೇರಿಕದ ಪುಟ್ಟ ದೇಶ ಪೆರಗ್ವೆ ನೀಡಿದ ಆಶ್ರಯಕ್ಕೆ ವ್ಯಕ್ತವಾದ ಬೆಂಬಲ. ಅಮೇರಿಕ ಖಂಡದ ರಾಷ್ಟ್ರಗಳ ಸಂಸ್ಥೆಯಲ್ಲಿ ಅಮೇರಿಕ ಮತ್ತು ಕೆನಡಾಗಳು ಏಕಾಂಗಿಯಾದುವು.

ಚಾವೆಜ್ ನಡೆದಿರುವ ಹಾದಿ ಸುಗಮವೇನಲ್ಲ. ಚುನಾವಣೆಗೆ ಮುನ್ನ ೧೯೯೪ರಲ್ಲಿ ಚಾವೆಜ್ ಕ್ಯೂಬಾಗೆ ಭೇಟಿ ನೀಡಿ ಫೀಡೆಲ್ ಕ್ಯಾಸ್ಟ್ರೋ ಮತ್ತು ಇತರ ನಾಯಕರನ್ನು ಭೇಟಿಯಾಗಿದ್ದರು. ಆಗಿನಿಂದ ಅವರು ಕ್ಯಾಸ್ಟ್ರೋ ಜೊತೆ ನಿಕಟವಾದ ಸಂಪರ್ಕದಲ್ಲಿದ್ದಾರೆ. ಅವರು ಅನಾರೋಗ್ಯದಿಂದ ಬಳಲುತ್ತಿದ್ದಾಗ ಯಶಸ್ವಿಯಾಗಿ ಚಿಕಿತ್ಸೆ ನೀಡಿದವರೂ ಕ್ಯೂಬಾದ ಡಾಕ್ಟರುಗಳೇ. ಅವರು ವೆನೆಜುವೇಲ ಅಧ್ಯಕ್ಷ ಪದವಿಗೆ ಬಂದಮೇಲೆ ಸರಕಾರ ಉರುಳಿಸಲು ನಡೆಸಿದ ಪ್ರಯತ್ನಗಳು ಹಲವು. ೨೦೦೨ರ ಏಪ್ರಿಲ್‌ನಲ್ಲಿ ಚಾವೆಜ್ ಸರಕಾರ ಬಿದ್ದುಹೋಗುವ ಸ್ಥಿತಿಯನ್ನು ತಲುಪಿತ್ತು. ಚಾವೆಜ್ ಇದ್ದ ಅಧ್ಯಕ್ಷೀಯ ಅರಮನೆ ಕ್ಷಿಪ್ರಕ್ರಾಂತಿಯಿಂದ ಸುತ್ತುವರಿಯಲ್ಪಟ್ಟಿತ್ತು. ಸರಕಾರವನ್ನು ಪತನಗೊಳಿಸಲು, ಚಾವೆಜ್ ಹತ್ಯೆಗೈಯ್ಯಲು ಅಮೇರಿಕ ಸುಮಾರು ೩೦೦ ಬಿಲಿಯನ್ ಡಾಲರುಗಳನ್ನು ಚೆಲ್ಲಿತ್ತು. ಮಿಲಿಟರಿ ಅಧಿಕಾರಿಗಳು ಈ ಕ್ಷಿಪ್ರಕ್ರಾಂತಿಯ ನೇತಾರರಾಗಿದ್ದರು. ವಸ್ತುಶಃ ಚಾವೆಜ್ ಗೃಹಬಂಧನದಲ್ಲಿದ್ದರು. ಟೆಲಿವಿಷನ್‌ಗಳು ಚಾವೆಜ್ ರಾಜೀನಾಮೆ ನೀಡಿದ್ದಾರೆ ಎಂಬ ಸುಳ್ಳು ಸುದ್ದಿಯನ್ನು ಪ್ರಸಾರ ಮಾಡಿದ್ದುವು. ಚಾವೆಜ್‌ರ ಪುತ್ರಿ ಕೂಡಲೆ ಕ್ಯಾಸ್ಟ್ರೋ ಅವರನ್ನು ಸಂಪರ್ಕಿಸಿ ಪರಿಸ್ಥಿತಿ ವಿವರಿಸಿದರು. ಯಾವುದೇ ಕಾರಣಕ್ಕೂ ಚಾವೆಜ್ ಸೇನಾಧಿಕಾರಿಗಳಿಗೆ ಮಣಿಯಕೂಡದು ಎಂದು ಸಲಹೆ ನೀಡಿದರು. ಬೇರೆ ಬೇರೆ ದೇಶಗಳ ಅಧಿಪತಿಗಳನ್ನು ಸಂಪರ್ಕಿಸಿ ಕ್ಯಾಸ್ಟ್ರೋ ಅವರು ಚಾವೆಜ್‌ಗೆ ಬೆಂಬಲ ಕೊಡಿಸಿದರು. ಈ ಸಂದರ್ಭದಲ್ಲಿ ಕ್ಯಾಸ್ಟ್ರೋ ಅನಾರೋಗ್ಯದಿಂದ ಆಸ್ಪತ್ರೆಯಲ್ಲಿದ್ದರು. ಆದರೂ ಅವರು ಕ್ಷಿಪ್ರಕ್ರಾಂತಿಯನ್ನು ಮಣ್ಣುಗೂಡಿಸಲು ಪ್ರಯತ್ನಿಸಿ ಸಫಲರಾದರು. ಚಾವೆಜ್ ಬಂಧಮುಕ್ತರಾಗಿ ಪಾರಾದರು. ಈ ಪ್ರಕರಣವನ್ನು ಇಲ್ಲಿ ನೆನಪಿಸಿಕೊಳ್ಳುವುದಕ್ಕೆ ಕಾರಣ ಬದಲಾವಣೆಯ ಹಾದಿಯಲ್ಲಿರುವ ದಕ್ಷಿಣ ಅಮೇರಿಕದ ದೇಶಗಳು ಕಟ್ಟೆಚ್ಚರದಿಂದ ಇರಬೇಕೆಂಬುದನ್ನು ಸೂಚಿಸುವುದಕ್ಕಾಗಿ. ಸಾಕಷ್ಟು ಹಣಬಲ, ಜನಬಲ ಹೊಂದಿರುವ ಸಾಮ್ರಾಜ್ಯಶಾಹಿಗಳು ತಮ್ಮ ಪ್ರಯತ್ನಗಳನ್ನು ಎಂದೂ ಕೈಬಿಡುವುದಿಲ್ಲ. ದಕ್ಷಿಣ ಅಮೇರಿಕದ ದೇಶಗಳು ಪರ್ಯಾಯ ಪಥದಲ್ಲಿ ಅಡಿ ಇರಿಸುತ್ತಿರುವುದು ಸ್ವಾಗತಾರ್ಹ. ಅದಕ್ಕೆ ಎಲ್ಲ ಯಶಸ್ಸನ್ನೂ ಹಾರೈಸೋಣ. ಈ ರಾಷ್ಟ್ರಗಳು ಇತರ ದೇಶಗಳಿಗೂ ಮಾದರಿಯಾಗಬಲ್ಲವು. ಭಾರತ ಮತ್ತು ಇತರ ಅಭಿವೃದ್ಧಿಶೀಲ ದೇಶಗಳು ಇದರಿಂದ ಪಾಠ ಕಲಿಯಬೇಕಾಗಿದೆ. ಅಮೇರಿಕದ ಬಾಲಂಗೋಚಿಯಾದರೆ ಉಳಿಗಾಲವಿಲ್ಲ. ಆರ್ಥಿಕ ಬಿಕ್ಕಟ್ಟು, ನಿರುದ್ಯೋಗ, ಬಡತನ, ಹೆಚ್ಚುತ್ತಿರುವ ವರಮಾನದ ಅಂತರ ಮುಂತಾದ ಪಿಡುಗುಗಳಿಂದ ಪರಿತಪಿಸುತ್ತಿರುವ ಬಂಡವಾಳಶಾಹಿ ವ್ಯವಸ್ಥೆಗೆ ಪರ್ಯಾಯ ಇದ್ದೇ ಇದೆ. ಆ ಹಾದಿಯಲ್ಲಿ ಕ್ರಮಿಸಲು ಅಡಿ ಇರಿಸಬೇಕಷ್ಟೆ.

## ಟುಟು ಹೇಳಿದ್ದು ಕೇಳಿದಿರಾ ?

ನಮ್ಮ ದೇಶದಲ್ಲಿ ವಿವಿಧ ಮತಧರ್ಮಗಳ ನೇತಾರರು ಎಷ್ಟಿರಬಹುದು? ಜುಜುಬಿ ಸಾಧು-ಸನ್ಯಾಸಿಗಳನ್ನು ಬಿಡಿ, ಕೇವಲ ಮಠ ಮಾನ್ಯಗಳನ್ನು ಹೊಂದಿರುವವರನ್ನು ಮಾತ್ರ ಲೆಕ್ಕಕ್ಕೆ ತೆಗೆದುಕೊಂಡರೆ ಮೂರು ಲಕ್ಷ ಮಂದಿಯಾದರೂ ಇದ್ದಾರೆ. ರಾಮಕೃಷ್ಣ ಮಠ, ಪುರಿ ಮಠ, ಕಂಚಿ -ಪೇಜಾವರ-ಶೃಂಗೇರಿ, ಧರ್ಮಸ್ಥಳ, ರೋಮನ್ ಕ್ಯಾಥೊಲಿಕ ಚರ್ಚ್ ಮತ್ತು ಇತರ ಚರ್ಚುಗಳು, ಜುಮ್ಮಾ ಮಸೀದಿಗಳು ಹಾಗೂ ಬೇರೆ ಮಸೀದಿಗಳು, ಗುರುದ್ವಾರಗಳು, ಜೈನ ಮತ್ತು ಬೌದ್ಧ ವಿಹಾರಗಳು, ಹೀಗೆ ಲೆಕ್ಕ ಹಾಕಲಾಗದಷ್ಟು ಇವೆ. ನಮ್ಮ ರಾಜ್ಯದಲ್ಲಿ ಸುತ್ತೂರು, ಸಿದ್ದಗಂಗೆ, ಸಿರಿಗೆರೆ, ಚುಂಚನಗಿರಿ, ಮುಂತಾದ ಬೃಹತ್ ಮಠಗಳಿವೆ. ಈವರೆಗೆ ಇವೆಲ್ಲವುಗಳ ಸೆನ್ಸಸ್ ನಡೆದಿಲ್ಲ. ಅದೇನಾದರೂ ನಡೆದು ಸ್ಥೂಲವಾಗಿ ಅವುಗಳೆಲ್ಲದರ ಆಸ್ತಿ ಲೆಕ್ಕ ಹಾಕಿದರೆ ಸರ್ಕಾರಿ ವಿಭಾಗಗಳಾದ ರೈಲ್ವೆ ಮತ್ತು ಟೆಲಿಫೋನ್ ಎರಡನ್ನು ಸೇರಿಸಿದರೆ ಆಗುವ ಮೊತ್ತಕ್ಕಿಂತ ಕಡಿಮೆ ಇರುವುದಿಲ್ಲ.

ಇವರು ಮತ್ತು ಇವರ ಆಸ್ತಿ ಧಾರ್ಮಿಕವಾಗಿ ಏನು ಕೊಡುಗೆ ನೀಡಿವೆ ಅಥವಾ ನೀಡಿಲ್ಲ ಎಂಬ ಜಿಜ್ಞಾಸೆ ಸದ್ಯಕ್ಕೆ ಬೇಡ. ಆ ಬಗ್ಗೆ ಅನೇಕ ಸಂಶೋಧನಾ ಮಹಾಪ್ರಬಂಧಗಳೇ ಇವೆ. ಚುನಾವಣೆಗಳ ನಿಯಂತ್ರಣವನ್ನು ಸಾಮಾಜಿಕ ಚಟುವಟಿಕೆ ಎನ್ನುವಂತಿಲ್ಲ. ಶೈಕ್ಷಣಿಕವಾಗಿ ಬೇಕಾದಷ್ಟು ಸಂಸ್ಥೆಗಳನ್ನು ನಡೆಸುತ್ತಿವೆ, ವಿದ್ಯಾರ್ಥಿನಿಲಯಗಳನ್ನು ನಡೆಸುತ್ತಿವೆ. ವಿದೇಶಗಳಲ್ಲಿ ಮೆಡಿಕಲ್ ಕಾಲೇಜು ತೆರೆದಿರುವ ಮಠಗಳೂ ಇವೆ. ಇಲ್ಲಿ ಕ್ಯಾಪಿಟೇಷನ್ ಕಾಲೇಜುಗಳಿಗೆ ಲೆಕ್ಕವಿಲ್ಲ. ಸ್ವಜನ, ಸ್ವಧರ್ಮ, ಎಂದೆಲ್ಲಾ ಹಲವು ಪ್ರಜಾಪ್ರಭುತ್ವ ವಿರೋಧಿ ಚಟುವಟಿಕೆಗಳೂ ಉಂಟು.

ಇಷ್ಟೊಂದು ದೊಡ್ಡ ಸ್ವಾಮಿ - ಸೈನ್ಯಗಳಲ್ಲಿ ಒಬ್ಬನೇ ಒಬ್ಬನಾದರೂ ಡೆಸ್ಮಂಡ್ ಟುಟುವಿಗೆ ಸಮಾನವಾಗಿ ನಿಲ್ಲಬಲ್ಲಂಥವರಿಲ್ಲವಲ್ಲಾ ಎಂದು ಮರುಗಬೇಕಾಗಿದೆ. ಯಾವ ನರಮೇಧವನ್ನೂ ಖಂಡಿಸುವ ಗೋಜಿಗೆ ಹೋಗದ ಇವರಲ್ಲಿ ಕೆಲವರು ರವಿಶಂಕರನಂತೆ ವಿಶ್ವಶಾಂತಿಯ ಮಾತನಾಡುತ್ತಾರೆ, ರೈತರ ಭೂಮಿ ಕಬಳಿಸುತ್ತಾರೆ. ಮಾನವ ಧರ್ಮದ ಪರವಾಗಿ ಇವರೇಕೆ ಸೊಲ್ಲೆತ್ತುವುದಿಲ್ಲ? ಯಾರೋ ಕೆಲವರು ಎತ್ತುತ್ತಾರೆಂಬುದು ಸಮಾಧಾನದ ವಿಷಯ. ಆದರೆ ಸಾಲದು.

ಡೆಸ್ಮಂಡ್ ಟುಟು ಒಬ್ಬ ಕರಿಯ ಆರ್ಚ್‌ಬಿಷಪ್, ದಕ್ಷಿಣ-ಆಫ್ರಿಕಾದವನು. ನೊಬೆಲ್ ಶಾಂತಿ ಪುರಸ್ಕಾರ ಪಡೆದಿದ್ದಾನೆಂಬುದು ಗೌಣ. ಏಕೆಂದರೆ ಒಬಾಮಾ ಸಹ ಪಡೆದಿದ್ದಾನೆ. ಬಿಳಿಯರ ದೌರ್ಜನ್ಯಗಳ ವಿರುದ್ಧ, ಸಾಮ್ರಾಜ್ಯಶಾಹಿ ಪಾತಕಗಳ ವಿರುದ್ಧ, ವರ್ಣಭೇದದ ವಿರುದ್ಧ ಈತನ ಹೋರಾಟ ಅನನ್ಯವಾದ್ದು. ಈಚೆಗೆ ದಕ್ಷಿಣ ಆಫ್ರಿಕಾದಲ್ಲಿ ಜಾಗತಿಕ ಮಟ್ಟದ ನಾಯಕರ ಶೃಂಗಸಭೆ ನಡೆಯಿತು. ಸಹಜವಾಗಿ ಟುಟುವಿಗೂ ಆಹ್ವಾನವಿತ್ತು. ಆದರೆ ಆತ ಆಹ್ವಾನವನ್ನು ನಿರಾಕರಿಸಿದ. ತನಗೆ ಅಗ್ರಸ್ಥಾನ ನೀಡಲಿಲ್ಲವೆಂದಲ್ಲ, ಆದರೆ ಬ್ರಿಟನ್ನಿನ ಮಾಜಿ ಪ್ರಧಾನಿ ಟೋನಿ ಬ್ಲೇರ್‌ನಂತಹ ದ್ರೋಹಿಯನ್ನು, ಕೊಲೆ ಪಾತಕನನ್ನು, ಆಹ್ವಾನಿಸಿದ್ದುದಕ್ಕಾಗಿ. ಅಂತಹ ಜೀವವಿರೋಧಿಯೊಡನೆ ತಾನು ವೇದಿಕೆ ಹಂಚಿಕೊಳ್ಳಲು ಸಿದ್ಧನಿಲ್ಲವೆಂದು ಟುಟು ಕಡ್ಡಿಮುರಿದಂತೆ ಮಾತನಾಡಿದ. ಅವನ ಮಾತುಗಳು ಮನನಯೋಗ್ಯವಾಗಿವೆ:

''ಬ್ಲೇರ್ ಮತ್ತು ಅಮೇರಿಕಾದ ಮಾಜಿ ಅಧ್ಯಕ್ಷ ಬುಷ್ ಇಬ್ಬರನ್ನೂ ಅಂತರರಾಷ್ಟ್ರೀಯ ಯುದ್ಧಾಪರಾಧಗಳನ್ನು ತನಿಖೆ ಮಾಡುವ ಟ್ರಿಬ್ಯುನಲ್‌ಗೆ ಒಪ್ಪಿಸಬೇಕು: ಇರಾಕಿನಲ್ಲಿ ಅವರು ನಡೆಸಿದ ಕೊಲೆಗಳಿಗಾಗಿ. ಇರಾಕ್ ಯುದ್ಧವು ಇಡೀ ವಿಶ್ವವನ್ನು ಇಬ್ಭಾಗ ಮಾಡಿಬಿಟ್ಟಿತು, ಅಸ್ಥಿರ ಮಾಡಿಬಿಟ್ಟಿತು. ಅವರಿಬ್ಬರೂ ಆಟದ ಮೈದಾನದ ಗೂಂಡಾಗಳಂತೆ ವರ್ತಿಸಿದರು. ಈಗಂತೂ ನಾವು ಪ್ರಪಾತದಂಚಿಗೆ ತಳ್ಳಲ್ಪಟ್ಟಿದ್ದೇವೆ. ಇರಾನ್ ಮತ್ತು ಸಿರಿಯಾ ಅದನ್ನು ಸೂಚಿಸುತ್ತಿವೆ. ಇರಾಕಿನಲ್ಲಿ ಇವರು ೨೦೦೩ರಿಂದ ಒಂದು ಲಕ್ಷ ಹತ್ತು ಸಾವಿರ ಮಂದಿಯನ್ನು ಕೊಂದಿದ್ದಾರೆ. ಜಿಂಬಾಬ್ವೆಯ ಅಧ್ಯಕ್ಷ ಮುಗಾಬೆಯನ್ನು ಅಂತರರಾಷ್ಟ್ರೀಯ ನ್ಯಾಯಾಲಯದ ತನಿಖೆಗೆ ಗುರಿಮಾಡಬೇಕೆನ್ನುತ್ತಾರೆ ಇವರು ! ಇವರ ತನಿಖೆ ನಡೆಸುವವರು ಯಾರು? ಇವರಿಗೆ ಶಿಕ್ಷೆ ಏನು? ಅಂತಹ ಪಾತಕಿ ಬ್ಲೇರ್‌ಗೆ ಆಹ್ವಾನವೇ ಒಂದು ಕಟುವ್ಯಂಗ್ಯ.''

ಈ ತಿಂಗಳು (೩ನೇ ಪುಟದಿಂದ)

ಪಕ್ಷ ಭಾಗಿಯಾಗಿದ್ದರೆ, ಈಗ ಲಂಚಾವತಾರ ನೇರವಾಗಿ ಕಾಂಗ್ರೆಸ್ ಪಾಳೆಯದಲ್ಲೇ ತಲೆ ಎತ್ತಿದೆ. ಈ ಹಿಂದೆ ಇರಲಿಲ್ಲ ಅಂತೇನೂ ಇಲ್ಲ, ಏಕೆಂದರೆ ಅದನ್ನು ಪೋಷಿಸಿ ಬೆಳೆಸಿದ್ದೇ ಕಾಂಗ್ರೆಸ್ ಪಕ್ಷ ಆರು ದಶಕಗಳ ಕಾಲಾವಧಿಯಲ್ಲಿ. ಟೆಲಿಕಾಂ ಹಗರಣದಲ್ಲಿ ಹಣಕಾಸು ಸಚಿವ ಪಿ. ಚಿದಂಬರಂ ಪಾತ್ರ ಎಷ್ಟೇ ಭದ್ರವಾಗಿ ಮುಚ್ಚಿಹಾಕಿದರೂ ಮತ್ತೆ ಮತ್ತೆ ಮೇಲೇಳುತ್ತಿದೆ. ಭಂಡತನದಿಂದ ಆತ ಕುರ್ಚಿಯಲ್ಲಿ ಉಳಿದುಕೊಂಡಿದ್ದಾರೆ. ಇದೀಗ ಭ್ರಷ್ಟಾಚಾರದ ಹೊಲಸು ಕಾಂಗ್ರೆಸ್ ಅಧ್ಯಕ್ಷೆ ಸೋನಿಯಾ ಗಾಂಧಿ ಮನೆಯ ಬಾಗಿಲಲ್ಲೇ ಹರಡಿಕೊಂಡಿದೆ. ಆಕೆಯ ಅಳಿಯ ರಾಬರ್ಟ್ ವದ್ರ ಈಗ ಭೂಹಗರಣದಲ್ಲಿ ಸಿಕ್ಕಿಕೊಂಡಿದ್ದಾನೆ. ಈಗೆಲ್ಲ ವ್ಯವಹಾರ ಸಾವಿರ ಸಾವಿರ ಕೋಟಿಗಳಲ್ಲೇ. ಈತ ದಿಢೀರ್ ಶ್ರೀಮಂತನಾಗಿ ಬಿಟ್ಟಿದ್ದಾನಂತೆ. ಭೂಹಗರಣದಲ್ಲಿ ಏಕಾಏಕಿ ಸಾವಿರಾರು ಕೋಟಿ ರೂಪಾಯಿ ಸಂಪಾದಿಸಿದ್ದಾನೆಂಬ ಆರೋಪ ಎದುರಿಸುತ್ತಿದ್ದಾನೆ. ಕೆಲದಿನಗಳಿಂದ ಈ ಗಾಂಧಿ ಕುಟುಂಬದ ಆಸಾಮಿ ರಾಜಕೀಯ ಪ್ರವೇಶಿಸುವ ವದಂತಿ ಕೇಳಿಬರುತ್ತಿತ್ತು. ಪ್ರಾಯಶಃ ಈ ಪ್ರಕರಣ ಅದಕ್ಕೆ ಸಿದ್ಧತೆ ಏನೋ! ಈ ಪ್ರಕರಣದ ಹಿಂದೆಯೇ ಬೆಳಗಾದರೆ ಎಲ್ಲ ಎಲೆಕ್ಟ್ರಾನಿಕ್ ಮಾಧ್ಯಮಗಳಲ್ಲಿ ಕಾಣಿಸಿಕೊಳ್ಳುವ ಬಿಳಿತಲೆಯ ನಿಷ್ಠಾವಂತ ಕಾಂಗ್ರೆಸ್ ವಕ್ತಾರ ಕಾನೂನು ಸಚಿವ ಸಲ್ಮಾನ್ ಖುರ್ಷಿದ್‌ರ ಅವ್ಯವಹಾರ ಬೆಳಕಿಗೆ ಬಂದಿದೆ. ಈತನ ಮಡದಿ ನಡೆಸುತ್ತಿರುವ ಸರಕಾರಿಯೇತರ ಸಂಸ್ಥೆಯೊಂದು ಕೋಟ್ಯಂತರ ರೂಪಾಯಿ ಲಪಟಾಯಿಸಿದೆ ಎಂಬ ಆಪಾದನೆ ಬಂದಿದೆ. ಇನ್ನು ಯಾವ ಯಾವ ಹಗರಣಗಳು ಬೆಳಕಿಗೆ ಬರುತ್ತವೋ ನೋಡೋಣ!

✷ ✷ ✷

ಎರಡು ಸಾವಿರದ ಇಪ್ಪತ್ತನೇ ವರ್ಷದಲ್ಲಿ ನಮ್ಮ ಭಾರತ ದೇಶ ಸರ್ವಾಂಗೀಣ ಪ್ರಗತಿ ಸಾಧಿಸಿ ಪ್ರಪಂಚದಲ್ಲಿ ಅಗ್ರಪಂಕ್ತಿಯಲ್ಲಿರುವುದು ಎಂಬುದಾಗಿ ಆಡಳಿತಾರೂಢ ಪಕ್ಷದ ನಾಯಕರುಗಳು ಹೇಳಿಕೊಂಡು ತಿರುಗಾಡುತ್ತಿದ್ದಾರೆ. ಇವರು ಯಾವ ಲೆಕ್ಕಾಚಾರದ ಮೇಲೆ ಭವಿಷ್ಯ ಹೇಳುತ್ತಿದ್ದಾರೊ ಗೊತ್ತಾಗುತ್ತಿಲ್ಲ. ಪ್ರಾಯಶಃ ಸಮೀಪದಲ್ಲೆ, ಜಗತ್ಪ್ರಳಯ ಸಂಭವಿಸುವುದೆಂದು ಕೆಲ ಜ್ಯೋತಿಷಿಗಳ ಭವಿಷ್ಯ ನುಡಿಯಂತೆ ಇದೂ ಕೂಡ ಭಾರಿ ಬುರುಡೆಯೇನೊ! ವಸ್ತುಸ್ಥಿತಿ ನೋಡಿದರೆ ಹಾಗೆನಿಸದಿರದು. ಏಕೆಂದರೆ ಬೆಳವಣಿಗೆ ನಿರೀಕ್ಷಿಸಿದ ಪ್ರಮಾಣಕ್ಕಿಂತ ತೀರಾ ಕೆಳಗಿಳಿದಿದೆ. ಬಂಡವಾಳಶಾಹಿ ವ್ಯವಸ್ಥೆಯನ್ನು ಸ್ಥಾಪಿಸಲು ದಾಪುಗಾಲು ಇರಿಸುತ್ತಿರುವ ಈ ದೇಶ ಅದಕ್ಕಾಗಿ ವಿದೇಶಿ ಬಂಡವಾಳದ ಮೊರೆ ಹೋಗಿದೆ. ಸರಕಾರದ ನೀತಿಗಳು ಅದಕ್ಕೆ ಮೆರುಗು ನೀಡಲು ಏನೇ ಪ್ರಯತ್ನಗಳನ್ನು ನಡೆಸುತ್ತಿದ್ದರೂ ಈ ದೇಶ ಇನ್ನೂ ಪಾಳೆಯಗಾರಿ ವ್ಯವಸ್ಥೆಯಿಂದ ಹೊರಬಂದಿಲ್ಲ. ನಗರ ಪ್ರದೇಶಗಳನ್ನು ಬಿಟ್ಟರೆ, ಉಳಿದಂತೆ ಗ್ರಾಮೀಣ ಪ್ರದೇಶಗಳಲ್ಲಿ ಸಂಪ್ರದಾಯವಾದಿ ಪಾಳೆಯಗಾರಿ ಪದ್ಧತಿಯೇ ಉಳಿದುಕೊಂಡಿದೆ. ಉತ್ತರ ಭಾರತದ ಹಲವು ಪ್ರದೇಶಗಳಲ್ಲಿ ಇದು ಎದ್ದುಕಾಣುತ್ತಿದೆ. ಹರಿಯಾಣ, ಬಿಹಾರ, ಮಧ್ಯಪ್ರದೇಶ, ಉತ್ತರಪ್ರದೇಶ, ರಾಜಾಸ್ಥಾನ ಮುಂತಾದ ಪ್ರಾಂತಗಳಲ್ಲಿ ಇಪ್ಪತ್ತೊಂದನೇ ಶತಮಾನದಲ್ಲಿ ಸಂಭವಿಸಿರುವ ಕೆಲವು ಪ್ರಕರಣಗಳನ್ನು ಪರಿಶೀಲಿಸಿದರೆ ಇದು ಗೋಚರವಾಗುತ್ತದೆ. ದಲಿತರ ಮೇಲೆ ನಡೆಯುತ್ತಿರುವ ದೌರ್ಜನ್ಯಗಳಿಗೆ ನಾವು ಅನಿವಾರ್ಯ ಎಂದುಕೊಂಡು ಹೊಂದಿಕೊಂಡು ಬಿಟ್ಟಿದ್ದೇವೇನೊ ಎನಿಸುತ್ತದೆ. ಕಾನೂನುಗಳೇನೇ ಇದ್ದರೂ ಗ್ರಾಮೀಣ ಪ್ರದೇಶಗಳಲ್ಲಿ ಬೇರು ಬಿಟ್ಟಿರುವ ಖಾಪ್ ಪಂಚಾಯತ್‌ಗಳ ಪ್ರಾಬಲ್ಯವೇ ಹೆಚ್ಚಾಗಿದೆ. ಈಚೆಗೆ ಹರಿಯಾಣ ಪ್ರಾಂತದಲ್ಲಿ ದಲಿತ ಮಹಿಳೆಯರ ಮೇಲೆ ನಡೆದಿರುವ ಅತ್ಯಾಚಾರಗಳು ಅದಕ್ಕೆ ಉದಾಹರಣೆ ಯಾಗಿವೆ. ಪ್ರೀತಿಸಿ ವಿವಾಹವಾದವರ ಕೊಲೆ ತಂದೆ ತಾಯಿಗಳು, ಬಂಧುಬಾಂಧವರಿಂದಲೇ ನಡೆದಿರುವ ಪ್ರಕರಣಗಳು ಜರುಗಿದಾಗ ನಾವು ಇನ್ನೂ ಯಾವ ಕಾಲದಲ್ಲಿದ್ದೇವೆ ಎನಿಸದಿರದು. ಇಂಥವಕ್ಕೆಲ್ಲ ಪೋಷಣೆ ನೀಡುತ್ತಿರುವವರು ಅಭಿವೃದ್ಧಿ ಮಂತ್ರ ಜಪಿಸಿ, ಮತ ಬ್ಯಾಂಕ್‌ಗಳನ್ನು ಸುರಕ್ಷಿತವಾಗಿರಿಸಿಕೊಳ್ಳಲು ನೋಡು ತ್ತಿರುವ ಅವಕಾಶವಾದಿ ರಾಜಕಾರಣಿಗಳು. ಹರಿಯಾಣದಲ್ಲಿ ನಡೆದ ಅತ್ಯಾಚಾರ ಪ್ರಕರಣಗಳ ನಿಯಂತ್ರಣಕ್ಕೆ ಹರಿಯಾಣದ ಮಾಜಿ ಮುಖ್ಯಮಂತ್ರಿ ಓಂಪ್ರಕಾಶ ಚೌತಾಲ ಸೂಚಿಸಿದ ಪರಿಹಾರ ಬಾಲ್ಯವಿವಾಹ! ಇದಕ್ಕೆ ಸಹಜವಾಗಿಯೇ ದೇಶಾದ್ಯಂತ ತೀವ್ರವಾದ ಪ್ರತಿಭಟನೆ ಬಂದಿದೆ ಸದ್ಯ. ಇಂಥ ರಾಜಕಾರಣಿಗಳು ಯಾವ ಕಾಲದಲ್ಲಿದ್ದಾರೆ ಎನ್ನಿಸುತ್ತದೆ. ಮೂಢನಂಬಿಕೆಗಳು, ಸವೆದುಹೋದ ಸಂಪ್ರದಾಯಗಳು, ಅಜ್ಞಾನ ಇವುಗಳನ್ನು ಬಳಸಿಕೊಂಡು ತಮ್ಮ ಸ್ವಾರ್ಥ ಸಾಧಿ ಸಿಕೊಳ್ಳುವವರೇ ಹೆಚ್ಚು. ಇಂದಿನ ರಾಜಕಾರಣಿಗಳಲ್ಲಿ, ವಿಕೃತ ಮನೋವೃತ್ತಿಯ ಚೌತಾಲಾಗಳು ಇನ್ನೆಷ್ಟು ಮಂದಿ ಇದ್ದಾರೋ ನಮ್ಮ ಸಮಾಜದಲ್ಲಿ.

✷ ✷ ✷

ಕರ್ನಾಟಕದ ಮಾಜಿ ಮುಖ್ಯಮಂತ್ರಿ ಯಡಿಯೂರಪ್ಪ ಸದಾ ಸುದ್ದಿಯಲ್ಲಿರುತ್ತಾರೆ. ಚಿತ್ರವಿಚಿತ್ರ ಪ್ರಕಟಣೆಗಳನ್ನು ಮಾಡುತ್ತಿರುತ್ತಾರೆ. ಇವರೇ ಕೇಸರಿ ಪಕ್ಷ ಬಿಡುತ್ತಾರೋ, ಇಲ್ಲ ಪಕ್ಷವೇ ಅವರನ್ನು ಹೊರಗೆ ಹಾಕುತ್ತದೋ ಎನ್ನುವುದು ಇನ್ನೂ ಇತ್ಯರ್ಥವಾಗಿಲ್ಲ. ದಿನನಿತ್ಯ ಅವರು ಮುಲಾಜಿಲ್ಲದೆ ಪಕ್ಷದ ವರಿಷ್ಠರ ವಿರುದ್ಧ ಎಗರಾಡುತ್ತಿದ್ದರೂ ಏನೂ ಕ್ರಮ ತೆಗೆದುಕೊಳ್ಳದೇ ಇರುವುದು ಸೋಜಿಗದ ಸಂಗತಿ. ಪ್ರಾದೇಶಿಕ ಪಕ್ಷ ವೊಂದನ್ನು ಹುಟ್ಟುಹಾಕಲು ಪ್ರಯತ್ನಿಸುತ್ತಿರುವ ಬಿಎಸ್‌ವೈ ಒಮ್ಮೆ ಪಕ್ಷ ತ್ಯಜಿಸುವ ಮಾತನಾಡಿದರೆ ಇನ್ನೊಮ್ಮೆ ಶಿಸ್ತಿನ ಸಿಪಾಯಿ ಎಂದು ಹೇಳಿಕೊಳ್ಳುತ್ತಾರೆ. ಇವರ ಪಾಲಿಗೆ ಇನ್ನು ಮುಖ್ಯಮಂತ್ರಿ ಗಾದಿ ಕನಸಿನ ಗಂಟೇ ಸರಿ. 'ಕರ್ನಾಟಕ ಜನತಾ ಪಕ್ಷ' ಎಂಬ ಹಳೆ ತಗಡನ್ನು ಕೊಳ್ಳುವ ಪ್ರಯತ್ನ ನಡೆಸಿದ್ದಾರೆ ಈಗ. ಡಿಸೆಂಬರ್ ತಿಂಗಳೊಳಗೆ ಎಲ್ಲ ಸ್ಪಷ್ಟವಾಗುತ್ತದೆ ಎಂದು ಹೇಳಿಕೊಂಡು ತಿರುಗುತ್ತಿದ್ದಾರೆ. ಬಿಎಸ್‌ವೈ ಭಾಜಪ ತೊರೆದರೂ ಸಂಘಪರಿವಾರದ ನಂಟು ತೊರೆಯುವುದಿಲ್ಲ ಎಂದಿದ್ದಾರೆ. ಇದರ ಅರ್ಥ ಅವರಿಗೇ ಗೊತ್ತಾಗಬೇಕು. ಹೊಸ ಪಕ್ಷ ಪ್ರಾರಂಭಿಸಿದರೆ ಇವರೊಟ್ಟಿಗೆ ಎಷ್ಟು ಜನ ಬರುತ್ತಾರೆ? ಈಗಲೇ ಏನೂ ಹೇಳಲು ಬರುವುದಿಲ್ಲ. ಅಂತೂ ಕರ್ನಾಟಕದಲ್ಲಿ ಮುಂದಿನ ವರ್ಷ ಬರುವ ಚುನಾವಣೆ ಬಹಳ ಕುತೂಹಲಕರವಾಗಿರುತ್ತದೆ. ಯಾವ ಒಂದು ಪಕ್ಷಕ್ಕೂ ಬಹುಮತ ಬರುವುದಿಲ್ಲ ಎಂಬುದು ಖಚಿತ. ಚುನಾವಣೆಯ ಹಾಲಾಹಲದಲ್ಲಿ ಅಮೃತವಂತೂ ಬಾರದೇ ಹೋದರೂ ಸಾಕಷ್ಟು ಕೆಸರು ಬರುವುದಂತೂ ಶತಸ್ಸಿದ್ಧ. ರಾಜ್ಯದ ಪ್ರಗತಿ ಗೋವಿಂದ.

✷ ✷ ✷

'ದೇವಾಲಯಗಳಿಗಿಂತ ಶೌಚಾಲಯಗಳೇ ಬಹು ಮುಖ್ಯ' ಎಂದು ಕೇಂದ್ರ ಮಂತ್ರಿ ಜೈರಾಮ್ ರಮೇಶ ಹೇಳಿದ್ದಾರೆ. ಅವರೇನೋ ತಮ್ಮ ದೃಷ್ಟಿಯಲ್ಲಿ ಯಾವುದು ಮುಖ್ಯ ಎಂಬುದನ್ನು ಹೇಳಿದ್ದಾರೆ. ಆದರೆ ಅದನ್ನು ಕೇಳಿ ನಮ್ಮ ಹಿಂದುವಾದಿಗಳು ಸುಮ್ಮನೆ ಕೂರಬೇಕಲ್ಲ. ಹಿಂದೂ ಮಹಾಸಭಾದವರು ಪ್ರತಿಭಟನೆ ಮಾಡಿದ್ದಾರೆಂದು ವರದಿಯಾಗಿದೆ. ಯಾಕೆಂದರೆ ಇವರಿಗೆ ಶೌಚಾಲಯಗಳಿಗಿಂತಲೂ ದೇವಾಲಯಗಳು ಮುಖ್ಯ. ದೇವಾಲಯಗಳಿಂದ, ದೇವಾಲಯಗಳ ನಿರ್ಮಾಣ - ನಿರ್ನಾಮದಿಂದ ರಾಜಕಾರಣ ಮಾಡಬಹುದು. ಈಗಾಗಲೇ ರಾಮಮಂದಿರದ ಹೆಸರು ಹೇಳಿ (ಬಾಬರಿ ಮಸೀದಿ ನಿರ್ನಾಮ ಮಾಡಿ) ಒಂದು ಸಾರಿ ಅಧಿಕಾರಕ್ಕೆ ಬಂದಾಗಿದೆ. ಆದರೆ ಶೌಚಾಲಯವನ್ನು ಮುಂದಿಟ್ಟು ಕೊಂಡು ಅಧಿಕಾರಕ್ಕೆ ಬರಲು ಸಾಧ್ಯವೆ? ಇತ್ತೀಚೆಗೆ ಸಾರ್ವಜನಿಕ ಸ್ಥಳಗಳಲ್ಲಿ ಮೂತ್ರ ವಿಸರ್ಜನೆಗೆ ಜಾಗವಿಲ್ಲದೆ ಜನರು ಎಲ್ಲೆಲ್ಲೋ ಮೂತ್ರ ವಿಸರ್ಜನೆ ಮಾಡುತ್ತಾರೆ. ಇಂಥ ಕೆಲವು ಸ್ಥಳಗಳಲ್ಲಿ ಇಲ್ಲಿ ಮೂತ್ರ ಮಾಡಬಾರದು, ಮಾಡಿದರೆ ದಂಡ ಹಾಕಲಾಗುವುದು, ಹೀಗೆ ಏನೇ ದಂಡ ಸಂಹಿತೆಗಳ ಎಚ್ಚರಿಕೆ ಕೊಟ್ಟರೂ ಜನ ತಮ್ಮ ಜಲಬಾಧೆಯನ್ನು ಎಲ್ಲೆಂದರಲ್ಲಿ ತೀರಿಸಿಕೊಳ್ಳುತ್ತಾರೆ. ಈ ಜಲಬಾಧಿತರನ್ನು ನಿಯಂತ್ರಿಸಲು ಕೆಲವರು ಇನ್ನೂ ಒಂದು ಮಾರ್ಗ ಕಂಡುಹಿಡಿದಿದ್ದಾರೆ. ಸಾರ್ವಜನಿಕ ಅಥವಾ ಖಾಸಗಿ ಸ್ಥಳಗಳಲ್ಲಿ ಜಲಬಾಧೆ ತೀರಿಸಿಕೊಳ್ಳುವ ಜಲಜನಕರನ್ನು ಹೆದರಿಸಲು ಮೂತ್ರ ಮಾಡುವ ಸ್ಥಳಗಳಲ್ಲಿ ದೇವರ ಚಿತ್ರಗಳನ್ನು ಇಡುತ್ತಿದ್ದಾರೆ. (ಕೆಲವು ಕಚೇರಿಗಳ ಮೂಲೆಯಲ್ಲಿ ಜನ ಉಗಿಯುತ್ತಾರೆ, ಅಲ್ಲಿಯೂ ದೇವರ ಪಟಗಳು ಬಂದಿವೆ.) ಜನ ದೇವರಿಗೆ ಹೆದರಿ ಅವರ ಮೇಲೆ ಮೂತ್ರ ಮಾಡಲಾರರು ಎಂಬ ಬಲವಾದ ನಂಬಿಕೆ ನಮ್ಮ ಜಲಬಾಧೆ ನಿಯಂತ್ರಕರಿಗೆ. ಆದರೆ ಮಲಮೂತ್ರಗಳು ಹುಲುಮಾನವನ ನಿಯಂತ್ರಣ ತಪ್ಪಿದಾಗ ದೇವರ ಪಟಗಳೇನು, ದೇವಾಲಯಗಳೂ ತಡೆಯಲಾರವು. ಇದನ್ನೆಲ್ಲ ಗಂಭೀರವಾಗಿ ಚಿಂತಿಸಿ ಕೇಂದ್ರ ಸಚಿವ ಜೈರಾಮ್ ರಮೇಶ್ ದೇವಾಲಯಗಳಿಗಿಂತ ಶೌಚಾಲಯಗಳು ಮುಖ್ಯ ಎಂದಿರಬೇಕು. ಎಷ್ಟಾದರೂ ಪರಿಸರ ಪ್ರಿಯರಲ್ಲವೆ? ಇದು ನಮ್ಮ ಹಿಂದೂ ಮಹಾಸಭಾ ಮತ್ತು ಬಿಜೆಪಿಯ ಜನರಿಗೆ ಸಹನೆ ಯಾಗಲಿಲ್ಲ. ದೇವಾಲಯಕ್ಕೂ ಮೂತ್ರಾಲಯಕ್ಕೂ ಹೋಲಿಕೆಯೇ ಸರಿಯಿಲ್ಲ ಎಂದು ಬೀದಿಗಿಳಿದಿದ್ದಾರೆ. ಇಷ್ಟಕ್ಕೂ ಅವರ ಚಿಂತೆ ಏನೆಂದರೆ ದೇವರ ಪಟಗಳು ಹಾದಿಬೀದಿಯಲ್ಲಿ ಬಂದು ಮೂತ್ರ ಮಾಡುವ ಸ್ಥಳದಲ್ಲಿ ಬಿದ್ದರೂ ಚಿಂತೆಯಿಲ್ಲ, ಮೂತ್ರಾಲಯಗಳಿಗಿಂತ ದೇವಾಲಯಗಳೇ ಮುಖ್ಯ ಎನ್ನುವುದು ಅವರ ಹಟ. ದೇವಾಲಯಗಳು ಬೆಳೆದರೆ ಅವುಗಳಿಂದ ರಾಜಕಾರಣ ಮಾಡಬಹುದು, ಮತ ಪಡೆಯಬಹುದು, ಅಧಿಕಾರ ಹಿಡಿಯಬಹುದು. ಆದರೆ ಮೂತ್ರಾಲಯಗಳಿಂದ ಅಧಿಕಾರ ಹಿಡಿಯಲು ಸಾಧ್ಯವೆ? ಬಹುಶಃ ಇದರಲ್ಲಿ

ಕಾಂಗ್ರೆಸ್ ಪಕ್ಷದ್ದೇನಾದರೂ ರಾಜಕಾರಣ ಇರಬಹುದು ಎಂಬ ಗುಮಾನಿ ಹಿಂದೂ ಪಂಡಿತರಿಗೆ ಬಂದಿರಬಹುದು. ಕಾಂಗ್ರೆಸ್‌ನವರು ಜೈರಾಮ್ ರಮೇಶರನ್ನು ಮುಂದೆ ಬಿಟ್ಟಿದ್ದಾರೆ. ಬಿಜೆಪಿಯವರು ಮೂತ್ರಾಲಯ ರಾಜಕಾರಣಕ್ಕೆ ಎದುರಾಗಿ ದೇವಾಲಯ ರಾಜಕಾರಣ ಮಾಡಲು ಒಂದು ಸಮಿತಿ ಮಾಡಿ ಯಾರನ್ನು ನಾಯಕರನ್ನಾಗಿ ಮಾಡುತ್ತಾರೋ ಕಾಯ್ದು ನೋಡಬೇಕು. ಅಲ್ಲಿ ನಾಯಕರು ಹೆಚ್ಚಾಗಿದ್ದಾರೆ, ಹುದ್ದೆಗಳು ಕಡಿಮೆಯಾಗಿವೆ. ಈಗ ಮೂತ್ರಾಲಯ ವಿರೋಧಿ ಜಾಗರಣ ಮಂಚ್ ರಚಿಸಿ ಕೆಲವರಿಗೆ ಹುದ್ದೆ ಕೊಡಲು ಒಳ್ಳೆಯ ಅವಕಾಶ.

* * *

ಸುಮಾರು ಒಂದು ತಿಂಗಳಿಂದ ಕಾವೇರಿ ನೀರಿನ ವಿಭಜನೆಯ ಬಗ್ಗೆ ಕರ್ನಾಟಕ ಮತ್ತು ತಮಿಳುನಾಡು ವಿವಾದದ ಸುಳಿಯಲ್ಲಿ ಸಿಲುಕಿವೆ. ಜೂನ್ ತಿಂಗಳಲ್ಲಿ ಮಳೆಯ ನಿರೀಕ್ಷೆ ಆರಂಭವಾಗುವ ವೇಳೆಗಾಗಲೆ ತಮಿಳುನಾಡು ಮುಖ್ಯಮಂತ್ರಿ ಪ್ರಧಾನಿಗೆ ಪತ್ರ ಬರೆದು ತಕ್ಷಣ ಕೃಷ್ಣರಾಜಸಾಗರದಿಂದ ನೀರು ಬಿಡಬೇಕೆಂದು ಕರ್ನಾಟಕ ಸರ್ಕಾರಕ್ಕೆ ಹೇಳಬೇಕೆಂದು ಆಗ್ರಹಿಸಿದ್ದರು. ಆಗ ಆ ಸಾಗರದಲ್ಲಿ ಇದ್ದ ನೀರೆಷ್ಟೆಂದು ಆಕೆಗೆ ತಿಳಿದಿತ್ತು. ಬೆಂಗಳೂರಿಗೆ ಇನ್ನೊಂದು ವಾರಕ್ಕೋ ಏನೋ ಅಗತ್ಯ ಪ್ರಮಾಣದಲ್ಲಿ ನೀರು ಹರಿಸುವಷ್ಟು ಮಾತ್ರ ನೀರಿದ್ದುದು. ಆಮೇಲೆ ಮಳೆ ಬೀಳದೆ ಜನ ಕಂಗಾಲಾದರು ಮತ್ತು ಮೂರ್ಖ ಸರ್ಕಾರದ ಮಂತ್ರಿಗಳು ನೀರಿಲ್ಲದಿದ್ದರೇನಂತೆ, ರೂಪಾಯಿ ಹರಿಸಬಹುದಲ್ಲ ಎಂದು ಕೋಟಿಗಟ್ಟಲೆ ಖರ್ಚು ಮಾಡಿ ದೇವಾನುದೇವತೆಗಳಿಗೆ ಪೂಜೆ ಮಾಡಿಸಿದರು. ಮಾರ್ಗಮಧ್ಯೆ ಅಲ್ಲಲ್ಲಿ ದೇವರ ದಲ್ಲಾಳಿಗಳು ಯಥಾಶಕ್ತಿ ಸಾರ್ವಜನಿಕ ಹಣವನ್ನು ಜೇಬಿಗೆ ತುಂಬಿಕೊಂಡರು. ಆಗ್ಗೆ ಆಗಲೆ ''ಪತ್ರಲೇಖೆ'' ಜಯಲಲಿತಾ ಇನ್ನೆರಡು ಪತ್ರಗಳನ್ನು ಮನಮೋಹನ ಸಿಂಗರಿಗೆ ಬರೆದಿದ್ದರಂತೆ. ಪತ್ರಗಳು ಮಳೆ ಸುರಿಸು ವಂತಿದ್ದರೆ ಕರ್ನಾಟಕದ ಅಕ್ಷರಸ್ಥರೆಲ್ಲಾ ಒಂದೊಂದು ಪತ್ರ ಬರೆಯಬಹುದಿತ್ತು. ಆದರೆ ಮಳೆ ಬರಲಿಲ್ಲ, ಬೇಗೆ ಆರಲಿಲ್ಲ, ಬಿತ್ತನೆಯ ಕೆಲಸ ಆರಂಭವಾಗಲಿಲ್ಲ. ಅಲ್ಪಸ್ವಲ್ಪ ಮಳೆಯಾದ ನಂತರ ಮತ್ತೆ ತಗಾದೆ ಆರಂಭವಾಯಿತು. ಇಂದ್ರನು ವೃತ್ರನೆಂಬ ಅಹಿಯನ್ನು (ಹಾವನ್ನು) ಸಂಹರಿಸಿ ಅವನು ಕಟ್ಟಿಹಾಕಿದ್ದ ನೀರನ್ನು ಧಾರಾಕಾರವಾಗಿ ಹರಿಸಿದನೆಂದು ಋಗ್ವೇದದಲ್ಲಿ ಪದೇ ಪದೇ ಯಾವುದೋ ಅನುಭವದ ಸ್ಮರಣೆ ಇದೆ. ಈಗ ಯಾವ ಅಹಿಯನ್ನು ಎಲ್ಲಿ ಕೊಲ್ಲಬೇಕು ಮತ್ತು ಹೇಗೆ ಯಥೇಚ್ಛವಾಗಿ ನೀರು ಹರಿಸಿಕೊಳ್ಳಬೇಕು ? ಸೆಪ್ಟೆಂಬರ್‌ನ ಎರಡನೆಯ ವಾರದಲ್ಲಿ ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ತಿನ ಸಭಾಂಗಣದಲ್ಲಿ ಒಂದು ಗೋಷ್ಠಿ ಏರ್ಪಡಿಸಿದ್ದರು. ವಿಷಯ, ಇದೇ ಕಾವೇರಿ ನೀರಿನ ಹಂಚಿಕೆಯ ಪ್ರಶ್ನೆ. ಪ್ರಸ್ತುತ ಲೇಖಕ ಗೋಷ್ಠಿಯಲ್ಲಿ ಮೂರು ಅಂಶಗಳನ್ನು ಪ್ರಸ್ತಾಪಿಸಿದ್ದನು : (ಅ) ಮಳೆಯು ನಿರೀಕ್ಷಿತ ಪ್ರಮಾಣದಲ್ಲಿ ಬಿದ್ದಿಲ್ಲದಿರುವುದರಿಂದ ಇದು ಬಿಕ್ಕಟ್ಟಿನ ಅಥವಾ ಸಂಕಟದ ವರ್ಷ, ಆದ್ದರಿಂದ ನೀರಿನ ಹಂಚಿಕೆಯು ಸಂಕಟದ ಪ್ರಮಾಣಕ್ಕೆ ಅನುಗುಣವಾಗಿರ ಬೇಕು; (ಆ) ಭಾರತವು ಒಂದು ಒಕ್ಕೂಟ ಅಥವಾ ಫೆಡರಲ್ ಸ್ಟೇಟ್; ಆದ್ದರಿಂದ ಬೇರೆ ಬೇರೆ ರಾಜ್ಯಗಳ ಸಂಬಂಧದಲ್ಲಿ ವ್ಯವಹಾರವು ಸಮಾನತೆಯ ನೆಲೆಯಲ್ಲಿರ ಬೇಕು. ಪಕ್ಕದ ರಾಜ್ಯದ ಸನ್ನಿವೇಶವೇನೇ ಇರಲಿ, ನನ್ನ ರಾಜ್ಯದ ಪಾಲು ಎಂದಿನಂತೆ ಸಾಧಾರಣ ಸನ್ನಿವೇಶದಲ್ಲಿನ ಪಾಲಿಗೆ ಸಮನಾಗಿರಬೇಕೆಂಬ ಧೋರಣೆ ಅತಾರ್ಕಿಕ ಮತ್ತು ಸಂವಿಧಾನದ ವಿರುದ್ಧದ ಒತ್ತಾಯ; (ಇ) ಸಂಕಷ್ಟದ ಕಾಲದಲ್ಲಿ ನೀರಿನ ಹಂಚಿಕೆ ಯಾವ ಪ್ರಮಾಣದಲ್ಲಿರ ಬೇಕೆಂಬ ಸೂತ್ರವನ್ನು ನಿರ್ದಿಷ್ಟವಾಗಿ ಈವರೆಗೆ ಸಿದ್ಧ ಗೊಳಿಸಿಲ್ಲದಿರುವುದು, ರಾಜ್ಯಗಳು ಅದಕ್ಕೆ ಬದ್ಧರಾಗಿರ ಬೇಕೆಂದು ಉಲ್ಲೇಖಿಸಿಲ್ಲದಿರುವುದು, ಮತ್ತು ಎಲ್ಲ ರಾಜ್ಯಗಳ ಒಪ್ಪಿಗೆಯನ್ನು ಅದಕ್ಕೆ ಪಡೆಯದಿರುವುದು ಫೆಡರಲ್ ಸ್ಟೇಟ್ ಎಸಗಿರುವ ಪ್ರಮಾದ. ಆ ಪ್ರಶ್ನೆ ಬಂದಾಗಲೆಲ್ಲ ಅದನ್ನು ಹೇಗೋ ಮುಂದೂಡುತ್ತಾ ಬಂದಿರುವುದು ಇತಿಹಾಸ. ಈ ಹಿನ್ನೆಲೆಯಲ್ಲಿ ಸಾಧಾರಣ ಮಳೆಯಾದಾಗಿನ ಪ್ರಮಾಣದಲ್ಲೇ, ಮಳೆ ಬಿದ್ದಿರದ ವರ್ಷದಲ್ಲೂ ಕಾವೇರಿ ನೀರನ್ನು ತಮಿಳುನಾಡಿಗೆ ಪೂರೈಸಬೇಕೆಂಬುದು ಕೇಂದ್ರದ ಆಜ್ಞೆಯಾದರೆ ಅದು ಫೆಡರಲ್ ಸ್ಟೇಟ್‌ನ ಲಕ್ಷಣವಾಗುವುದಿಲ್ಲ. ಆದ್ದರಿಂದ ಕರ್ನಾಟಕದ ಸರ್ಕಾರ ಬಿದ್ದುಹೋಗುವ ಸಂಭವ ಉಂಟಾದರೂ ಸರಿಯೆ, ನೀರಿನ ಹಂಚಿಕೆಯ ಪ್ರಮಾಣ ವನ್ನು ಮಳೆಯ ಪ್ರಮಾಣಕ್ಕೆ ತಕ್ಕಂತೆ ಮಾತ್ರ ಹರಿಸುವ ತೀರ್ಮಾನವನ್ನು ಕೈಗೊಳ್ಳಬೇಕು. ಜಗದೀಶ ಶೆಟ್ಟರ ಸರ್ಕಾರ ಉರುಳಿಬಿದ್ದರೆ ಕರ್ನಾಟಕಕ್ಕೆ ಅನಾಹುತವೇನೂ ಇಲ್ಲ. ಬೇಕಾದರೆ ಅಧ್ಯಕ್ಷೀಯ ಆಳ್ವಿಕೆ ಹೇರಿ, ಕರ್ನಾಟಕಕ್ಕೆ ಭಾರತದ ಸೇನಾಪಡೆಯನ್ನು ರವಾನಿಸಿ ಅದೆಷ್ಟು ನೀರು ಬೇಕೋ ಹರಿಸಿಕೊಳ್ಳಲಿ, ಕೇಂದ್ರವು ಅದೇ ಸಂವಿಧಾನ ಕ್ರಮವೆಂದು ಬಗೆದರೆ ಅದರ ಫೆಡರಲ್ ನಿಷ್ಠೆ ಎಷ್ಟೆಂಬುದು ಸಾಬೀತಾಗುತ್ತದೆ.

ಇಂತಹ ಸಂವಿಧಾನ ಬಿಕ್ಕಟ್ಟನ್ನು ನಿರ್ಮಿಸುವುದು ಸರಿಯಲ್ಲ; ಕಾನೂನು ಮತ್ತು ಸಂವಿಧಾನ ಇದೆ, ಸರ್ವೋಚ್ಚ ನ್ಯಾಯಾಲಯ ಮತ್ತು ಕಾವೇರಿ ಮಾನೀಟರಿಂಗ್ ಅಥಾರಿಟಿ ಇವೆ, ಅವುಗಳ ನಿರ್ದೇಶನವನ್ನು ಮೀರುವಂತಿಲ್ಲ, ಎಂಬ ವಿಮರ್ಶೆ ಕಾನೂನು ತಜ್ಞರೂ ಆತ್ಮೀಯರೂ ಆದ ಹಿರಿಯ ನ್ಯಾಯಮೂರ್ತಿಯವರೊಬ್ಬರಿಂದ ಬಂದಿತು. ಅದಾದ ಹತ್ತು ದಿನಗಳ ನಂತರ ಸರ್ವೋಚ್ಚ ನ್ಯಾಯಾಲಯದೆದುರು ವಾದ ಮಂಡಿಸುತ್ತಾ ತಮಿಳುನಾಡು ಸರ್ಕಾರದ ವಕೀಲ ಶ್ರೀ. ವೈದ್ಯನಾಥನ್ ಹೇಳಿದ ಮಾತುಗಳು (ಅಥವಾ ನ್ಯಾಯಾಲಯದೆದುರು ಮುಂದಿಟ್ಟ ವಾದ) ಪತ್ರಿಕೆಗಳಲ್ಲಿ ವರದಿಯಾಯಿತು. ಅವರ ವಾದದ ಸಾರಾಂಶ ಇದು : ಕರ್ನಾಟಕವು ಕಾವೇರಿ ನೀರನ್ನು ತಮಿಳುನಾಡಿಗೆ ಹರಿಸಿಲ್ಲ, ಅದು ಅಂಗೀಕೃತ ಒಪ್ಪಂದಕ್ಕೆ ವಿರುದ್ಧವಾದ್ದು, ಅದು ಸಂವಿಧಾನಕ್ಕೆ ಮಾಡಲಾಗಿರುವ ಅಪಚಾರ; ಆದ್ದರಿಂದ ಕರ್ನಾಟಕ ಸರ್ಕಾರವನ್ನು ವಜಾ ಮಾಡಬೇಕು, ರಾಷ್ಟ್ರಪತಿ ಆಳ್ವಿಕೆ ಹೇರಬೇಕು, ಬೇಕಾದರೆ ಭಾರತದ ಸೇನಾಪಡೆಯನ್ನು ಕೃಷ್ಣರಾಜಸಾಗರದ ಬಳಿಗೆ ಕಳಿಸಬೇಕು ಮತ್ತು ನಿಗದಿತ ಪ್ರಮಾಣದಲ್ಲಿ ನೀರು ಬಿಡಬೇಕು. ಅದೇ ವಾದವನ್ನು ಶ್ರೀಯುತರು ಇನ್ನೂ ಎರಡು ಬಾರಿ ಮಂಡಿಸಿದ್ದು ವರದಿ ಯಾಗಿದೆ. ತಮಿಳುನಾಡಿನ 'ದಿ ಹಿಂದು' ಪತ್ರಿಕೆಯು ಆ ವಾದವನ್ನು ಸಮರ್ಥಿಸುವಂತಹ ಓದುಗರ ಪತ್ರಗಳನ್ನು ಪ್ರಕಟಿಸುತ್ತಾ ಬಂದಿದೆ. ಅದಕ್ಕೆ ಸಮಾನಾಂತರವಾಗಿ ಕರ್ನಾಟಕದಲ್ಲಿ ಆಂದೋಲನ ಜಾರಿಯಲ್ಲಿದೆ, ಕನ್ನಡ ಪತ್ರಿಕೆಗಳೂ ಓದುಗರ ಪತ್ರಗಳನ್ನು ಪ್ರಕಟಿಸುತ್ತಿವೆ. ಪ್ರಧಾನಿ ಒಂಭತ್ತು ಸಾವಿರ ಕ್ಯೂಸೆಕ್ಸ್ ಇಂತಿಷ್ಟು ದಿನ ಬಿಡಬೇಕೆಂದು ಆಜ್ಞೆ ನೀಡಿದ್ದಾರೆ, ಕರ್ನಾಟಕ ಅದಕ್ಕೆ ತಕರಾರೆತ್ತಿದೆ.

ಇದರಲ್ಲಿ ಯಾರು ಎಂತಹ ರಾಜಕೀಯ ಮಾಡುತ್ತಿದ್ದಾರೆಂಬುದು ನಿಗೂಢವೇನಲ್ಲ. ಇವರೇ ಸರಿ, ಅವರೇ ತಪ್ಪು, ಎನ್ನುವ ಪ್ರಶ್ನೆ ಅಪ್ರಸ್ತುತ. ಪ್ರಧಾನಿಯವರು ಎರಡು ಪ್ರಶ್ನೆಗಳಿಗೆ ಉತ್ತರ ನೀಡಿದರೆ ಸಾಕು : (ಅ) ೨೦೧೨ ಮಳೆಯ ಪ್ರಮಾಣದ ದೃಷ್ಟಿಯಿಂದ ಸಾಧಾರಣ ವರ್ಷವೇ ಅಥವಾ ಸಂಕಷ್ಟದ ವರ್ಷವೇ ? (ಅದಕ್ಕೆ ಉತ್ತರ ನೀಡಲು ಭಾರತ ಸರ್ಕಾರದ ಹವಾಮಾನ ಇಲಾಖೆಯಿಂದ ಮಾಹಿತಿ ತರಿಸಿಕೊಳ್ಳಲು ಪ್ರಧಾನಿಗೆ ಸ್ವಾತಂತ್ರ್ಯವಿದೆ.) (ಆ) ಸಂಕಷ್ಟದ ವರ್ಷವಾದರೆ ಸಂಕಷ್ಟದ ಹಂಚಿಕೆಯು ಅನಿವಾರ್ಯವಲ್ಲವೆ ? ಹಾಗಿದ್ದರೆ ಅದರ ಪ್ರಮಾಣವೇನು ? (ಇದು ಯಾವ ರಾಜ್ಯ ಎಷ್ಟು ಬೆಳೆಗಳನ್ನು ವರ್ಷವೊಂದರಲ್ಲಿ ಬೆಳೆಯಬೇಕೆಂಬ ವಿಷಯವಲ್ಲ. ಎರಡಲ್ಲ ದಿದ್ದರೆ ನಾಲ್ಕು ಬೆಳೆ ತೆಗೆಯೋಣ. ಆದರೆ ನೀರಿನ ಹಂಚಿಕೆಯ ಪ್ರಮಾಣವು ಸಾಧಾರಣ ವರ್ಷದಲ್ಲಿರುವಂತೆ ಇರಲಾರದು, ಅದು ಫೆಡರಲ್ ಸ್ಟೇಟ್ ಒಪ್ಪಬೇಕಾದ ಸೂತ್ರ.)

ಈ ಪ್ರಶ್ನೆಗಳು ಇಲ್ಲವೇ ಇಲ್ಲವೆಂಬಂತೆ ತೀರ್ಮಾನವನ್ನು ಪ್ರಕಟಿಸುವುದು ನ್ಯಾಯಸಮ್ಮತವಲ್ಲ. ಅದನ್ನು ಅವರಿಗೆ ಮನವರಿಕೆ ಮಾಡಿಕೊಡಲು ಕರ್ನಾಟಕ ಮುಖ್ಯಮಂತ್ರಿ ಒಂದು ಅವಕಾಶ ಕೋರಿದರೆ ಅದಕ್ಕೆ ಪ್ರಧಾನಿ ಹೇಳಿದರು: ''ಕಾವೇರಿ ಪ್ರಾಧಿಕಾರವು ಮತ್ತೆ ಸಭೆ ಸೇರದೆ ಹಿಂದಿನ ತೀರ್ಮಾನವನ್ನು ಪ್ರಧಾನಿಯು ಬದಲಾಯಿಸಲಾರರು, ಆದ್ದರಿಂದ ಭೇಟಿ ಅನಗತ್ಯ.'' ಹಾಗಿದ್ದರೆ ಅದೇ ಪ್ರಧಾನಿಯು ಅದೇ ವಿಷಯ ಚರ್ಚಿಸಲು ತಮಿಳುನಾಡಿನ ಟಿ. ಆರ್. ಬಾಲು ಅವರನ್ನು ಏಕೆ ಭೇಟಿಯಾದರು ? ಏನು ಆಶ್ವಾಸನೆ ಕೊಟ್ಟರೆಂಬುದು ವರದಿಯಾಗಲಿಲ್ಲ. ಬೇರೆ ನೂರು ತಾಂತ್ರಿಕ ಪ್ರಶ್ನೆಗಳಿವೆ: ಮುಂದೆ ಬರಲಿರುವ ಮಳೆ, ಮೆಟ್ಟೂರು ಜಲಾಶಯದಲ್ಲಿ ಶೇಖರಣೆ ಆಗಿರುವ ನೀರಿನ ಪ್ರಮಾಣ, ಒಳ ನೆಲದಲ್ಲಿರುವ ನೀರಿನ ಬಳಕೆ, ಇತ್ಯಾದಿ. ಅದನ್ನೆಲ್ಲಾ ಚರ್ಚಿಸಲಿ, ಆದರೆ ಗಂಭೀರ ವಿಷಯ ಇಷ್ಟೆ: ಸಂಕಷ್ಟದ ಸಮಪಾಲು ಹಂಚಿಕೆಯು ಸಂವಿಧಾನಕ್ಕೆ ವಿರೋಧವಾದ್ದೆ, ಭಾರತ ಎಂಬ ಒಕ್ಕೂಟದ ನೀತಿಗೆ ಮಾರಕವಾದ್ದೆ ?

ಈ ಮಧ್ಯೆ ನೂರಾರು ಹೇಳಿಕೆಗಳು, ಅಭಿಪ್ರಾಯಗಳು, ಸಲಹೆಗಳು, ದೂರುಗಳು ಬಂದಿವೆ. ಅವನ್ನೆಲ್ಲಾ ಗೌರವಿಸ ಬೇಕು, ಪರಿಗಣಿಸಬೇಕು. ಆದರೆ ಸಂವಿಧಾನವನ್ನು ಒಂದು ಆಯುಧವೋ ಎಂಬಂತೆ ಸಂಕಷ್ಟದ ಸಮಪಾಲಿಗೆ ವಿರುದ್ಧವಾಗಿ ಬಳಸಿಕೊಳ್ಳಬಾರದು. ಖ್ಯಾತ ಆರ್ಥಿಕ ತಜ್ಞ, ಕಾವೇರಿ ಸಮಸ್ಯೆಯ ಆಳವಾದ ಅಧ್ಯಯನ ಮಾಡಿರುವ ವಿದ್ವಾಂಸ, ಡಾ|| ವಿ. ಕೆ. ನಟರಾಜ್‌ರವರು ಹೇಳಿದಂತೆ ಈ ಪ್ರಶ್ನೆಯು ಬಗೆಹರಿಯುವುದು ಎರಡೂ ರಾಜ್ಯಗಳ ರೈತರು ಒಟ್ಟಾಗಿ ಸೇರಿ ಸಮಾಲೋಚನೆ ನಡೆಸುವುದರಿಂದ ಮಾತ್ರ ಸಾಧ್ಯ. ರಾಜಕೀಯ ಒತ್ತಡಗಳ ಬದಲು ವಸ್ತುಸ್ಥಿತಿಯ ತಿಳುವಳಿಕೆಯಿಂದ ಪರಿಹಾರ ಮೂಡಿಬರಬೇಕು. ಈ ಮಧ್ಯೆ ಮಾನ್ಯ ಶ್ರೀ. ಜಿ. ವಿ. ಶ್ರೀರಾಮ ರೆಡ್ಡಿಯವರು ಕೋಲಾರದ ಒಂದು ಸಭೆಯಲ್ಲಿ ನೀರಿನ ಸಮಸ್ಯೆ ಕುರಿತು ಚರ್ಚಿಸುವಾಗ ಸರ್ಕಾರವು ಕಾವೇರಿಯ ಸಂದರ್ಭದಲ್ಲಿ ರಾಜಕೀಯ ಮಾಡುತ್ತಿದೆ,

ಆದರೆ ಕೋಲಾರದ ಕೆರೆ-ಕಟ್ಟೆಗಳ ಬಗ್ಗೆ ತೀರಾ ನಿರಾಸಕ್ತಿ ಭಾವ ತಳೆದಿದೆ, ಎಂದು ಆಪಾದಿಸಿದ್ದಾರೆ. ಅವರ ಆಪಾದನೆ ಸಂಪೂರ್ಣವಾಗಿ ಸಮರ್ಥನೀಯ, ಆದರೆ ಒಂದನ್ನು ಮಾಡದವರು ಇನ್ನೊಂದನ್ನೂ ಮಾಡಕೂಡದು ಎನ್ನಲಾದೀತೆ? ಕೃಷ್ಣಾ ನೀರಿನ ಬಗ್ಗೆ ಸರ್ಕಾರವು ಕಾವೇರಿ ನೀರಿನ ಬಗ್ಗೆ ತೋರುವ ಆಸಕ್ತಿಯನ್ನು ತೋರಿಸದಿರುವುದು ಖಂಡನೀಯ, ಎಂಬ ವಿಮರ್ಶೆಯೂ ಬಂದಿದೆ. ಇವೆಲ್ಲಾ ಎಷ್ಟೇ ತೀವ್ರವಾದ ಟೀಕೆಗೆ ಯೋಗ್ಯವಾಗಿದ್ದರೂ ಈ ವರ್ಷ ಮಳೆಯ ಪ್ರಮಾಣ ಬಹಳ ಕಡಿಮೆಯಾಯಿತು ಎಂಬುದು ಸುಳ್ಳಾಗಲಾರದು. ಅಂದರೆ ಸಂಕಟದ ವರ್ಷ ಇದು, ಆದ್ದರಿಂದ ಸಂಕಟದ ಸಮಪಾಲು ಕರ್ನಾಟಕ ಮತ್ತು ತಮಿಳುನಾಡು ಪಡೆದುಕೊಳ್ಳಬೇಕು. ಪ್ರಧಾನಿಯವರ ತೀರ್ಮಾನ, ಸರ್ವೋಚ್ಚ ನ್ಯಾಯಾಲಯದ ಮುಂದೆ ಬಂದಿರುವ 'ನ್ಯಾಯಾಂಗ ನಿಂದನೆ' ಅಪರಾಧ, ಸೈನ್ಯವನ್ನು ಕಳಿಸಬೇಕೆಂಬ ವೈದ್ಯನಾಥನ್ ಒತ್ತಾಯ, ನೀರನ್ನು ಬಿಡಲಾಗದೆಂಬ ಕರ್ನಾಟಕ ಸರ್ಕಾರದ ಧೋರಣೆ, ಎಲ್ಲಕ್ಕೂ ಒಂದೇ ಮಾಪಕ; ಅದು ಸಂಕಟದ ಸಮಪಾಲು ಹಂಚಿಕೆ. ರಾಜಕೀಯ ಮಾಡುವವರ ಉದ್ದೇಶ - ದುರುದ್ದೇಶಗಳು ಹೊಸವಲ್ಲ, ಆದರೆ ಹಾಗೆಂದು ಟೀಕಾಸ್ತ್ರ ಬಳಸಿ ಪ್ರಧಾನಿಯ ರಾಜಕೀಯವನ್ನು ಶ್ರೇಷ್ಠವೆಂದು ಭ್ರಮಿಸುವ ರಾಜಕೀಯವು ಮಾನ್ಯವಲ್ಲ. ವರ್ಷದ ಇಂಥ ತಿಂಗಳುಗಳಲ್ಲಿ, ಈ ರಾಜ್ಯಗಳಲ್ಲಿ, ಇಷ್ಟು ಮಳೆ ಬಿದ್ದಾಗ, ಈ ರಾಜ್ಯಕ್ಕೆ ಇಷ್ಟು ನೀರು, ಇನ್ನೊಂದು ರಾಜ್ಯಕ್ಕೆ ಇಷ್ಟು ನೀರು, ಎಂಬುದನ್ನು ಸೂತ್ರೀಕರಿಸಲು ಪ್ರಧಾನಿಯು ಸಂಬಂಧಪಟ್ಟ ಎಲ್ಲ ರಾಜ್ಯಗಳನ್ನೂ ಒಂದು ಸಭೆಯಲ್ಲಿ ಸೇರಿಸಿ, ಪರಿಣತರ ಸಹಾಯ ಪಡೆದು, ನಿರ್ದಿಷ್ಟ ಸೂತ್ರವನ್ನು ಈಗಲಾದರೂ ರೂಪಿಸಲು ಮುಂದಾಗಲಿ. ಅದು ನೀರಿನ ರಾಜಕೀಯಕ್ಕೆ ಪರ್ಯಾಯವಾದ ಅಪೇಕ್ಷಿತ ರಾಜಕೀಯ.

* * *

ನಮ್ಮ ದೇಶದಲ್ಲಿ ಸಾರ್ವಜನಿಕ ಸಂಪತ್ತನ್ನು ಸೂರೆಮಾಡಿ ಪ್ರತಿಷ್ಠಿತ ಸ್ಥಾನ ಪಡೆದುಕೊಳ್ಳುವುದು ಶತಮಾನಗಳಿಂದ ನಡೆದುಬಂದಿರುವ ದುಷ್ಟ ಮತ್ತು ಹೇಯ ಪದ್ಧತಿ. ಈಗಂತೂ ಎಲ್ಲಾ ಎರಡು ಲಕ್ಷ ಕೋಟಿ ರೂಪಾಯಿಗಳನ್ನು ಮೀರುವ ಪ್ರಸಂಗಗಳೇ. ಮಾಧ್ಯಮಗಳಿಗೆ ಅದೊಂದು ರುಚಿರುಚಿ ಸುದ್ದಿ. ಒಂದು ಹಳಸುವ ವೇಳೆಗೆ ಉದಾರವಾದಿ ಮನಮೋಹನ ಸಿಂಗ್ ಸರ್ಕಾರವು ಹೊಸದೊಂದು ಪ್ರಸಂಗವನ್ನು ಸಿದ್ಧಮಾಡಿಟ್ಟುಕೊಳ್ಳುವ ಹೀನಸ್ಥಿತಿಯನ್ನು ತಲುಪಿದೆ. ಜನರಿಗೆ ಇದೊಂದು ಉಲ್ಲಾಸ ಪ್ರಕರಣವೇನೋ ಎಂಬಂತೆ ಬಾಯಿ ಚಪ್ಪರಿಸಿಕೊಳ್ಳುವ ಪ್ರವೃತ್ತಿ ಬೆಳೆಯುವಂತೆ ಮಾಡುವುದರಲ್ಲಿ ಮಾಧ್ಯಮಗಳು ಯಶಸ್ವಿಯಾಗಿವೆ. ಯಾವುದಾದರೂ ಲೂಟಿಯಾಗಿದ್ದ ಸಾರ್ವಜನಿಕ ಸಂಪತ್ತು ಸಾರ್ವಜನಿಕರಿಗೆ ಹಿಂದಿರುಗಿದೆಯೆ? ಯಾರಾದರೂ ಅರ್ಥಶಾಸ್ತ್ರದ ಪಂಡಿತರು ಇದನ್ನು ಕುರಿತು ಸಂಶೋಧನೆ ನಡೆಸಿ ಒಂದೆರಡು ಪಿಎಚ್.ಡಿ.ಗಳನ್ನು ಗುಡ್ಡೆಹಾಕಿಕೊಳ್ಳುವ ದಿನ ಬಂದೀತೆ ಎಂದು ಕಾತುರದಿಂದ ನಿರೀಕ್ಷಿಸಲಾಗುತ್ತಿದೆ. ಮಾಹಿತಿ ಯಾವುದೂ ಗುಟ್ಟಾಗಿ ಉಳಿದಿಲ್ಲ, ಆಸಕ್ತರಿಗೆ ಅದು ಲಭ್ಯ. ಅದನ್ನು ಜನರಿಗೆ ತಲುಪಿಸುವ ಕೆಲಸ ಆಗಬೇಕು, ಅಷ್ಟೇ. ಹೇಗೆ ಅದನ್ನು ಮಾಡುವುದು, ಜನ ಅದನ್ನು ಸ್ವೀಕರಿಸುತ್ತಾರೆಯೆ, ಸ್ವೀಕರಿಸಿ ಪ್ರತಿಕ್ರಿಯಿಸುತ್ತಾರೆಯೆ, ಸೂರೆ ಮಾಡಿದವರನ್ನು ಹಿಡಿದು ಸಂಪತ್ತನ್ನು ಅವರಿಂದ ಹಿಂದಕ್ಕೆ ಪಡೆದುಕೊಳ್ಳುತ್ತಾರೆಯೆ? ಇವೆಲ್ಲ ಕೋಟಿಕೋಟಿ ರೂಪಾಯಿಗಳ ಪ್ರಶ್ನೆ.

ಒಂದು ಅತಿಸಾಮಾನ್ಯ ಉದಾಹರಣೆಯನ್ನು ನೋಡೋಣ: ನಮ್ಮ ದೇಶದ ಕೆಲವು ದೊಡ್ಡ ''ಉದ್ದಿಮೆ''ಗಳು ಹಠಾತ್ತನೆ ಕುಸಿಯುತ್ತವೆ, ಅವು ಬ್ಯಾಂಕುಗಳಿಂದ ಸಾಲ ಪಡೆದು ಹೂಡಿದ್ದ ಬಂಡವಾಳ ಎಲ್ಲೋ ಕರಗಿಹೋಗುತ್ತದೆ. ಅಯ್ಯೋ ಪಾಪ, ಎಂಬ ಉದ್ಗಾರ ಮತ್ತು ಸಾಂತ್ವನ ಬಹುಬೇಗ ವ್ಯಕ್ತವಾಗುತ್ತವೆ. ಇವೇ ''ಕುಸಿದ'' ಉದ್ದಿಮೆಗಳು ''ಕುಸಿದ'' ಒಂದೆರಡು ತಿಂಗಳುಗಳೊಳಗೆ ವಿದೇಶಗಳಲ್ಲಿ ಬೇರೆ ಕಂಪನಿಗಳನ್ನು ಕೊಳ್ಳುತ್ತವೆ. ''ರಿಯಲ್ ಮ್ಯಾಜಿಕ್'' ಎಂದರೆ ಇದು. ಬಂಡವಾಳಶಾಹಿಯು ಅಂತಹ ಅದ್ಭುತ ಮಾಂತ್ರಿಕ ಶಕ್ತಿ ಹೊಂದಿದೆ. ಅದು ಮಿತ್ತಲ್, ಪಿತ್ತಲ್, ಹಿತ್ತಲ್, ಎಲ್ಲಾ ಕಂಪನಿಗಳ ಜಾಯಮಾನ. ಲ್ಯಾಂಕೋ, ಜಿಎಂಆರ್, ಮುಂತಾದ ಉದ್ಯಮಗಳು ವಿದೇಶಗಳಲ್ಲಿ ಉದ್ದಿಮೆಗಳನ್ನು ಕೊಳ್ಳುವುದರ ಹಿಂದಿನ ಮರ್ಮ ಅಸಾಧ್ಯವಾಗಿದೆ. ಇವಕ್ಕೆ ಸಾಲ ಕೊಟ್ಟ ಬ್ಯಾಂಕುಗಳಿಗೆ ಈ ತಂತ್ರದ ಮಾಹಿತಿ ಇಲ್ಲವೆ? ಸಾಲ ಪಡೆದುದನ್ನು ಹಿಂದಿರುಗಿಸದ ಕುತಂತ್ರಿಗಳಿಗೆ ಇವೇಕೆ ಭಾರಿ ಮೊತ್ತದ ಹಣವನ್ನು ಸಾಲವಾಗಿ ನೀಡುತ್ತವೆ? ಹಾಗೆ ನೀಡಲಾಗುವ ಹಣವು ದೇಶದ ಸಾಮಾನ್ಯ ಜನರದ್ದೆಂದು ಅವಕ್ಕೆ ತಿಳಿದಿಲ್ಲವೆ? ರಿಸರ್ವ್ ಬ್ಯಾಂಕ್ ಗವರ್ನರರಿಂದ ಹಿಡಿದು ಮಹಾರಾಷ್ಟ್ರ ಬ್ಯಾಂಕಿನ ಬೆಂಗಳೂರು ಶಾಖೆಯ ವ್ಯವಸ್ಥಾಪಕ ಅಧಿಕಾರಿಗಳವರೆಗೆ ಇದು ಎಲ್ಲರಿಗೂ ತಿಳಿದಿದೆ. ಎಲ್ಲರೂ ಮಗುಮ್ಮಾಗಿ ''ಅಭಿವೃದ್ಧಿ, ಅಭಿವೃದ್ಧಿ'' ಎಂದು ಅರಚುತ್ತಾ ಸಾರ್ವಜನಿಕರ ಕಣ್ಣಿಗೆ ಮೆಣಸಿನಪುಡಿ ಎರಚುತ್ತಿದ್ದಾರೆ. ಅದೇ ಕೆಂಪಸಾಗರದ ಲಕ್ಷ್ಮಯ್ಯ ತಾನು ಪಡೆದ ಎರಡು ಸಾವಿರ ರೂಪಾಯಿ ಹಿಂದಿರುಗಿಸದಿದ್ದರೆ ಆತನ ಪಾತ್ರೆ - ಪಡಗ ಹರಾಜು ಹಾಕುತ್ತಾರೆ. ಆತನನ್ನು ಅವಮಾನಿಸುತ್ತಾರೆ, ಆತ ಕೆಂಪೇಗೌಡ ಕಟ್ಟಿಸಿದ್ದ ಕೆರೆಗೆ (ನೀರಿದ್ದರೆ) ಹಾರಿ ಪ್ರಾಣ ಕಳೆದುಕೊಳ್ಳುತ್ತಾನೆ. ಎರಡು ಉದಾಹರಣೆಗಳನ್ನು ಮಾತ್ರ ಗಮನಿಸೋಣ, ಆದರೆ ಅಂಥವು ಸಾವಿರಗಟ್ಟಲೆ ಇವೆ. (ಅ) ಸಹಾರಾ ಎಂಬ ಹೆಸರಿನ ಒಂದು ಕಂಪನಿ ಭಾರಿ ಪ್ರಸಿದ್ಧ, ಕ್ರಿಕೆಟ್ಟನ್ನು ಉದ್ಧಾರ ಮಾಡುವ ಬಹಳ ''ಸಮಾಜಮುಖಿ'' ಕಂಪನಿ ಅದು. ಅದು ಬಿಸಾಡುವ ನಾಲ್ಕು ಕಾಸಿಗೆ ಆಟಗಾರರೆಲ್ಲ ಬಣ್ಣದ ಬಟ್ಟೆ ತೊಟ್ಟು ತಾವು ಸಹಾರಾದ 'ಸಹಾರಾ' (ಆಶ್ರಯ) ಪಡೆದವರು ಎಂಬುದನ್ನು ಯಾವ ಅಳುಕೂ ಇಲ್ಲದೆ ಪ್ರಕಟಿಸಿಕೊಳ್ಳುತ್ತಾರೆ. ಆ ಕಂಪನಿಯದು ನೂರಾರು ವಹಿವಾಟುಗಳು. ಅದರಲ್ಲಿ ಇರುವುದೆಲ್ಲಾ ಸಾರ್ವಜನಿಕ ಹಣ, ಷೇರುಗಳು ಇಲ್ಲವೆ ಬ್ಯಾಂಕ್ ಸಾಲದ ಸ್ವರೂಪದವು. ಒಂದು ಪ್ರಕರಣದಲ್ಲಿ ಈ ಕಂಪನಿ ೨೪,೦೦೦ ಕೋಟಿ ರೂಪಾಯಿಗಳ ವಂಚನೆ ನಡೆಸಿತು. ಷೇರುದಾರರಿಗೆ ಆ ಹಣವನ್ನು ವಾಪಸು ಮಾಡಬೇಕೆಂದು ಶ್ರೇಷ್ಠ ನ್ಯಾಯಾಲಯ ಆದೇಶಿಸಿತು, ಆದರೆ ಈವರೆಗೆ ಒಂದು ರೂಪಾಯಿಯನ್ನೂ ಹಿಂದಿರುಗಿಸಿಲ್ಲ. ಸೆಕ್ಯುರಿಟೀಸ್ ಬೋರ್ಡ್ ಅಥವಾ ''ಸೆಬಿ'' ಎನ್ನುವ ಸಂಸ್ಥೆ ಷೇರುದಾರರ ಹಿತರಕ್ಷಣೆ ಮಾಡಲು ಇದೆ. ಆದರೆ ಸಹಾರಾ ಎಂದೂ ಸೆಬಿಯ ಆದೇಶಕ್ಕೆ ಕಿಮ್ಮತ್ತಿನ ಬೆಲೆ ನೀಡಿಲ್ಲ, ಆದರೆ ನಾಗರಿಕರು ಸಹಾರಾ ಎಂದೊಡನೆ ಕುಪ್ಪಳಿಸುತ್ತಾರೆ. ಏಕೆಂದರೆ ಅದು ಕ್ರಿಕೆಟ್ ಪೋಷಕ! ಒಬ್ಬ ದರೋಡೆಕೋರನಿಗೆ ಸಮಾಜದಲ್ಲಿ ಎಂತಹ ಉನ್ನತ ಸ್ಥಾನವೆಂದು ಜನ ಗುಸುಗುಸು ಆದರೂ ಮಾತನಾಡಿಕೊಳ್ಳಬೇಕಲ್ಲವೆ? (ಆ) ಇನ್ನೊಂದು ಬೆಂಗಳೂರಿನ ಉದ್ಯಮ; ಕಿಂಗ್‌ಫಿಶರ್ ಎಂಬುದು ಅದರ ಅನ್ವರ್ಥ ನಾಮ, ಏಕೆಂದರೆ ಬ್ಯಾಂಕ್ ಎಂಬ ಸಮುದ್ರದಿಂದ ಈ 'ಕಿಂಗ್' (ದೊರೆ) ಎಗ್ಗಿಲ್ಲದೆ ಮೀನು (ಫಿಶ್) ಹಿಡಿದು ತುಂಬಿಕೊಳ್ಳುವ ಪ್ರಾವೀಣ್ಯ ಹೊಂದಿದೆ. ಒಬ್ಬನೇ ಉದ್ಯಮಿ ಹತ್ತು ಕಂಪನಿ ತೆರೆದು (ರಾಬರ್ಟ್ ವದ್ರಾ ಎಂಬ ''ಶ್ರೇಷ್ಠ'' ಉದ್ಯಮಿಯಂತೆ) ಒಂದರಿಂದ ಒಂದಕ್ಕೆ, ಅದರಿಂದ ಇನ್ನೊಂದಕ್ಕೆ ಬಂಡವಾಳ ವರ್ಗಾಯಿಸುತ್ತಾ, ಹೆಚ್ಚು ಹೆಚ್ಚು ಸಾಲ ಪಡೆಯುತ್ತಾ, ವಿಜೃಂಭಿಸಬಹುದು. ಇಂದು ಪಡೆದ ಸಾಲ ಗುಳುಂ ಆಯಿತೆಂದು ಪ್ರಕಟವಾಗುವುದು ಐದೋ ಹತ್ತೋ ವರ್ಷಗಳ ನಂತರ! ಕಿಂಗ್‌ಫಿಶರ್ ''ಪಾಪರ್'' ಆಯಿತೆಂದು ಘೋಷಿಸಿ ಸಮುದ್ರದಾಚೆಗೆ ಹಣವನ್ನು ಕದ್ದು ಬಳಸಿ ಸಾಗಿಸುವುದು, ಅಲ್ಲಿ ಉದ್ಯಮ ಕೊಳ್ಳುವುದು, ''ಫೋರ್ಬ್ಸ್'' ಮ್ಯಾಗಸೈನ್‌ನಲ್ಲಿ ಶ್ರೀಮಂತರ ಪಟ್ಟಿಗೆ ಸೇರುವುದು. ಹಾಗೆ ಮಾಡುವುದು ಸಮಾಜದಲ್ಲಿ ಪ್ರತಿಷ್ಠಿತವೆನಿಸಿಕೊಳ್ಳಲು ಇರುವ ಮಾರ್ಗ. ೨-ಜಿ ಸ್ಪೆಕ್ಟ್ರಂ ಹಗರಣ, ಕಲ್ಲಿದ್ದಲು ಹಗರಣದಂತೆ ಇದು ಸದ್ಯದ, ಇಂದಿನ, ಹಗರಣ. ಅಂಥವನ್ನು ಮಾಧ್ಯಮಗಳು ಪಟ್ಟುಹಿಡಿದು ತಪ್ಪಿಸಬೇಕು. ಅದನ್ನು ಮಾಡುವುದಕ್ಕಿಂತ ಮಾಧ್ಯಮಗಳಿಗೆ ಹತ್ತು ವರ್ಷದ ಹಿಂದಿನ ಹಗರಣ ಮುಖ್ಯವೆನಿಸುತ್ತದೆ. ವಿಶೇಷತಃ ರಾಜಕಾರಣಿಗಳಿಗೆ ಮತ್ತು ಅವರ ಸಂಬಂಧಿಗಳಿಗೆ ಸಂಬಂಧಿಸುವುದಾಗಿದ್ದರೆ. ಅವನ್ನು ಹೊರಗೆಳೆಯುವಂತೆಯೇ ಇಂದಿನ ನೇರ ದರೋಡೆಯನ್ನು ಬಹಿರಂಗಗೊಳಿಸಿ ಅಂಥದನ್ನು ತಡೆಹಿಡಿಯುವ ಶಕ್ತಿ ಮಾಧ್ಯಮಗಳಿಗಿದೆ. ಆದರೆ ಅಂಬಾನಿ, ಮಲ್ಯ, ಮಿತ್ತಲ್, ಭಾರ್ತಿ, ಪ್ರತಿಷ್ಠಿತರ ಸಾಲಿನವು, ಅವನ್ನು ಮುಟ್ಟಬಾರದು!

೧೯೬೦ರ ದಶಕದಲ್ಲಿ ವಿ. ಕೆ. ಕೃಷ್ಣ ಮೆನನ್ ಹೇಳುತ್ತಿದ್ದರು: ''ಈ ಖದೀಮರು ಎಂಥವರೆಂದು ತಿಳಿದ ಮೇಲೆ ಅವರಿಗೆ ಸಾಮಾಜಿಕ ಗೌರವವನ್ನು ನೀಡದಿರುವುದು ಜನರ ಕನಿಷ್ಠ ಕರ್ತವ್ಯ. ಅದನ್ನು ಮಾಡದೆ ಅವರನ್ನು ಮೆರೆಸುವುದು ಅವರ ಭ್ರಷ್ಟತೆಗೆ ನೇರವಾಗಿ ಬೆಂಬಲ ಕೊಟ್ಟಂತೆ,'' ಎಂದು. ಹಾಗೆ ಬೆಂಬಲ ನೀಡುವುದನ್ನು ನಿಲ್ಲಿಸೋಣ. ಆಗ ಚಿದಂಬರಂ 'ವೇದಾಂತ ಕಂಪನಿ'ಗೆ ಹೇಗೆ ಅಕ್ರಮ ಸಹಾಯ ನೀಡುತ್ತಿದ್ದಾರೆ ಎಂಬುದೂ ಸೇರಿದಂತೆ 'ಪ್ರತಿಷ್ಠಿತ'ರ ನೂರಾರು ಕುಕೃತ್ಯಗಳು ಹೊರಬರುತ್ತವೆ. ನಿತಿನ್ ಗಡ್ಕರಿ, ಮುಲಾಯಂ ಸಿಂಗ್, ಮುಂತಾದವರ ಘನತೆಯ ಪರಿಚಯವಾಗುತ್ತದೆ. ರಾಜ, ಕನಿಮೋಳಿ, ಮಾರನ್ ಅಂತಹ ಧನ ಕಿರಾತಕರು ಪಾರ್ಲಿಮೆಂಟಿನ ಸಮಿತಿಗಳಿಗೆ ನೇಮಕಗೊಳ್ಳುತ್ತಾರೆಂದರೆ ಏನೆನ್ನೋಣ! ಅವರಿಗೆ ಅಲ್ಲಿ ಸದಸ್ಯತ್ವ ನೀಡದಿದ್ದರೆ ಕರುಣಾನಿಧಿ ಎಂಬ ವೃದ್ಧ ಮನಮೋಹನ ಸಿಂಗ್ ನಿಂತಿರುವ ಭರ್ಜರಿ ಜಮಖಾನವನ್ನೆಳೆದು ಅವರನ್ನು ಮುಗ್ಗರಿಸಿ ಬೀಳುವಂತೆ ಮಾಡುವ ''ಪ್ರತಿಷ್ಠಿತ ರಾಜಕಾರಣಿ'' ಆಗಿದ್ದಾರಲ್ಲ! ●

## ಅಕ್ಟೋಬರ್ ತಿಂಗಳ ಸಂಚಿಕೆ

ಹೊಸತು, ಅಕ್ಟೋಬರ್ ೨೦೧೨ರ ಸಂಚಿಕೆಯಲ್ಲಿ ಪ್ರಕಟವಾದ ಕೆಲವು ಲೇಖನಗಳ ಬಗ್ಗೆ, ಒಬ್ಬ ಸಾಧಾರಣ ಓದುಗನಾಗಿ ನನ್ನ ಅನಿಸಿಕೆಗಳನ್ನು ತಮ್ಮ ಗಮನಕ್ಕೆ ತರುತ್ತಿದ್ದೇನೆ. ಚಿಕ್ಕ ಚೊಕ್ಕ ಲೇಖನಗಳು ಓದುವಾಗ ಹಿತವನ್ನುಂಟುಮಾಡುತ್ತವೆ. ಲಘು ಬರಹಗಳು ಓದಲು ಆಸಕ್ತಿ ಹೆಚ್ಚಿಸುತ್ತವೆ. ಸಂಕ್ಷಿಪ್ತವಾಗಿ ನಿರೂಪಣೆಯಾಗಿರುವ ವೈಜ್ಞಾನಿಕ ವಿಷಯಗಳ ಲೇಖನಗಳು ತೃಪ್ತಿಕರ. ಈ ನಿಟ್ಟಿನಲ್ಲಿ 'ಕೊನೆಗೂ ಸಿಕ್ಕಿ ಬಿದ್ದ ಹಿಗ್ಸ್ ಬೋಸಾನ್', 'ಮಲೇರಿಯಾ : ಯಾರೂ ಅಮುಖ್ಯರಲ್ಲ', 'ನಾನೂ ಸಾಧನಕೇರಿಗೆ ಬಂದೆ', 'ಎಲ್ಲಿ ಮರೆಯಾದೆ', 'ಬಿ. ವಿ. ಕಕ್ಕಿಲ್ಲಾಯರ ನೆನಪು', 'ಮುಹಮದ್ ಕಲೀಂಉಲ್ಲ', 'ವಿಶ್ವವೀಕ್ಷಣೆ' ಇವೆಲ್ಲವೂ ಸರಾಗವಾಗಿ ಸುಲಭವಾಗಿ ಓದಬಹುದು. 'ಕಾಮನಬಿಲ್ಲು' ಮತ್ತು 'ಕಡಲಿನ ಮೇಲೆ ಒಬ್ಬ ಕ್ರಿಸ್ತ' ನೀಳ್ಗತೆಗಳು ಒಮ್ಮೆಲೆ ಪ್ರಕಟವಾಗಿವೆ. ಕಾಮನಬಿಲ್ಲಿನ ವಸ್ತು, ನಿರೂಪಣೆ, ಶೈಲಿ ಉತ್ತಮವಾಗಿದೆ. ಆದರೆ ಅನಗತ್ಯ ಪ್ರಕೃತಿಯ, ಪರಿಸರದ ವಿವರಣೆ ಕತೆಯನ್ನು ಸಡಿಲವಾಗಿಸಿ, ಕ್ರಿಸ್ಪ್‌ನೆಸ್ (ಗರಿಗರಿ) ಹೋಗಿದೆ. ಹೊಟೇಲ್ ಕೃಷ್ಣಭಟ್ಟರು ಹಿಂದೂ ಸಂಪ್ರದಾಯವಾದಿ. ಅನ್ಯಮತಗಳ ದ್ವೇಷಿ. ಇಂತಹವರೇ ಮೂಲಭೂತ ವಾದಿಗಳ ಆಧಾರಸ್ತಂಭಗಳು. ಆದರೆ ಇವರ ಮಗಳು ವಿದ್ಯಾವಂತಳಾಗಿ, ವಿಚಾರವಾದಿಯಾಗಿ ಸಂಪ್ರದಾಯದ ಕಟ್ಟಳೆಗಳನ್ನು ವಿರೋಧಿಸಿ ಅನ್ಯಮತದ ಮುಸ್ಲಿಂನನ್ನು ವಿವಾಹವಾಗುತ್ತಾಳೆ. ಈ ದಂಪತಿಗಳು ಮೂಲಭೂತ ವಾದಿಗಳ ಆಕ್ರೋಶಕ್ಕೆ ತುತ್ತಾಗಿ, ಹಲವಾರು ಸಮಸ್ಯೆಗಳ ವಿರುದ್ಧ ಹೋರಾಡುತ್ತಾರೆ. ರಾಜಕಾರಣಿಗಳು ಈ ಘಟನೆ ಬಳಸಿ ಮತೀಯ ಗಲಭೆಗಳನ್ನುಂಟು ಮಾಡುತ್ತಾರೆ. ಮಾಧ್ಯಮಗಳಿಗೆ ಒಳ್ಳೆ ಸರಕು ಸಿಗುತ್ತದೆ. ಇದು ಜಾತ್ಯತೀತೆಯನ್ನು ಪ್ರತಿಪಾದಿಸುವ ಒಂದು ಉತ್ತಮ ನಿದರ್ಶನ. ಈ ಕಥೆಯನ್ನು ಇನ್ನೂ ಬಿಗಿ ಮಾಡಬಹುದಿತ್ತು, ಆರಂಭದ ವಿವರಣೆಗಳನ್ನು ಕಡಿಮೆ ಮಾಡಿ ದಂಪತಿಗಳ ಹೋರಾಟವನ್ನು ವಿಷದಪಡಿಸಿದ್ದರೆ ಚಂದಾಗಿರುತ್ತಿತ್ತು.

'ಕಡಲಿನ ಮೇಲೆ ಒಬ್ಬ ಕ್ರಿಸ್ತ' ಈ ನೀಳ್ಗತೆಯು ಸರಾಗವಾಗಿ ಓದುವ ಶೈಲಿಯಲ್ಲಿಲ್ಲ, ವಿಷಯವೂ ಸಮರ್ಪಕವಾಗಿ ನಿರೂಪಣೆಯಾಗಿಲ್ಲ. ಇದೊಂದು ಕಬ್ಬಿಣದ ಕಡಲೆ.

ಎಸ್. ಜಿ. ಸಿದ್ದರಾಮಯ್ಯನವರ, 'ಅಸ್ಪೃಶ್ಯತೆ - ಶರಣರ ವಚನಗಳಲ್ಲಿ' ಇದೊಂದು ಸಂಶೋಧನಾತ್ಮಕ ರೀತಿಯ ಉತ್ತಮ ಲೇಖನ. ಇದು ದೀರ್ಘ ಹಾಗೂ ಗಂಭೀರವಾದುದು. ಇಂತಹ ಲೇಖನಗಳು ವಾರ್ಷಿಕ ವಿಶೇಷ ಸಂಚಿಕೆಗೆ ಸೂಕ್ತವೆನಿಸುತ್ತವೆ.

*ಬೆಂಗಳೂರು* **ಯು. ಎಸ್. ವೆಂಕಟರಾಮನ್**

ಶ್ರೀ ಜಿ. ಎಸ್. ಜಯದೇವ ಅವರ ಲೇಖನದಲ್ಲಿ 'ಲಾಂಟಾನಾ' ಕಂಟಿಯ ಬಗ್ಗೆ ಓದಿದೆ. ಅದಕ್ಕೆ ನಾವು 'ಚದುರಂಗ', 'ಲವಂಗ' ಕಂಟಿಯೆಂದು ಕರೆಯುತ್ತೇವೆ. ಈ ಕಂಟಿ ಯಾವ ಸಸ್ಯ, ಗಿಡ, ಬಳ್ಳಿ ಬೆಳೆಯಗೊಡುವುದಿಲ್ಲ. ಕಾಂಗ್ರೆಸ್ ಕಳೆಯಷ್ಟೇ ಭಯಾನಕವಾಗಿದೆ, ಪಕ್ಷಿಗಳಿಂದ ಬೀಜ ಪ್ರಸಾರವಾಗಿ ತೀವ್ರವಾಗಿ ಬೆಳೆಯುತ್ತದೆ. ಇದರ ರೆಂಬೆಯಲ್ಲಿ ತೀಕ್ಷ್ಣ ಮುಳ್ಳುಗಳಿರುವುದರಿಂದ ಇದನ್ನು ಕೀಳಲು ಯಾರೂ ಮುಂದಾಗುವುದಿಲ್ಲ. ಕಂಟಿ ತಾಗಿದರೆ ಪರಚಿಕೊಂಡು ನೆತ್ತರು ಬರುತ್ತದೆ. ಇದು ನಮ್ಮ ದೇಶದ ಸಸ್ಯವಾಗಿಲ್ಲ.

ಲಾಂಟಾನಾ ಕಂಟಿಗಳು ಈಗ ಎಲ್ಲಿ ಬೇಕಾದಲ್ಲಿ ಬೆಳೆಯುತ್ತಲಿವೆ. ಅರಣ್ಯದ ಗಿಡಗಂಟೆಗಳಿಗೆ ಔಷಧಿ ಸಸ್ಯಗಳಿಗೆ ಇದು ಮಾರಕವಾಗಿದೆ. ಗಿರಿಜನರೇ ಹೇಳಿದಂತೆ ಅರಣ್ಯದಲ್ಲಿ ಬೇಗೆ ತೀವ್ರಗೊಳ್ಳಲು 'ಲಾಂಟಾನಾ' ಕಾರಣವಾಗಿದೆ. ತ್ವರಿತಗತಿಯಿಂದ ಅರಣ್ಯ ಇಲಾಖೆಯವರು ಇದನ್ನು ನಿಯಂತ್ರಿಸಬೇಕು. ಹಳ್ಳಿಪಟ್ಟಣಗಳ ಜನರೂ ಈ ಕಂಟಿಯನ್ನು ನಾಶಪಡಿಸ ಬೇಕಾಗಿರುವುದು ಇಂದಿನ ಅವಶ್ಯವಾಗಿದೆ.

*ಬೆಳಗಾವಿ* **ಪುಂಡಲೀಕ ಪಾಟೀಲ**

### ಹೊಸ... ಹೊಸತೂSS

ಹೊಸತು ನಿನ್ನಿಂದ
ಕಲಿತೆ ಹೊಸತು
ತಿಂಗಳಿಗೆ ಹೊಸ ಹೊಸ
ಕಥೆ ಕವನ ಲೇಖನ ಪುಸ್ತಕಗಳ
ವಿಮರ್ಶೆಯ ನಿತ್ಯ ನಡೆಯುವ
ಘಟನೆಗಳ ಹೊಳೆ ಹರಿಯಿತು
ಹೊಸ... ಹೊಸತೂSS...

ಭೂಮಿ ಕಳೆದವರನ್ನು ಉಳಿಸಿದಿ
ಗುಳೇ ಹೋದವರನ್ನು ನಿಲ್ಲಿಸಿದಿ
ಹಿರಿಯ ವ್ಯಕ್ತಿಗಳಿಗೆ ಮೆರಿಸಿದಿ
ಅಂತರ ಜಲದ ಪತ್ತೆ ಹಚ್ಚಿಸಿದಿ
ಓದುಗರ ಮನಸು ತಣಿಸಿದಿ
ಹೊಸತು ನಿನ್ನಿಂದ ನಾ ಕಲಿತೆ
ಹೊಸ... ಹೊಸತೂSS...

ಕನ್ನಡಿಗರಿಗೆ ಕನ್ನಡದ
ಹೊಸ ನುಡಿಯ ಪರಿಚಯ
ಕನ್ನಡವನ್ನು ಗಡಿಗಳಲ್ಲಿ
ಉಳಿಸಿಕೊಳ್ಳಲು ಮುನ್ನುಡಿ
ನೆಮ್ಮದಿಯ ನಾಳೆ ನಮ್ಮದು !!

ಅದಕ್ಕೆ ಇ ಇಂದೂSS
ಹೊಸ... ಹೊಸತೂSS...

ವ್ಯವಸ್ಥೆ ಮೀರುತ್ತಿರುವ ಜನತೆಗೊಂದು ಪಾಠ
ಕುರ್ಚಿಗಾಗಿ ಕಿತ್ತಾಡುತ್ತಿರುವ
ರಾಜಕಾರಣಿಗೊಂದೆಚ್ಚರಿಕೆ
ಖಾಕಿ ಹಾಕಿಕೊಂಡು ಹಣದ ಲೋಭಕಾಗಿ
'ಖಾಕ್' ಹಿಡಿಸಿರುವ ಅಧಿಕಾರಿಗಳಿಗೆ
ಹಣ-ಹೆಂಡಕ್ಕಾಗಿ ಮನೆ ಮಕ್ಕಳನ್ನು ಮಾರುವ
ನಪುಂಸಕರಿಗೆ ನೀನು
ಹೊಸS... ಹೊಸತುSS...

**ಡಾ|| ಎಸ್. ಬಿ. ರಾಠೋಡ**

ಅಕ್ಟೋಬರ - ೧೨ರ ಹೊಸತು ಚೆನ್ನಾಗಿ ಬಂದಿದೆ. ಲೇಖನಗಳು ಚೇತೋಹಾರಿಯಾಗಿವೆ. 'ಕಾವೇರಿ ಅಧ್ಯಯನವಾಗಲಿ' ಎಂಬ ಸಿದ್ದನಗೌಡ ಪಾಟೀಲರ ಸಲಹೆ ಉಚಿತವಾಗಿದೆ. ಇದನ್ನು ಸರಕಾರ ಗಮನಿಸಲಿ ಮತ್ತು ಪರಿಹರಿಸಲೆಂಬ ಆಶಯ ನನ್ನದು.

'ಮೂರನೇ ಕಿವಿ' ಕುರಿತು ಡಾ|| ಮಳಲಿ ವಸಂತಕುಮಾರ ಅವರ ವಿಮರ್ಶೆ ಅದ್ಭುತವಾಗಿದೆ. ಕೃತಿಯ ಲೇಖಕರ ಸಹನೆಗೆ ಕಣ್ಣೀರು ಬಂತು.

*ಕೊಪ್ಪಳ* **ಅಕ್ಬರ್ ಸಿ. ಕಾಲಿಮಿರ್ಚಿ**

ಅಕ್ಟೋಬರಿನ 'ಹೊಸತು'ವಿನಲ್ಲಿ ಮೂಡಿಬಂದ ಮಹೇಶ್ವರಿ ಕೋಟಿಯವರ ಜೊತೆಗೆ (ನಾನೂ ಸಾಧನಕೇರಿಗೆ ಬಂದೆ) ನಾನೂ ಧಾರವಾಡದ ಘನತೆಯಲ್ಲಿ ಲೀನವಾದ ಅನುಭವ ಆಯ್ತು.

ಈ ವಿಸ್ಮಯದ ನೆಲವಂಶಕ್ಕೆ ಮನಸೋತು, ಬಯಲುಸೀಮೆಯ ನನ್ನ ''ಕುಡಿ''ಯನ್ನು ಅಲ್ಲಿ ವ್ಯಾಸಂಗಕ್ಕೆ ಬಿಟ್ಟಿದ್ದೇನೆ ! ಅಲ್ಲಿನ ಇಂದಿನ ಬದುಕಿನಲ್ಲೂ ಆ ಎಲ್ಲ ಘನತೆ ಉಸಿರಾಡುತ್ತಿದೆ ಎಂದೇ ನನ್ನ ಬಲವಾದ ನಂಬಿಕೆ.

ನಟರಾಜ ಬೂದಾಳು ಅವರ ''ಬಯಲು ಸೀಮೆಯ'' ಅವಧೂತರನ್ನೋದಿದಾಗ ನಮ್ಮ ತಾಲೂಕಿನ ನಾಗಲಮಡಿಕೆ ಹೋಬಳಿ ಹುಸೇನ ಪುರದಲ್ಲೂ ಶಿರಡಿ ಸಾಯಿಬಾಬ ರವರಿಗೂ ಗುರುಗಳಾಗಿದ್ದರು ಎಂದು ಹೇಳಲಾಗುವ ವೆಂಕಾವಧೂತರ ಗದ್ದುಗೆ ಇದೆ ಎಂಬುದು ಖುಷಿ ಕೊಡುವ ವಿಷಯ. ನನ್ನ ನೆಲಕ್ಕೂ ಎಲ್ಲೆಗಳನ್ನು ಮೀರಿದ ಅನುಭಾವಿ ಪರಂಪರೆಯಿದೆ ಎಂದಾಯಿತು.

ಪಾವಗಡ **ಕೆ. ಪುರುಷೋತ್ತಮ ರೆಡ್ಡಿ**

ಅಕ್ಟೋಬರ್ - ೨೦೧೨ರ ಸಂಚಿಕೆಯ ಸಂಪಾದಕೀಯದಲ್ಲಿ ಕಾಂಗ್ರೆಸ್ ನೇತೃತ್ವದ ಯುಪಿಎ ಸರ್ಕಾರದ ಹಗರಣಗಳ ಸರಮಾಲೆಯ ಚಿತ್ರಣವನ್ನು ಓದುಗ ಸಮೂಹಕ್ಕೆ ತಿಳಿಯಪಡಿಸಿ, ಭ್ರಷ್ಟಾಚಾರಿ ಸರ್ಕಾರದ ಸಾಧನೆಗೆ ಛೀಮಾರಿ ಹಾಕಿರುವ ಸಂಗತಿ ಶ್ಲಾಘನೀಯ.

ಭಾರತವನ್ನು ಬಡತನದ ಬೆಂಬೂದಿಯಲ್ಲಿ ಮುಳುಗಿಸುತ್ತಿರುವ ಇಂದಿನ ರಾಜಕೀಯ ವ್ಯವಸ್ಥೆಯು ಜನಸಾಮಾನ್ಯರಿಗೆ ಅಸಹ್ಯಕರವಾಗಿದೆ. ಬದುಕು ಬೇಸರವಾಗಿ ಆತ ನಿರಾಶೆಯ ಹಾದಿ ಹಿಡಿದಿದ್ದಾನೆ. ಜನರನ್ನು ಪರಿತಪಿಸುತ್ತಿರುವ ಜನಪ್ರತಿನಿಧಿಗಳು, ಅವರಿಂದಲೇ ರಚನೆಗೊಂಡ ಸರ್ಕಾರದ ದುಬಾರಿ ನಿಯಮಗಳು ಜನರಿಗೆ ದಿಕ್ಕು ತಪ್ಪಿಸುತ್ತಾ, ಸುಲಿಗೆಯ ತಂತ್ರಗಾರಿಕೆಯ ಸುಮಾರ್ಗಗಳಾಗಿ ರಾಜಕೀಯ ಹಗರಣಕ್ಕೆ ದಾರಿಮಾಡಿಕೊಟ್ಟಿವೆ. ಯುಪಿಎ ಸರ್ಕಾರದ ಹಗರಣಗಳ ಸರಮಾಲೆ ಹೊತ್ತುಬಂದ ಪತ್ರಿಕೆಗೆ ಅಭಿನಂದನೆಗಳು.

ಲಿಂಗಸೂಗೂರು **ಶಿವರಾಜ ಯತಗಲ್**

### ಗೃಹಿಣಿಯರಿಗೆ ಸಂಬಳ ನೀಡುವ ಕೇಂದ್ರ ಸರ್ಕಾರದ ಉದ್ದೇಶಿತ ಮಸೂದೆಯ ಕುರಿತು ಒಂದು ಅಭಿಪ್ರಾಯ

ನಮ್ಮ ಕೌಟುಂಬಿಕ ವ್ಯವಸ್ಥೆಯಲ್ಲಿ ಗಂಡ-ಹೆಂಡತಿ ನಡುವಿನ ಸಂಬಂಧಕ್ಕೆ ವಿಶೇಷ ಮಹತ್ವವಿದೆ. ಪವಿತ್ರವಾದ ಸ್ಥಾನವಿದೆ. ಸಂಸಾರದ ರಥಕ್ಕೆ ಇಬ್ಬರೂ ಪರಸ್ಪರ ಪೂರಕವಾದ ಜೋಡಿಗಾಲಿಗಳು ಎಂಬುದು ಎಲ್ಲರಿಗೂ ತಿಳಿದ ವಿಷಯ. ಇಲ್ಲಿ ಅನುರಾಗ ಮುಖ್ಯವೇ ವಿನಾ ಅಧಿಕಾರವಲ್ಲ. ಪರಸ್ಪರರ ಭಾವನೆಗಳಿಗೆ ಗೌರವ ಸಿಗಬೇಕಾದದ್ದು ಅಪೇಕ್ಷಣೀಯ ಹಾಗೂ ಅತ್ಯಗತ್ಯವಾಗಿದೆ. ಇಂದು ಹೆಣ್ಣಿಗೂ ಎಲ್ಲ ಬಗೆಯ ಸ್ವಾತಂತ್ರ್ಯ, ಹಕ್ಕು, ಕರ್ತವ್ಯ ಎಲ್ಲವೂ ಇದ್ದೇ ಇದೆ. ಗಂಡನ ಅನುಪಸ್ಥಿತಿಯಲ್ಲಿ ಸಹ ಕುಟುಂಬವನ್ನು ಸಮರ್ಥವಾಗಿ ಮುನ್ನಡೆಸುವ ಸಾಮರ್ಥ್ಯ ಆಕೆಗಿದೆ. ಪ್ರತಿಯೊಬ್ಬ ಯಶಸ್ವಿ ಪುರುಷನ ಹಿಂದೆ ಹೆಣ್ಣೊಬ್ಬಳು ಇರುತ್ತಾಳೆ ಎಂಬ ಮಾತು ಆಕೆಯ ಪ್ರಾಮುಖ್ಯತೆಯನ್ನು ಪುಷ್ಟೀಕರಿಸುತ್ತದೆ. ನಮ್ಮದು ಪುರುಷ ಪ್ರಧಾನ ಸಮಾಜವಾಗಿದ್ದು, ಹೆಣ್ಣು ಎಲ್ಲವನ್ನೂ ತಾಳಿಕೊಳ್ಳುತ್ತಾಳಾದರೂ, ಕುಟುಂಬದ ವಿಷಯದಲ್ಲಿ ಆಕೆಯ ಭಾವನೆಗಳನ್ನು ಗೌರವಿಸದೆ ಇರುವುದು ಪೂರ್ಣ ಸತ್ಯವಲ್ಲ. ಕುಟುಂಬದ ಒಳಿತು ಇಬ್ಬರ ಶ್ರಮದ ಮೇಲೂ ಅವಲಂಬಿತವಾಗಿರುತ್ತದೆ. ಕೇವಲ ಮನೆವಾಳ್ತೆ ನೋಡಿಕೊಳ್ಳುತ್ತಾಳೆ ಎನ್ನುವ ಕಾರಣಕ್ಕೆ ಗೃಹಿಣಿ ಎಂದಿಗೂ ಅವಗಣನೆಗೆ ಒಳಗಾಗಿಲ್ಲ. ಬಹುತೇಕ ಕುಟುಂಬಗಳಲ್ಲಿ ಪ್ರಮುಖ ಮತ್ತು ಅಂತಿಮ ನಿರ್ಧಾರಗಳನ್ನು ತೆಗೆದುಕೊಳ್ಳುವ ಸಂದರ್ಭದಲ್ಲಿ ಉಪಯುಕ್ತ ಸಲಹೆ ನೀಡುವ ಇಲ್ಲವೆ, ತಾನೇ ಸೂಕ್ತವಾದುದನ್ನು ನಿರ್ಧರಿಸುವ ಎಲ್ಲ ಅವಕಾಶಗಳು ಇಂದು ಗೃಹಿಣಿಗೆ ಇದೆ. ಇಂತಹ ವಾತಾವರಣವಿರುವ ಹೆಚ್ಚಿನ ಪ್ರಮಾಣದ ಕುಟುಂಬಗಳು ಸುಖೀ ಕುಟುಂಬಗಳೇ ಆಗಿರುತ್ತವೆ.

ಇಂತಹ ಸಂದರ್ಭದಲ್ಲಿ ಕೇಂದ್ರ ಸರ್ಕಾರದ ಸಚಿವೆಯೊಬ್ಬರು ಮಂಡಿಸಲು ಹೊರಟಿದ್ದಾರೆ ಎನ್ನಲಾದ ಮಹಿಳಾ ಸಬಲೀಕರಣದ ಹೆಸರಿನಲ್ಲಿ ತನ್ನ ಮನೆಯ ಕೆಲಸಕ್ಕೆ ಗೃಹಿಣಿ ಸಂಬಳ ಪಡೆಯಲು ಅವಕಾಶ ಮಾಡಿಕೊಡುವ ಮಸೂದೆಯ ಔಚಿತ್ಯವನ್ನು ಎಲ್ಲರೂ ಪ್ರಶ್ನಿಸಬೇಕಾಗಿದೆ. ಯಾವ ಗೃಹಿಣಿ ತನ್ನ ಮನೆವಾಳ್ತೆಯ ಕಾರ್ಯಗಳಿಗೆ ಸಂಬಳ ಅಪೇಕ್ಷಿಸಿ ಮಸೂದೆ ಮಂಡನೆಗೆ ಅರ್ಜಿ ಸಲ್ಲಿಸಿದ್ದಳು ಎಂಬುದು ಸ್ಪಷ್ಟವಾಗಬೇಕಾಗಿದೆ. ಈ ಉದ್ದೇಶಿತ ಮಸೂದೆ ಮಂಡನೆಯ ಹಿಂದಿನ ಉದ್ದೇಶವಾದರೂ, ಕೇವಲ ಮಹಿಳಾ ಮತದಾರರ ಮತಗಳನ್ನು ಸೆಳೆಯುವುದಲ್ಲದೆ ಮತ್ತೇನೂ ಇಲ್ಲ ಎನಿಸುತ್ತದೆ. ಯಾವ ಕುಟುಂಬ ದಲ್ಲಿಯೂ ದುಡಿಯುವ ಪುರುಷ ತನ್ನ ಗೃಹಿಣಿಯ ಬೇಡಿಕೆಗಳಲ್ಲಿ ಎಲ್ಲವನ್ನು ಅಲ್ಲದಿದ್ದರೂ, ಕೆಲವನ್ನಾದರೂ ಈಡೇರಿಸದೆ ಇರಲಾರ. ಇಂತಹ ಪರಿಸ್ಥಿತಿಯಲ್ಲಿ ಈ ಮಸೂದೆಯಿಂದಾಗಿ ಗಂಡ-ಹೆಂಡತಿ-ಸಂಸಾರದ ನಡುವೆ ಹುದುಗಿರುವ ಭಾವನಾತ್ಮಕ ಸಂಬಂಧಗಳಿಗೆ, ಸೂಕ್ಷ್ಮ ಸಂವೇದನೆಗಳಿಗೆ ಕೊಡಲಿಪೆಟ್ಟು ಬೀಳುತ್ತದೆ ಎನ್ನುವುದರಲ್ಲಿ ಅನುಮಾನವಿಲ್ಲ. ಅಮ್ಮನಾಗಿ, ಪತ್ನಿಯಾಗಿ ಕುಟುಂಬದ ನೊಗವನ್ನು ಎಳೆಯುತ್ತಿರುವ ಹೆಣ್ಣು ಮಾಡುತ್ತಿರುವುದು ಒಂದು ಉದ್ಯೋಗವೇ ? ಕೊಡು-ಕೊಳ್ಳುವ ವ್ಯವಹಾರ ಮಾಡಲು ಕುಟುಂಬವೇನು ಮಾರುಕಟ್ಟೆಯೇ ? ಇಂತಹ ವ್ಯಾವಹಾರಿಕ ವ್ಯವಸ್ಥೆಯಿಂದ ಕುಟುಂಬಗಳಲ್ಲಿ ಸಾಮರಸ್ಯ, ಭಾವನಾತ್ಮಕ ಸಂಬಂಧ ಉಳಿದುಕೊಳ್ಳುತ್ತದೆ ಎಂದು ಆಶಿಸಲು ಸಾಧ್ಯವೇ ? ಇಂತಹ ಮಸೂದೆಯೊಂದನ್ನು ಮಂಡಿಸಲು ಹೊರಟಿರುವ ಸಚಿವೆಯಲ್ಲಿ ವ್ಯಾಪಾರೀ ಬುದ್ಧಿ ಜಾಗೃತಾವಸ್ಥೆಯಲ್ಲಿದೆ ಎನ್ನದೇ ವಿಧಿಯಿಲ್ಲ.

ಮಂಡ್ಯ **ಶ್ಯಾಮೇಶ್ ಅತ್ತಿಗುಪ್ಪೆ**

*(ಈ ಪತ್ರದ ಕುರಿತು ಓದುಗರು ಪ್ರತಿಕ್ರಿಯಿಸಬಹುದು)*

## ಬೇಂದ್ರೆ ಕಾವ್ಯಕೂಟ

**ಬೆಂಗಳೂರಿನ ಬೇಂದ್ರೆ ಕಾವ್ಯಕೂಟ, ಸ್ನಾತಕೋತ್ತರ ಪದವಿ ವಿದ್ಯಾರ್ಥಿಗಳಿಗೆ ರಾಜ್ಯಮಟ್ಟದ 'ದ. ರಾ. ಬೇಂದ್ರೆ ಸ್ಮೃತಿ ಲೇಖನ ಸ್ಪರ್ಧೆ-೬'ನ್ನು ನಡೆಸುತ್ತಿದೆ. ಆಸಕ್ತಿಯುಳ್ಳ ಲೇಖಕರು ಡಾ|| ಜಿ. ಕೃಷ್ಣಪ್ಪ (ಮೊಬೈಲ್ ಸಂಖ್ಯೆ ೯೯೭೨೧೧೮೯೨೧೮) ಅವರನ್ನು ಸಂಪರ್ಕಿಸಬಹುದು.**

### ಹಳ್ಳಿಗಳಿಗೆ ಡಿಪ್ಲೋಮಾ ವೈದ್ಯರ ಅವಶ್ಯಕತೆ

'ಹೊಸತು' ಅಕ್ಟೋಬರ್ ಸಂಚಿಕೆಯಲ್ಲಿ 'ಮಲೇರಿಯಾ : ಯಾರೂ ಅಮುಖ್ಯರಲ್ಲ!' ಎಂಬ ಡಾ|| ಎಚ್. ಎಸ್. ಅನುಪಮಾ ಅವರ ವಿಶ್ಲೇಷಣಾತ್ಮಕ ಲೇಖನ ಚೆನ್ನಾಗಿ ಮೂಡಿಬಂದಿದೆ. ಅನಾದಿಕಾಲ ದಿಂದಲೂ ಮನುಕುಲವನ್ನು ವಿನಾಶದ ಅಂಚಿಗೆ ಕೊಂಡೊಯ್ಯುತ್ತಿದ್ದ ಮೈಲಿ ಬೇನೆ, ಪ್ಲೇಗ್‌ಗಳಂತಹ ಪೀಡೆಗಳನ್ನು ಇತ್ತೀಚಿನ ದಶಕಗಳಲ್ಲಿ ಈ ಗೋಳದಿಂದಲೇ ಹೊರಹಾಕುವುದು ಸಾಧ್ಯವಾದರೂ ಮಲೇರಿಯಾದಂಥ ಪಿಡುಗನ್ನು ಹತೋಟಿಗೆ ತರಲು ಈ ತನಕ ಸಾಧ್ಯವಾಗದಿರುವುದು ವಿಷಾದನೀಯವೇ ಸರಿ.

ಆದರೆ ಲೇಖನದ ಅಂತಿಮ ಭಾಗದಲ್ಲಿ ಡಾ|| ಅನುಪಮಾ ಅವರು ಅನಗತ್ಯವೆನ್ನಬಹುದಾದ ಅಭಿಪ್ರಾಯವನ್ನು ವ್ಯಕ್ತಪಡಿಸಿರುವುದು ಬೇಸರ ತಂದಿದೆ. ಅದೆಂದರೆ ಕೇಂದ್ರ ಸರ್ಕಾರದವರು ಇತ್ತೀಚೆಗೆ ಗ್ರಾಮೀಣರ ಆರೋಗ್ಯ ಸೇವೆಯನ್ನು ಉತ್ತಮ ಗೊಳಿಸುವುದರ ಸಲುವಾಗಿ ಮೂರೂವರೆ ವರ್ಷದ ಬಿ.ಆರ್.ಎಚ್.ಸಿ. (ಬ್ಯಾಚಿಲರ್ ಆಫ್ ರೂರಲ್ ಹೆಲ್ತ್ ಕೇರ್) ಎಂಬ ಕೋರ್ಸನ್ನು ಅವರು ವಿರೋಧಿಸಿರುವಂತಿದೆ. ಸರಳೀಕರಿಸಿದ ಬಿ.ಆರ್.ಎಚ್.ಸಿ. ಕೋರ್ಸನ್ನು ಹಳ್ಳಿಗಳಿಗೆ ನಿಯೋಜಿಸುವ ಯೋಜನೆ ಗ್ರಾಮೀಣ ಪ್ರಜೆಗಳನ್ನು ಎರಡನೆ ದರ್ಜೆಯವರನ್ನಾಗಿ ಪರಿಗಣಿಸದಂತಾಗುತ್ತದೆಂಬುದು ಅವರ ಅಭಿಪ್ರಾಯ ವೆನಿಸುತ್ತದೆ. ಪ್ರಸ್ತುತ ಎಂ.ಬಿ.ಬಿ.ಎಸ್. ಪದವೀಧರರು ಹಳ್ಳಿಗಳಿಗೆ ತೆರಳಲು ವಿರೋಧ ವ್ಯಕ್ತಪಡಿಸುತ್ತಿರುವ ಸನ್ನಿವೇಶದಲ್ಲಿ ಹಳ್ಳಿಗರ ಪ್ರಾಥಮಿಕ ಸ್ವಾಸ್ಥ್ಯ ಸಮಸ್ಯೆಗಳಿಗೆ ಸ್ಪಂದಿಸುವವರಾರು ? ಇಂತಹ ಪರಿಸ್ಥಿತಿ ಇರುವಾಗ ನಮ್ಮನ್ನಾಳುವ ರಾಜಕೀಯ ಮುತ್ಸದ್ದಿಗಳು ಹಳ್ಳಿಗಳಿಗೆ ಪರಿಣತ ವೈದ್ಯರನ್ನು ಕಳುಹಿಸಬೇಕೆಂಬ ಒತ್ತಾಸೆ ಮಾಡುತ್ತಿರುವುದನ್ನು ಆಗಾಗ್ಗೆ ಕೇಳುತ್ತಿದ್ದೇವೆ !

ಈ ಸಮಸ್ಯೆಯನ್ನು ಸ್ವಲ್ಪ ಐತಿಹಾಸಿಕವಾಗಿ ನೋಡುವುದು ಸರಿಯೆನಿಸುತ್ತದೆ. ಸ್ವಾತಂತ್ರ್ಯ ಪೂರ್ವದಲ್ಲಿ ಮೈಸೂರು ಸಂಸ್ಥಾನ ಹಾಗೂ ಇನ್ನೂ ಕೆಲವು ರಾಜ್ಯ ಗಳಲ್ಲೂ ಇಂತಹ ಒಂದು ಮಾದರಿಯ ಡಿಪ್ಲೊಮಾ ವೈದ್ಯರು ಹಳ್ಳಿಗಾಡುಗಳ ಸ್ವಾಸ್ಥ್ಯ ಪರಿಹಾರದ ಬೆನ್ನೆಲುಬುಗಳಂತಿದ್ದರು. ಹಳೇ ಮೈಸೂರು ಸಂಸ್ಥಾನದಲ್ಲಿ ಒಂದೇ ಒಂದು ಎಂ.ಬಿ.ಬಿ.ಎಸ್. ಪದವಿ ತರಬೇತಿಯ ಮೆಡಿಕಲ್ ಕಾಲೇಜು ಮೈಸೂರು ನಗರದಲ್ಲಿತ್ತು. ಹಾಗೆಯೇ ಇತರ ರಾಜ್ಯಗಳಲ್ಲೂ ಕೆಲವೇ ಮೆಡಿಕಲ್ ಕಾಲೇಜುಗಳಿದ್ದವು. ಹಾಗಾಗಿ ಇಡೀ ಇಂಡಿಯಾದಲ್ಲಿ ಸಮರ್ಪಕ ವೈದ್ಯಕೀಯ ಸೇವೆಯ ವ್ಯವಸ್ಥೆ ಇದ್ದಿರಲಿಲ್ಲ. ಆದರೂ ಸ್ವಾತಂತ್ರ್ಯ ಲಭಿಸಿದ ಕೆಲವೇ ವರ್ಷ ಗಳಲ್ಲಿ ಎಲ್.ಎಂ.ಪಿ. ವೈದ್ಯರು ಅಷ್ಟೇನೂ ಪರಿಣಿತರಲ್ಲವೆಂದೋ, ವೈದ್ಯಕೀಯ ವೃತ್ತಿಯಲ್ಲಿ ವಿವಿಧ ದರ್ಜೆಗಳಿರಬಾರದೆಂದೋ ಅವರ ತರಬೇತಿಯನ್ನು ಸ್ಥಗಿತಗೊಳಿಸಬೇಕೆಂಬ ಪ್ರಬಲ ಅಭಿಪ್ರಾಯ ಸಾರ್ವಜನಿಕರೇ ಅಲ್ಲದೆ, ವೈದ್ಯ ಸಮುದಾಯಗಳಿಂದಲೂ ಮೂಡಿಬರಲಾರಂಭಿಸಿತು. ಅದರಿಂದಾಗಿ ಸರ್ಕಾರ ಹಠಾತ್ತಾಗಿ ಎಲ್.ಎಂ.ಪಿ. ಕೋರ್ಸ್ ಅನ್ನು ಸ್ಥಗಿತಗೊಳಿಸಿತು. ಅದರ ದುಷ್ಪರಿಣಾಮ ಮುಂದಿನ ಕೆಲವೇ ವರ್ಷಗಳಲ್ಲಿ ವ್ಯಕ್ತವಾಗತೊಡಗಿತು. ಹಳ್ಳಿಗಳಲ್ಲಿ ವೈದ್ಯರ ಕೊರತೆ ಬೃಹದಾಕಾರವಾಗಿ ಕಾಣತೊಡಗಿತು.

ಆ ಸಮಯದಲ್ಲಿ ಸ್ವತಃ ವೈದ್ಯ ಪದವೀಧರರೇ ಆಗಿದ್ದ

ಡಾ|| ಕೆ. ಕೆ. ಹೆಗ್ಗಡೆಯವರು ರಾಜ್ಯದ ಆರೋಗ್ಯಖಾತೆಯ ಸಚಿವರಾಗಿದ್ದರು. ಪರಿಸ್ಥಿತಿಯ ಗಂಭೀರತೆಯನ್ನು ಮನಗಂಡ ಅವರು ೧೯೬೦ರ ದಶಕದಲ್ಲಿ ಮತ್ತೆ ಅಲ್ಪಾವಧಿಯ ಡಿಪ್ಲೊಮಾ ಕೋರ್ಸ್ - ಡಿ. ಎಂ. ಎಸ್. (ಡಿಪ್ಲೊಮಾ ಇನ್ ಮೆಡಿಕಲ್ ಸೈನ್ಸ್)ಅನ್ನು ರಾಜ್ಯದ ಮೂರು ಜಿಲ್ಲಾ ಕೇಂದ್ರಗಳಲ್ಲಿ ತೆರೆಯುವ ಏರ್ಪಾಡು ಮಾಡಿದರು. ವಿಪರ್ಯಾಸದ ಸಂಗತಿಯೆಂದರೆ ಪಟ್ಟಭದ್ರ ಹಿತಾಸಕ್ತರ ಕೈವಾಡದಿಂದಲೋ ಏನೋ ಆ ಕೋರ್ಸುಗಳು ಎರಡು ವರ್ಷಗಳ ಅಭ್ಯಾಸದ ನಡುವಿನಲ್ಲೇ ರದ್ದಾದವು! (ನೋಡಿ 'ಹೊಸತು' ಜನವರಿ, ೨೦೦೩)

ಮುಂದಿನ ಕೆಲವು ವರ್ಷಗಳಲ್ಲಿ ಸರ್ಕಾರದವರು ಮತ್ತೆ ಕೆಲವು ಪದವೀಧರ ಮೆಡಿಕಲ್ ಕಾಲೇಜುಗಳನ್ನು ತೆರೆದರು; ಅಲ್ಲದೆ, ಖಾಸಗಿ ವಲಯದವರೂ ವಂತಿಗೆ ಆಧಾರದಲ್ಲಿ ಎಲ್ಲೆಂದರಲ್ಲಿ ಎಂ.ಸಿ.ಐ. ಅವರ ಔದಾರ್ಯದಲ್ಲಿ ಮೆಡಿಕಲ್ ಕಾಲೇಜುಗಳನ್ನು ತೆರೆಯಲಾರಂಭಿಸಿದರು. ಮುಂದಿನ ಕೆಲವು ವರ್ಷಗಳಲ್ಲಿ ಪ್ರತಿ ವರ್ಷ ಪದವೀಧರರೇನೋ ಹೊರಬರಲಾರಂಭಿಸಿದರು. ಆದರೆ ಅವರಲ್ಲಿ ಬಹುಪಾಲು ಪದವೀಧರ ವೈದ್ಯರೇ ಹಳ್ಳಿಗಾಡುಗಳಿಗೆ ಹೋಗಲು ಆಸಕ್ತರಾಗಿರಲಿಲ್ಲ, ಆ ದಿಸೆಯಲ್ಲಿ ಅವರಿಗೆ ಯಾವ ಸಮಸ್ಯೆಗಳೂ ಇರಬಾರದು. ಆದರೆ ಈ ಹಂತದಲ್ಲಿ ನಾವು ಹಳ್ಳಿಗಾಡಿನವರು, ಕೂಲಿಕಾರ್ಮಿಕರು ಮುಂತಾದವರಲ್ಲಿ ತೀರಾ ಸಾಮಾನ್ಯ ಹಾಗೂ ಸರಳವಾಗಿ ಚಿಕಿತ್ಸೆಗೊಳಪಡಿಸಬಹುದಾದ ವೈದ್ಯ ಸಮೂಹವನ್ನು ನಾವು ತಯಾರಿಸುತ್ತಿಲ್ಲವೆಂದು ಅರ್ಥೈಸಲಾಗದೇ? ತೀರಾ ಸಾಮಾನ್ಯವಾದ ಜ್ವರ, ವಾಂತಿ, ಭೇದಿ, ಜಂತುಹುಳು ಬಾಧೆ, ಅನಿಮಿಯಾ, ಅಪೌಷ್ಟಿಕತೆಗಳಂತಹ ರೋಗಗಳು ಹೆಚ್ಚಾಗಿರುವ ಹಳ್ಳಿಗಾಡುಗಳಲ್ಲಿ ಇತ್ತೀಚಿನ ವರ್ಷಗಳಲ್ಲಿ ಆಸ್ಪತ್ರೆ ಕಟ್ಟಡಗಳು, ವೈದ್ಯರ ಸಂಖ್ಯೆಯ ಹೆಚ್ಚಳದ ಬಗೆಗೆ ಸರ್ಕಾರಿ ಹುಕುಂಗಳು, ಗುತ್ತಿಗೆ ಆಧಾರದ ಮೇಲೆ ನೇಮಕ ಮುಂತಾದವುಗಳ ಏರ್ಪಾಡುಗಳು (ಕಾಗದಗಳ ಮೇಲೆ ಮಾತ್ರ!) ಆಗಿವೆ. ಆದರೆ ಸಮಸ್ಯೆ ಬಗೆಹರಿಯಿತೇ? ಆದರಿಂದ ಹಳ್ಳಿಯವರನ್ನು ಎರಡನೆ ದರ್ಜೆಯವರನ್ನಾಗಿ ಪರಿಗಣಿಸುತ್ತಾರೆಂಬ ಭಾವನೆ ಅಷ್ಟಾಗಿ ಸರಿಯೆನಿಸುವುದಿಲ್ಲ. ಅದೇಕೋ ವೈಜ್ಞಾನಿಕವಾಗಿ ಸರಳ ರೀತಿಯ ತರಬೇತಿ ನೀಡುವ ಪ್ರಸ್ತಾಪ ಬಂದಾಗಲೆಲ್ಲಾ ಹಲವು ಕಡೆಗಳಿಂದ ತೀವ್ರ ವಿರೋಧ ವ್ಯಕ್ತವಾಗುತ್ತಿರುವುದು ಅರ್ಥವಾಗುತ್ತಿಲ್ಲ. ಚೀಣಾ, ಕ್ಯೂಬಾ, ಬಾಂಗ್ಲಾದೇಶ, ಮುಂತಾದ ದೇಶಗಳಲ್ಲಿ ಎಲ್ಲರಿಗೂ ಸ್ವಾಸ್ಥ್ಯ ವ್ಯವಸ್ಥೆಗಳನ್ನು ಏರ್ಪಡಿಸಲು ಸಾಧ್ಯವಾಗುತ್ತಿರುವಾಗ ನಮಗೇಕೆ ಸಾಧ್ಯವಾಗುತ್ತಿಲ್ಲ ಎನ್ನುವುದರ ಬಗೆಗೆ ಗಾಢವಾಗಿ ಚಿಂತಿಸಬೇಕು. ಭಾರತದಲ್ಲಿ ಕೆಲವು ವೈದ್ಯಕೀಯ ಕ್ಷೇತ್ರಗಳಲ್ಲಿನ ಸಾಧನೆ ಮುಂದುವರಿದ ರಾಷ್ಟ್ರಗಳವರಷ್ಟೆ ಶ್ರೇಷ್ಠವಾಗಿದ್ದು, ಹೊರ ದೇಶದವರು ಇಲ್ಲಿನ ಹೈಟೆಕ್ ಆಸ್ಪತ್ರೆಗಳಿಗೆ ಬರಲಾರಂಭಿಸಿದ್ದಾರೆ. ಈ ಹಿನ್ನೆಲೆಯಲ್ಲಿ 'ಹೆಲ್ತ್ ಟೂರಿಸಂ'ಅನ್ನು ವೃದ್ಧಿಪಡಿಸುವತ್ತ ನಮ್ಮ ಸರ್ಕಾರ ಮತ್ತು ಖಾಸಗಿ ವಲಯಗಳು ಹೆಚ್ಚಿನ ಆಸಕ್ತಿವಹಿಸುತ್ತಿರುವ ವಿಪರ್ಯಾಸ ನಮ್ಮನ್ನು ಅಣಕಿಸುವಂತಿದೆ.

ಇಂತಹ ಹಿನ್ನೆಲೆಯಲ್ಲಿ ಕೇಂದ್ರ ಆರೋಗ್ಯ ಸಚಿವ ಗುಲಾಂ ನಬಿ ಅಜಾದ್ ಅವರು ಪ್ರಸ್ತುತ ಜಾರಿಗೊಳಿಸಲು ಮುಂದಾಗಿರುವ ಬಿ.ಆರ್.ಎಚ್.ಸಿ. ವ್ಯಾಪಕವಾಗಿ ದೇಶದಾದ್ಯಂತ ಆರಂಭಿಸಲು ಎಲ್ಲರೂ ಪ್ರಬಲವಾಗಿ ಬೆಂಬಲಿಸಬೇಕು. ಪ್ರಸ್ತುತ ಪ್ರತಿಯೊಂದು ವಿಷಯಗಳಿಗೂ ಲಭ್ಯವಿರುವ ಪದವೀಧರ, ಸ್ನಾತಕೋತ್ತರ, ಡಾಕ್ಟರಲ್ ಮೆಡಿಕಲ್ ಕೋರ್ಸ್‌ಗಳಿಗೆ ಇರುವಂತೆಯೇ ಹಳ್ಳಿಗರ ಸಮಸ್ಯೆಗಳಿಗೆ ಸ್ಪಂದಿಸಬಹುದಾದ ಸರಳೀಕರಿಸಿದ ಬಿ.ಆರ್.ಎಚ್.ಸಿ., ಡಿ.ಎಂ.ಎಸ್., ಎಲ್.ಎಂ.ಪಿ.ಗಳಂಥ ವೈಜ್ಞಾನಿಕ ತರಬೇತಿ ಪಡೆದ ವೈದ್ಯರ ತಂಡವನ್ನು ಹುಟ್ಟು ಹಾಕುವುದು ಇಂದಿನ ಅತ್ಯಂತ ತುರ್ತು ಆದ್ಯತೆ ಯಾಗಬೇಕಿದೆ. ಈ ಬಗೆಗೆ ಇದೇ ಲೇಖಕನ 'ಗ್ರಾಮಾಂತರ ಪ್ರದೇಶಗಳಲ್ಲಿ ವೈದ್ಯರ ಕೊರತೆ - ಒಂದು ವಿಶ್ಲೇಷಣೆ' 'ಹೊಸತು' ಜನವರಿ ೨೦೦೩ ಅಥವಾ 'ವೈದ್ಯಲೋಚನ' ೨೦೦೫'ಗಳನ್ನು ಪರಾಂಬರಿಸಬಹುದು.

*ಶಿವಮೊಗ್ಗ* ***ಡಾ|| ಎಚ್. ಡಿ. ಚಂದ್ರಪ್ಪಗೌಡ***

ಸೆಪ್ಟೆಂಬರ್ ೨೦೧೩ರ ಸಂಚಿಕೆಯ ಕೊನೆಯ ಪುಟದಲ್ಲಿ 'ಮಾಯೆ' ಎಂಬ ಕವಿತೆ ಪ್ರಕಟವಾಗಿದೆ.

'ಹರನೇ ನೀನೆನಗೆ ಗಂಡನಾಗಬೇಕೆಂದು ಅನಂತಕಾಲ ತಪಿಸಿದ್ದೆ ನೋಡಾ' ಎಂಬ ಮೊರೆಯ ಅಕ್ಕಮಹಾದೇವಿ ಎಂದಿಗೂ ಮತ್ತ್ಯಾರ ಹೆಂಡತಿ ಯಾಗಲಿಲ್ಲ, ಮನಃಪೂರ್ವಕವಾಗಿ. ಸಮಾಜದ ಕಟ್ಟುಕಟ್ಟಳೆಗಳ ಕಿತ್ತೊಗೆದು, ಲೌಕಿಕ ಸುಖಗಳನ್ನು ತೃಣದಂತೆ ಕಂಡು ಆತ್ಮದಾನಂದಕ್ಕಾಗಿ ಹಂಬಲಿಸಿದವಳು ಅವಳು. ಹಸಿದ ಕಣ್ಣುಗಳು - ಕುತ್ಸಿತ ಮಾತುಗಳೆಲ್ಲ ಅವಳಿಗೆ ನಾಯಿ ಬೊಗಳಿದಂತೆ, ಆನೆ ನಡೆಯ ಕಂಡು.

ಇಂಥ ಅಕ್ಕನನ್ನು ಯಾವ ಮಾಯೆಯೂ ಮುಸುಕಿರಲಾರದು. ಧೈರ್ಯ-ಜ್ಞಾನ-ಭಕ್ತಿಗಳು ಅಚಲವಾಗಿದ್ದ ಅಕ್ಕನ ವ್ಯಕ್ತಿತ್ವ ಸಾಗರೋಪಮವಾದದ್ದು.

'ಮಾಯೆ' ಕವಿತೆಯಿಂದ ಮನ ನೊಂದಿತು. ಜಗದ ಎಲ್ಲ ಹುಸಿನಂಬುಗೆಗಳ ಮೀರಿದ ಮೇರುವ್ಯಕ್ತಿಯನ್ನು ಸಂದರ್ಶಕನೊಬ್ಬ ಕೀಟಲೆ ಪ್ರಶ್ನೆಗಳನ್ನು ಕೇಳಿದಂತೆನಿಸಿತು.

*ಬಳ್ಳಾರಿ* ***ಎ. ಎಂ. ಜಯಶ್ರೀ***

## ಸಂಗೊಳ್ಳಿ ರಾಯಣ್ಣ ಕುರಿತು ಮಾಹಿತಿ

ಸಂಗೊಳ್ಳಿ ರಾಯಣ್ಣನವರ ಜೀವನ, ಹೋರಾಟ ಕುರಿತು ಕೃತಿ ರಚಿಸಲು ಯೋಜಿಸಲಾಗಿದೆ. ಸಂಗೊಳ್ಳಿ ರಾಯಣ್ಣನವರ ಬದುಕು, ಹೋರಾಟ ಕುರಿತು ಮಾಹಿತಿ, ಸ್ಥಳ ವಿವರ, ಇನ್ನಾವುದೇ ವಿವರಗಳಿದ್ದರೆ,

**ಪ್ರೊ|| ಜ್ಯೋತಿ ಹೊಸೂರ**
ಪ್ಲಾಟ್ ನಂ. ೧೮೬೬, ಸೆಕ್ಟರ್ ನಂ. ೧೦
ಆಂಜನೇಯ ನಗರ, ಬೆಳಗಾವಿ

ಇವರಿಗೆ ಕಳುಹಿಸಲು ಕೇಳಿಕೊಂಡಿದ್ದಾರೆ.

### ಶಿಕ್ಷಣ ಹಕ್ಕು ಕಾಯಿದೆ; ಕೆಲವು ಸವಾಲುಗಳು

ದೇಶ ಸ್ವತಂತ್ರವಾದ ಅರವತ್ತೈದು ವರ್ಷಗಳ ನಂತರ ವಾದರೂ, ಕೇಂದ್ರ ಸರ್ಕಾರ ಶಿಕ್ಷಣ ಹಕ್ಕು ಕಾಯಿದೆಯನ್ನು ಇತ್ತೀಚೆಗೆ ಜಾರಿಗೊಳಿಸಿರುವುದು ಸ್ವಾಗತಾರ್ಹ. ನಮ್ಮ ಸಂವಿಧಾನದ ಪ್ರಕಾರ, ಶಿಕ್ಷಣವು ರಾಜ್ಯ ಸರ್ಕಾರಗಳ ವ್ಯಾಪ್ತಿಗೆ ಒಳಪಡುವುದರಿಂದ, ಕಾಯಿದೆಯ ಅನುಷ್ಠಾನವನ್ನು ರಾಜ್ಯ ಸರ್ಕಾರಗಳು ಕಾರ್ಯಗತಗೊಳಿಸಬೇಕಿದೆ. ಕರ್ನಾಟಕ ರಾಜ್ಯದಲ್ಲಿ, ಪ್ರಾಥಮಿಕ ಶಿಕ್ಷಣ ಇಲಾಖೆ ರಾಜ್ಯಾದ್ಯಂತ ಆದೇಶವನ್ನು ಹೊರಡಿಸಿದೆ.

ಶಿಕ್ಷಣ ಹಕ್ಕು ಕಾಯಿದೆಯ ಪ್ರಕಾರ, ೬ರಿಂದ ೧೪ರ ವಯೋಮಿತಿಯ ಬಡತನ ರೇಖೆಗಿಂತ ಕೆಳಗಿರುವ ದುರ್ಬಲ ವರ್ಗದ ಮಕ್ಕಳಿಗೆ ಕಡ್ಡಾಯವಾಗಿ ಶೇಕಡ ೨೫ರಷ್ಟು ಪ್ರವೇಶವನ್ನು ಸರ್ಕಾರಿ ಮತ್ತು ಖಾಸಗಿ ಶಾಲೆಗಳಲ್ಲಿ ನೀಡಬೇಕು. ಆದರೆ, ಕಾಯಿದೆಯ ಅನುಷ್ಠಾನದ ಹಂತದಲ್ಲಿ, ಕರ್ನಾಟಕ ರಾಜ್ಯದ ಪ್ರಾಥಮಿಕ ಶಿಕ್ಷಣ ಇಲಾಖೆ ಅನೇಕ ಸವಾಲುಗಳನ್ನು ಎದುರಿಸುತ್ತಿದೆ. ಬೆಂಗಳೂರು ನಗರದಲ್ಲಿ, ಅನೇಕ ಖಾಸಗಿ ಶಾಲೆಗಳ ಆಡಳಿತ ವರ್ಗಗಳು ಕ್ಷುಲ್ಲಕ ಕಾರಣಗಳನ್ನು ನೀಡಿ ಕಾಯಿದೆಯ ಅನುಷ್ಠಾನಕ್ಕೆ ತೊಡಕುಗಳನ್ನು ಉಂಟುಮಾಡುತ್ತಿವೆ. ಅನೇಕ ಖಾಸಗಿ ಶಾಲೆಗಳು ಶಿಕ್ಷಣ ಹಕ್ಕು ಕಾಯಿದೆಯನ್ನು ಅನುಷ್ಠಾನಗೊಳಿಸಲು, ತಾವು ಮಾನಸಿಕವಾಗಿ ಸಿದ್ಧರಿಲ್ಲವೆಂದು ಅನೇಕ ಸಂಕೇತಗಳನ್ನು ನೀಡಿವೆ. ಖಾಸಗಿ ಶಾಲೆಗಳ ಆಡಳಿತ ಮಂಡಳಿಗಳ ಒಕ್ಕೂಟ, ಒಂದು ವಾರ ಶಾಲೆಗಳನ್ನು ಮುಚ್ಚಿ ತೀವ್ರ ವಿರೋಧವನ್ನು ವ್ಯಕ್ತಪಡಿಸಿತು. ಇಂತಹ ವರ್ತನೆ, ನಮ್ಮ ಸಮಾಜದಲ್ಲಿ ಶತಮಾನಗಳಿಂದ ಬೇರೂರಿರುವ ಸಾಮಾಜಿಕ ಧೋರಣೆಗಳ ಪ್ರತಿಫಲನವಾಗಿದೆ.

ಕಾಯಿದೆಯ ಅನುಷ್ಠಾನದ ಉಸ್ತುವಾರಿಯನ್ನು ವಹಿಸಲು, ಅನೇಕ ಶಿಕ್ಷಣತಜ್ಞರು ಮತ್ತು ಆಸಕ್ತ ನಾಗರಿಕರು ಸಮಿತಿಯನ್ನು ರಚಿಸಿ, ಮುಂದಾಗಿರುವುದು ಸಂತಸದ ವಿಷಯವಾಗಿದೆ. ಎಲ್ಲಕ್ಕಿಂತ ಮುಖ್ಯವಾಗಿ, ನಮ್ಮ ರಾಜ್ಯ ಸರ್ಕಾರವು ರಾಜಕೀಯ ಇಚ್ಛಾಶಕ್ತಿಯನ್ನು ಪ್ರದರ್ಶಿಸಿ, ಕಾಯಿದೆಯನ್ನು ವಿರೋಧಿಸುವ ಶಾಲೆಗಳ ವಿರುದ್ಧ ಕಠಿಣಕ್ರಮಗಳನ್ನು ಜಾರಿಗೊಳಿಸಬೇಕಿದೆ. ತಮಿಳುನಾಡಿನ ಶಾಲೆಯೊಂದರಲ್ಲಿ, ದಲಿತ ಕುಟುಂಬಗಳಿಗೆ ಸೇರಿದ ಮಕ್ಕಳಿಗೆ ಪ್ರವೇಶ ನಿರಾಕರಿಸಲಾದ ಸುದ್ದಿಯನ್ನು ಆಂಗ್ಲ ದಿನಪತ್ರಿಕೆಯೊಂದು ವರದಿ ಮಾಡಿದೆ. ನಮ್ಮ ಸಂವಿಧಾನ, ಶಿಕ್ಷಣ, ಮೂಲಭೂತ ಹಕ್ಕು ಎಂದು ಮಾನ್ಯತೆ ನೀಡಿದ್ದರೂ ದಲಿತ ಮತ್ತು ಹಿಂದುಳಿದ ವರ್ಗಗಳ ಪಾಲಿಗೆ ನಿಲುಕದ ನಕ್ಷತ್ರವಾಗಿದೆ.

ಶಿಕ್ಷಣ ಕ್ಷೇತ್ರದ ವಾಣಿಜ್ಯೀಕರಣ, ಸರ್ಕಾರಿ ಮತ್ತು ಖಾಸಗಿ ಶಾಲೆಗಳ ನಡುವೆ ದೊಡ್ಡ ಕಂದರವನ್ನು ಸೃಷ್ಟಿ ಮಾಡಿದೆ. ಪ್ರತಿಷ್ಠಿತ ವರ್ಗಕ್ಕೆ ಸೇರಿದ ಪೋಷಕರಿಗೆ, ತಮ್ಮ ಮಕ್ಕಳು ಬಡವರ ಮಕ್ಕಳ ಪಕ್ಕದಲ್ಲಿ ಕುಳಿತು ಕಲಿಯುವುದನ್ನು ಊಹಿಸುವುದು ಅಸಹನೀಯವಾಗಿದೆ. ಆದರೆ, ಸಾಮಾಜಿಕ ಪ್ರಗತಿ ಸಾಕಾರವಾಗಬೇಕಾದರೆ ಶಿಕ್ಷಣ ಕ್ಷೇತ್ರದಲ್ಲಿ ಸಮಾನತೆಯನ್ನು ಅಗತ್ಯವಾಗಿ ರೂಢಿಸಿಕೊಳ್ಳಬೇಕಾಗುತ್ತದೆ.

*ಬೆಂಗಳೂರು* ***ಶಂಕರನಾರಾಯಣ***

ಮೂಲ : **ಡಾ|| ಅಸ್ಗರ್‌ಅಲಿ ಎಂಜಿನಿಯರ್**
ಕನ್ನಡಕ್ಕೆ : **ಹಸನ್ ನಯೀಂ ಸುರಕೋಡ**

ಏಳನೆಯ ಶತಮಾನದ ಆದಿಯಲ್ಲಿ ಇಸ್ಲಾಂ ಅಸ್ತಿತ್ವಕ್ಕೆ ಬಂದಾಗ ಅರಬರು ವಿಭಿನ್ನ ಬುಡಕಟ್ಟುಗಳಾಗಿ ವಿಭಜನೆಗೊಂಡಿದ್ದರು. ಆದಾಗ್ಯೂ ಅವರು ಒಂದೇ ಭಾಷೆ ಅರೇಬಿಕ್‌ಅನ್ನು ಆಡುತ್ತಿದ್ದರು, ಕಾಬಾದೊಳಗೆ ಸ್ಥಾಪಿಸಲಾಗಿದ್ದ ಹಾಗೂ ಮಕ್ಕಾದ ಹೊರ ವಲಯದಲ್ಲಿ ಇರಿಸಲಾಗಿದ್ದ ವಿಭಿನ್ನ ಮೂರ್ತಿಗಳನ್ನು ಪೂಜಿಸುತ್ತ ಹೆಚ್ಚು ಕಡಿಮೆ ಒಂದೇ ಧರ್ಮ (ವಿಭಿನ್ನ ಪರಂಪರೆಗಳಿದ್ದರೂ)ವನ್ನು ಅನುಸರಿಸುತ್ತಿದ್ದರು. ಹೀಗೆ ಆ ಸಮಾಜವನ್ನು ಬಹುತ್ವವಾದಿ ಸಮಾಜ ಎನ್ನಲಾಗದು. ಯಹೂದಿಯರೇನೋ ಮದೀನಾದಲ್ಲಿ ಹಾಗೂ ಅರೇಬಿಯಾ ದ್ವೀಪಕಲ್ಪದ ಕೆಲ ಪ್ರದೇಶಗಳಲ್ಲಿದ್ದರು. ಆದ್ದರಿಂದ ಈ ದೃಷ್ಟಿಯಿಂದ ಕೆಲಮಟ್ಟಿಗೆ ಅದು ಬಹುಧರ್ಮೀಯ ಸಮಾಜವಾಗಿತ್ತು. ಕಾರಣ ಕ್ರಿಶ್ಚಿಯನ್ನರು ಹಾಗೂ ಯಹೂದಿಯರು ಅಲ್ಪಸಂಖ್ಯಾತರಾಗಿ ವಾಸವಾಗಿದ್ದರು.

ಮೂರ್ತಿಪೂಜಕ ಅರಬರು ಮತ್ತು ಯಹೂದಿಯರು ಹಾಗೂ ಕ್ರಿಶ್ಚಿಯನ್ನರ ನಡುವೆ ಯಾವುದೇ ಧಾರ್ಮಿಕ ಸಂಘರ್ಷದ ಬಗ್ಗೆ ನಮಗೆ ತಿಳಿದುಬರುವುದಿಲ್ಲ. ಜುಡಾಯಿಸಂ ಹಾಗೂ ಕ್ರಿಶ್ಚಿಯನ್ ಧರ್ಮಗಳು ಸಾಂಸ್ಥೀಕೃತ ಧರ್ಮಗಳಾಗಿದ್ದವು. ಆದರೆ ಅರಬರಿಗೆ ಅಂತಹದೊಂದು ಧರ್ಮ ಇದ್ದಿರಲಿಲ್ಲ. ಮೂರ್ತಿಪೂಜಕ ಅರಬರು ರಾಜಕೀಯ ಪರಿಣಾಮಗಳ ಬಗೆಗಿನ ಆತಂಕದಿಂದಾಗಿ ಈ ಧರ್ಮಗಳನ್ನು ಅಂಗೀಕರಿಸಲು ಹಿಂದೇಟು ಹಾಕುತ್ತಿದ್ದರು. ಕ್ರಿಶ್ಚಿಯನ್ ಧರ್ಮ ರೋಮನ್ ಸಾಮ್ರಾಜ್ಯದ ಅಧಿಕೃತ ಧರ್ಮವಾಗಿದ್ದು, ಆ ಧರ್ಮಕ್ಕೆ ಮತಾಂತರಗೊಂಡರೆ ರೋಮನ್ ಸಾಮ್ರಾಜ್ಯಕ್ಕೆ ತಲೆಬಾಗಬೇಕಾಗುತ್ತದೆ ಹಾಗೂ ತಾವು ತಮ್ಮ ಸ್ವಾತಂತ್ರ್ಯವನ್ನು ಕಳೆದುಕೊಳ್ಳಬೇಕಾಗುತ್ತದೆಂದು ಅವರು ಭಾವಿಸಿದ್ದರು. ಅಷ್ಟೇ ಅಲ್ಲ, ಕ್ರಿಶ್ಚಿಯನ್ ಧರ್ಮವನ್ನು ಸ್ವೀಕರಿಸಿದ್ದ ಗಡಿ ಪ್ರದೇಶದ ಕೆಲವು ಅರಬರು ತುಂಬ ಅಸಂತುಷ್ಟರಾಗಿದ್ದರು. ಅವರು ರೋಮನ್ ಸಾಮ್ರಾಜ್ಯದ ಶಿಕ್ಷೆಗೆ ಗುರಿಯಾಗಿದ್ದರು. ಅನಂತರ ಅವರು ಅರಬರ ಪ್ರಮುಖ ಧರ್ಮವಾಗಿದ್ದ ಇಸ್ಲಾಮನ್ನು ಅಂಗೀಕರಿಸಿದರು.

ಬಹುತ್ವ ಹಾಗೂ ವೈವಿಧ್ಯ ನಮ್ಮ ಬದುಕನ್ನು ಶ್ರೀಮಂತಗೊಳಿಸಬಲ್ಲುದು ಹಾಗೂ ಅದರ ಕೊರತೆ ನಮ್ಮ ಭಾಷೆ ಹಾಗೂ ಸಂಸ್ಕೃತಿಯನ್ನು ತೀರ ಅನಾಕರ್ಷಕಗೊಳಿಸುತ್ತದೆ ಎನ್ನುವುದು ಗಮನಾರ್ಹವಾದುದು. ಒಂದು ಧರ್ಮವನ್ನು ಲಕ್ಷಾಂತರ ಜನ ಅಂಗೀಕರಿಸಿದಾಗ, ಅದೂ ಅನೇಕ ಸಂಸ್ಕೃತಿಗಳು, ಭಾಷೆಗಳು, ಪರಂಪರೆಗಳು ಹಾಗೂ ಸಂಪ್ರದಾಯಗಳ ಜನರು ಅನುಸರಿಸುತ್ತಿದ್ದಾಗ ಅದರ ಗ್ರಹಿಕೆ ಹಾಗೂ ಅರಿವು ಏಕಪ್ರಕಾರದ್ದಾಗಿರುವುದಿಲ್ಲ. ಇಸ್ಲಾಂ ಅರೇಬಿಯಾಕ್ಕೆ ಸೀಮಿತವಾಗಿ ಉಳಿದಿದ್ದರೆ ಅದು ಏಕರೂಪದ್ದಾಗಿರುತ್ತಿತ್ತು. ಆದರೆ ಅದು ಜಗತ್ತಿನ ವಿಭಿನ್ನ ಪ್ರದೇಶಗಳಿಗೆ ಹಬ್ಬಿದ ನಂತರ ಅದು ಸ್ಥಳೀಯ ತತ್ವಜ್ಞಾನ ಹಾಗೂ ಅನೇಕ ಸಂಪ್ರದಾಯಗಳನ್ನು ಅಪ್ಪಿಕೊಂಡಿರುತ್ತದೆ. ವಿಭಿನ್ನ ಸಾಂಸ್ಕೃತಿಕ ಸಂಪ್ರದಾಯಗಳು ಬೇರೆಲ್ಲೋ ಹುಟ್ಟಿದ ಧರ್ಮದ ಗ್ರಹಿಕೆಯನ್ನು ಗಾಢವಾಗಿ ಪ್ರಭಾವಿಸುತ್ತವೆ ಎಂದು ಹೇಳಬೇಕಾದ ಅಗತ್ಯವಿಲ್ಲ.

# ಬಹುತ್ವದ ಸಮಸ್ಯೆಗಳು



ಇಷ್ಟಾಗಿಯೂ ಕುರ್‌ಆನ್ ಧಾರ್ಮಿಕ ಬಹುತ್ವವನ್ನು ನಿರಾಕರಿಸಲಿಲ್ಲ, ಅದು ಧಾರ್ಮಿಕವಷ್ಟೇ ಅಲ್ಲ, ಭಾಷಿಕ ಹಾಗೂ ಜನಾಂಗೀಯ ಬಹುತ್ವವನ್ನು ಸಹ ಮನ್ನಿಸಿತು. ಈ ಸಂಬಂಧ ಕುರ್‌ಆನ್‌ನಲ್ಲಿ ಶ್ಲೋಕಗಳಿವೆ. ಆ ಪೈಕಿ ಕೆಲವನ್ನು ನಾನು ಇಲ್ಲಿ ಉಲ್ಲೇಖಿಸುತ್ತಿದ್ದೇನೆ :

೧. ''ನಿಮ್ಮ ಪೈಕಿ ಪ್ರತಿಯೊಬ್ಬನಿಗಾಗಿ ನಾನು ಒಂದು ಕಾನೂನು ಹಾಗೂ ಮಾರ್ಗವನ್ನು ವಿಧಿಸಿದ್ದೇನೆ. ಅಲ್ಲಾಹ್ ಮನಸ್ಸು ಮಾಡಿದ್ದರೆ ನಿಮ್ಮನ್ನು ಒಂದೇ ಜನತೆಯನ್ನಾಗಿ ಸೃಷ್ಟಿಸುತ್ತಿದ್ದ. ಆದರೆ ನಿಮಗೆ ಕೊಡಮಾಡಿರುವುದರಲ್ಲೇ ನಿಮ್ಮನ್ನು ಅವನು ಪರೀಕ್ಷಿಸಬಯಸಿರಬಹುದು. ಸುಕೃತ್ಯಗಳಲ್ಲಿ ಒಬ್ಬರು ಇನ್ನೊಬ್ಬರನ್ನು ಮೀರಿಸಿರಿ. ಅಲ್ಲಾಹನಿಗೇ ನೀವು ಮರಳುವಿರಿ. ಎಲ್ಲಿ ನೀವು ದಾರಿ ತಪ್ಪಿದಿರಿ ಎನ್ನುವುದನ್ನು ಅಲ್ಲಾಹ್ ನಿಮಗೆ ತಿಳಿಸುತ್ತಾನೆ...'' (೫ : ೪೮)

೨. ಅವನ ಕುರುಹುಗಳ ಪೈಕಿ ಆಕಾಶ ಮತ್ತು ಭೂಮಿ, ನಿಮ್ಮ ಭಾಷೆ ಮತ್ತು ವರ್ಣ (ಜನಾಂಗೀಯ ಭಿನ್ನತೆ)ಗಳ ವೈವಿಧ್ಯದ ಸೃಷ್ಟಿ. ನಿಶ್ಚಿತವಾಗಿಯೂ ಪ್ರಾಜ್ಞರಿಗೆ ಇಲ್ಲಿ ಕುರುಹುಗಳಿವೆ. (೩೦ : ೨೨)

ಮೇಲೆ ಉಲ್ಲೇಖಿಸಿದ ಎರಡೂ ಶ್ಲೋಕಗಳು ಧರ್ಮಗಳು, ಭಾಷೆಗಳು ಹಾಗೂ ಜನಾಂಗಗಳ ವೈವಿಧ್ಯವನ್ನು ಮನ್ನಿಸಿದೆಯಲ್ಲದೆ ಅದನ್ನು ಅಲ್ಲಾಹನ ಕುರುಹು ಎಂದು ಬಣ್ಣಿಸುತ್ತವೆ. ಹೀಗೆ ಅಲ್ಲಾಹ್ ವೈವಿಧ್ಯವನ್ನು ಸೃಷ್ಟಿಸಿದ್ದಾನೆ. ಅದನ್ನು ಗೌರವಿಸಬೇಕು. ಅಲ್ಲಾಹ್ ಬಯಸಿದ್ದೇ ಆಗಿದ್ದರೆ ನಮ್ಮನ್ನೆಲ್ಲ ಒಂದೇ ಧರ್ಮ, ಒಂದೇ ಭಾಷೆ ಹಾಗೂ ಒಂದೇ ವರ್ಣದವರನ್ನಾಗಿ ಸೃಷ್ಟಿಸುತ್ತಿದ್ದ. ಆದರೆ ಅಲ್ಲಾಹ್ ಹಾಗೆ ಮಾಡಲಿಲ್ಲ. ಅದಕ್ಕೆ ಬದಲಾಗಿ ಅವನು ಎಲ್ಲ ಬಗೆಯ ವೈವಿಧ್ಯಗಳನ್ನು ಸೃಷ್ಟಿಸಿದ. ಇಷ್ಟೆಲ್ಲ ವೈವಿಧ್ಯಗಳ ಹೊರತಾಗಿಯೂ ನಾವು ಸೌಹಾರ್ದದಿಂದ ಬದುಕುತ್ತೇವೆಯೋ ಇಲ್ಲವೋ ಎನ್ನುವುದನ್ನು ಪರೀಕ್ಷೆ ಮಾಡಲಿದ್ದಾನೆ. ಅದನ್ನು ಸಂಘರ್ಷದ ಮೂಲವನ್ನಾಗಿ ಮಾಡುವುದರ – ಬಹುತೇಕ ಆಗುವಂತೆ – ಬದಲಾಗಿ ಸುಕೃತ್ಯಗಳಲ್ಲಿ ನಾವು ಪರಸ್ಪರರನ್ನು ಮೀರಿಸುವ ಮೂಲವನ್ನಾಗಿಸಬೇಕು.



ಅರಬರು ತಮ್ಮ ಭಾಷೆ ಹಾಗೂ ಜನಾಂಗೀಯ ಮೂಲದ ಬಗ್ಗೆ ತುಂಬ ಹೆಮ್ಮೆಪಡುತ್ತಿದ್ದರು. ವ್ಯಕ್ತಿಯೊಬ್ಬ ತನ್ನ ಭಾಷೆ ಹಾಗೂ ಅರಬೀಯತೆಯ ಬಗ್ಗೆ ಹೆಮ್ಮೆ ಪಡಬೇಕಾದ ಅಗತ್ಯವಿಲ್ಲವೆಂದು ಕುರ್‌ಆನ್ ಒತ್ತಿ ಹೇಳುತ್ತದೆ. ಕಾರಣ ಅಲ್ಲಾಹ್ ಇತರ ಭಾಷೆಗಳನ್ನು, ಜನಾಂಗೀಯ ಸಮುದಾಯಗಳನ್ನು ಸೃಷ್ಟಿಸಿದ್ದಾನೆ. ಎಲ್ಲರನ್ನು ಗೌರವಿಸುವುದು ಅವಶ್ಯವಾಗಿದೆ. ಯಾವ ವ್ಯಕ್ತಿಯೂ ಇನ್ನೊಬ್ಬನಿಗಿಂತ ಶ್ರೇಷ್ಠನಲ್ಲ, ಎಲ್ಲರೂ ಅಲ್ಲಾಹನ ಸೃಷ್ಟಿಯಾಗಿದ್ದು ಅವನ ಕುರುಹುಗಳಾಗಿದ್ದಾರೆ.

ಹೀಗೆ ಇತರ ಧರ್ಮಗಳು, ಭಾಷೆಗಳು ಹಾಗೂ ಜನಾಂಗಗಳನ್ನು ಗೌರವಿಸಬೇಕು – ಅತ್ಯಂತ ಸಮಕಾಲೀನ, ಇಲ್ಲವೇ ಆಧುನಿಕ ಮನೋಧರ್ಮ – ಎನ್ನುವುದನ್ನು ಆಸ್ತಿಕರಿಗೆ ಬೋಧಿಸಲಾಯಿತು. ತಿಳಿವಳಿಕೆಯ ಅಭಾವದಿಂದ ಇತರರು ಅಲ್ಲಾಹನನ್ನು ಹೀಗಳೆಯದಿರಲು ನೀವು ಇತರರ ದೇವರನ್ನು ಹೀಗಳೆಯಬಾರದೆಂದು ಸಹ ಕುರ್‌ಆನ್ ಆಸ್ತಿಕರಿಗೆ ಬೋಧಿಸಿತು. ಕುರ್‌ಆನ್ ಇನ್ನೂ ಒಂದು ಹೆಜ್ಜೆ ಮುಂದುವರಿದು ಪ್ರತಿಪಾದಿಸುವುದೇನೆಂದರೆ ಪ್ರತಿಯೊಂದು ಜನತೆಗೆ ತಮ್ಮದೇ ದೇವರು ನ್ಯಾಯನಿಷ್ಠ ಹಾಗೂ ಶ್ರೇಷ್ಠನಾಗಿರುವಂತೆ ತೋರಬಹುದು. ಹಾಗಾಗಿ ಪ್ರತಿಯೊಬ್ಬನೂ ಅನ್ಯ ಧರ್ಮವನ್ನು ಅವರದೇ ದೃಷ್ಟಿಯಲ್ಲಿ ಕಾಣಬೇಕೇ ವಿನಾ ತಮ್ಮದೇ ಧರ್ಮದ ದೃಷ್ಟಿಕೋನದಿಂದಲ್ಲ. (೩೦ : ೨೨ನೆಯ ಶ್ಲೋಕದ ಕಡೆಯ ಭಾಗವನ್ನು ನೋಡಿರಿ).

ಆದರೆ ಈ ಜಗತ್ತಿನಲ್ಲಿ, ಮುಸ್ಲಿಮರೇ ಇರಲಿ ಇನ್ಯಾವುದೇ ಧರ್ಮದವರೇ ಇರಲಿ, ಯಾರೂ ತಮ್ಮ ಧರ್ಮಗ್ರಂಥದ ಪ್ರಕಾರ ನಡೆದುಕೊಳ್ಳುತ್ತಿಲ್ಲ. ಅವರು ತಮ್ಮ ಸ್ವಂತ ಹಿತಾಸಕ್ತಿಗಳು ಹಾಗೂ ಲಾಭವನ್ನೇ ದೃಷ್ಟಿಯಲ್ಲಿಟ್ಟುಕೊಂಡು ನಡೆಯುವುದೇ ಹೆಚ್ಚು. ಅರಬರು, ಅರಬೇತರ ಮುಸ್ಲಿಮರೂ ಸೇರಿದಂತೆ ಎಲ್ಲ ಅರಬೇತರರಿಗಿಂತ ತಾವೇ ಶ್ರೇಷ್ಠವೆಂದು ಭಾವಿಸುವುದನ್ನು ಮುಂದುವರಿಸಿದರು. ಅರಬರು ಕೆಳಸ್ತರದ ಮುಸ್ಲಿಮರನ್ನು ಹೀನಾಯವಾಗಿ ಕಂಡರು ಹಾಗೂ ಅರಬರನ್ನು ಒಳ್ಳೆಯ ಮುಸ್ಲಿಮರೆಂದು ಪರಿಗಣಿಸಿದರು.

ಇಸ್ಲಾಂ ಅರಬರ ಮಧ್ಯೆ ಮೈವೆತ್ತಿತು. ಆದರೆ ಬೇಗನೆ ಜಗತ್ತಿನ ಅನೇಕ ಪ್ರದೇಶಗಳಿಗೆ ಹಬ್ಬಿಕೊಂಡಿತು. ಅರಬೇತರ ಸಮಾಜಗಳ ಸಂಸ್ಕೃತಿ ಹಾಗೂ ಸಂಪ್ರದಾಯಗಳು ಸ್ಥಳೀಯ ಮುಸ್ಲಿಂ ಸಮುದಾಯಗಳಲ್ಲಿ ಪ್ರತಿಫಲನಗೊಳ್ಳತೊಡಗಿದವು. ಹೀಗೆ ಅನೇಕ ದೈವಶಾಸ್ತ್ರಜ್ಞರು ಪ್ರತಿಪಾದಿಸುತ್ತಲಿರುವಂತೆ ಇಸ್ಲಾಂ ಏಕ ಶಿಲ್ಪವಾಗಿ ಉಳಿಯಲಿಲ್ಲ. ಸ್ಥಳೀಯ ಸಂಸ್ಕೃತಿಗಳು ವಿಭಿನ್ನ ಸ್ಥಳೀಯ ಮುಸ್ಲಿಂ ಸಮುದಾಯಗಳ ಅನಿವಾರ್ಯ ಅಂಗವಾಗಿಬಿಟ್ಟಮೇಲೆ, ನಂತರ ಬದಲಾಗಿ ಇಸ್ಲಾಮಿನ ಅಂಗವಾಗಿ ಬಿಟ್ಟಮೇಲೆ ವಿಭಿನ್ನ ಆಚರಣೆಗಳ ಇಸ್ಲಾಮಗಳು ಅಸ್ತಿತ್ವಕ್ಕೆ ಬಂದವು.

ದೈವಶಾಸ್ತ್ರೀಯವಾಗಿ ಹಾಗೂ ನ್ಯಾಯಶಾಸ್ತ್ರೀಯವಾಗಿ ಸಹ ಇಸ್ಲಾಂ ವಿಭಿನ್ನವಾದ ಅನೇಕ ಪಂಗಡಗಳಾಗಿ ಹಾಗೂ ಕಾನೂನು ಪರಂಪರೆಗಳಾಗಿ ಕವಲೊಡೆಯಿತು. ರಾಜಕೀಯ ಒಡಕುಗಳಿಗೂ ದೈವಶಾಸ್ತ್ರೀಯ ಬಣ್ಣ ಅನಿವಾರ್ಯವಾಯಿತು. ಆರಂಭದಲ್ಲಿ ಪ್ರವಾದಿಯ ಉತ್ತರಾಧಿಕಾರ ರಾಜಕೀಯ ಸಮಸ್ಯೆಯಾಗಿತ್ತು. ಆದರೆ ಶೀಘ್ರವೇ ಅದು ದೈವಶಾಸ್ತ್ರೀಯವಾಗಿಬಿಟ್ಟಿತು. ಶಿಯಾ ಇಸ್ಲಾಂ ತನ್ನದೇ ದೈವಶಾಸ್ತ್ರ ಹೊಂದಿದರೆ ಸುನ್ನಿ ಇಸ್ಲಾಂ ತನ್ನದೇ ದೈವಶಾಸ್ತ್ರ ಹೊಂದಿತು. ಎರಡೂ ಪರಸ್ಪರ ಕಟ್ಟಾ ವಿರೋಧಿಯಾದವು. ಜನಾಂಗೀಯವಾಗಿ ಸಹ ವಿಭಿನ್ನ ಜನಾಂಗೀಯ ಸಮುದಾಯಗಳು ಅವುಗಳನ್ನು ಅಂಗೀಕರಿಸಿದ್ದವು.

ಇರಾಕ್, ಸಿರಿಯ, ಸೌದಿ ಅರೇಬಿಯಾ, ಲೆಬನಾನ್ ಹಾಗೂ ಬಹ್ರೈನ್‌ನಂತಹ ಅರಬ್ ದೇಶಗಳು ಅಲ್ಪಸಂಖ್ಯಾತ, ಇಲ್ಲವೇ ಬಹುಸಂಖ್ಯಾತ ಶಿಯಾರನ್ನು ಹೊಂದಿದ್ದರೂ ಶಿಯಾ ಇಸ್ಲಾಮನ್ನು ಮುಖ್ಯವಾಗಿ ಇರಾನಿಯರಿಂದ ಅಂಗೀಕರಿಸಿದ್ದವು. ಅವರು ಪರ್ಶಿಯನ್ ಮಾತನಾಡುವ ಅರಬೇತರರಾಗಿದ್ದರು. ಅವರಿಗೆ ಸಂಸ್ಕೃತಿ ಹಾಗೂ ನಾಗರಿಕತೆಯ ವಿಷಯವಾಗಿ ಶ್ರೇಷ್ಠತೆಯ ಭಾವನೆಯಿತ್ತು. ಅದೇ ರೀತಿ ಮಧ್ಯ ಏಷ್ಯಾದ ವಿಭಿನ್ನ ಬುಡಕಟ್ಟುಗಳು ತಮ್ಮ ಹೆಗ್ಗುರುತಾಗಿದ್ದ ತಮ್ಮದೇ ಆದ ಸಂಪ್ರದಾಯಗಳು ಹಾಗೂ ಪರಂಪರೆಗಳೊಂದಿಗೆ ಇಸ್ಲಾಮನ್ನು ಅಂಗೀಕರಿಸಿದ್ದವು.

ಆಶ್ಚರ್ಯಕರವೆನ್ನುವಂತೆ ಇಸ್ಲಾಂ ಆಂತರಿಕವಾಗಿ ವೈವಿಧ್ಯಮಯವಾಯಿತು. ಆಫ್ರಿಕಾದಲ್ಲಿ ಹೌಸಾ ಇಸ್ಲಾಂ 'ಮುಖ್ಯಧಾರೆ'ಯ ಅರಬ್ ಇಸ್ಲಾಮಿನಿಂದ ಅದೆಷ್ಟು ಮೂಲಭೂತವಾಗಿ ವಿಭಿನ್ನವಾಗಿದೆಯೆಂದರೆ ಎಷ್ಟೋ ಮುಸ್ಲಿಮರು ಅವರನ್ನು ಮುಸ್ಲಿಮರೆಂದು ಪರಿಗಣಿಸುವುದಿಲ್ಲ. ಎಪ್ಪತ್ತರ ದಶಕದ ಕೊನೆಗೆ ಇಸ್ಲಾಂ ಹಬ್ಬದ ಕಾಲಕ್ಕೆ ಹೌಸಾ ಮುಸ್ಲಿಮರನ್ನು ಪ್ರದರ್ಶಿಸಲಾಯಿತು. ಹೌಸಾ ಇಸ್ಲಾಮಿನ ಪ್ರದರ್ಶನವನ್ನು ವೀಕ್ಷಿಸಿದ ಪಾಕಿಸ್ತಾನೀಯರು ಈ ಜನರನ್ನು ಹೇಗೆ ಮುಸ್ಲಿಮರೆಂದು ಭಾವಿಸುವುದು, ಎಂದು ಉದ್ಗರಿಸಿದರು.

ಜನಾಂಗೀಯ ಹಾಗೂ ಬುಡಕಟ್ಟು ಪೂರ್ವಗ್ರಹಗಳು ಇಂತಹ ಎಲ್ಲ ವಿಷಯಗಳಲ್ಲಿ ಸಕ್ರಿಯವಾಗುತ್ತವೆ. ಅದೇನೇ ಇರಲಿ, ಅವರೆಲ್ಲರೂ ತಾವು ನೈಜವಾದ ಮುಸಲ್ಮಾನರೆಂದು ಭಾವಿಸುತ್ತಾರೆ. ಇನ್ನು ಸಾಕಷ್ಟು ವಿಭಿನ್ನವಾದ ದೈವಶಾಸ್ತ್ರಗಳನ್ನುಳ್ಳ ಹಲವಾರು ಶಿಯಾ ಹಾಗೂ ಸುನ್ನಿ ಇಸ್ಲಾಮಿನ ಪಂಗಡಗಳಿವೆ. ಲೆಬನಾನ್‌ನಲ್ಲಿ 'ಮುಖ್ಯಧಾರೆ'ಯ ಶಿಯಾ ಇಸ್ಲಾಮಿಗಿಂತ ತೀರ ವಿಭಿನ್ನವಾದ ಡ್ರೂಜ್ ಮುಸ್ಲಿಮರು ಹಾಗೂ ಇಸ್ಮಾಯಿಲಿ ಮುಸ್ಲಿಮರಿದ್ದಾರೆ. ಇಸ್ಮಾಯಿಲಿಯರಲ್ಲೇ ದೈವಶಾಸ್ತ್ರೀಯ ವಿಷಯಗಳಿಗೆ ಸಂಬಂಧಿಸಿದಂತೆ ಸಾಕಷ್ಟು ಪರಸ್ಪರ ಭಿನ್ನವಾಗಿರುವ ಆಗಾಖಾನಿಯರು ಹಾಗೂ ಬೊಹ್ರಾಗಳಿದ್ದಾರೆ.

ವಾಸ್ತವದಲ್ಲಿ ಇಸ್ಲಾಮಿನ ಮೊದಲ ಶತಮಾನದಲ್ಲಿನ ಬಗ್ದಾದಿಯ ಗ್ರಂಥ 'ಅಲ್-ಫರ್ಕ್ ಬೈನ್ ಅಲ್-ಫರ್ಕ್' ಅನ್ನು ಗಮನಿಸಿದರೆ, ಅವನು 'ನಿಜವಾದ ಇಸ್ಲಾಂ' ಪ್ರತಿನಿಧಿಸುವುದಾಗಿ ಹೇಳಿಕೊಳ್ಳುವ ಒಂದು ನೂರಕ್ಕೂ ಹೆಚ್ಚು ಪಂಗಡಗಳನ್ನು ಪಟ್ಟಿಮಾಡುತ್ತಾನೆ. ಅನೇಕ ಪಂಗಡಗಳು ರಾಜಕೀಯ ಭಿನ್ನಾಭಿಪ್ರಾಯಗಳಿಂದಾಗಿ ಅಸ್ತಿತ್ವಕ್ಕೆ ಬಂದಿದ್ದರೆ ಕೆಲವು ದೈವಶಾಸ್ತ್ರೀಯ ಭಿನ್ನಾಭಿಪ್ರಾಯಗಳಿಂದಾಗಿ ಸಹ ಅಸ್ತಿತ್ವಕ್ಕೆ ಬಂದಿದ್ದವು. ಕುರ್‌ಆನ್‌ನ ಬಹುತ್ವವನ್ನು ಒಪ್ಪಿಕೊಂಡರೆ ಆಂತರಿಕ ಹಾಗೂ ಬಾಹ್ಯ ಬಹುತ್ವ (ಇಸ್ಲಾಂ ಮತ್ತು ಇಸ್ಲಾಮೇತರ ಧರ್ಮಗಳ ಸಹಅಸ್ತಿತ್ವ)ವನ್ನು ಒಪ್ಪಿಕೊಳ್ಳಬೇಕಾಗುತ್ತದೆ.

ಆದರೆ ಇಸ್ಲಾಂ ಹಾಗೂ ಇತರ ಧರ್ಮಗಳ ಸಹಅಸ್ತಿತ್ವ ಒಂದೆಡೆ ಇರಲಿ, ಇಸ್ಲಾಮಿನ ವಿಭಿನ್ನ ಪಂಗಡಗಳ ನಡುವೆಯೇ ಗಂಭೀರವಾದ ಘರ್ಷಣೆಗಳಾಗಿವೆ. ಇಂದು ಪಾಕಿಸ್ತಾನದಲ್ಲಿ ಸುನ್ನಿ ಭಯೋತ್ಪಾದಕರು ನಿರಂತರವಾಗಿ ಶಿಯಾ ಮುಸ್ಲಿಮರ ಮೇಲೆ ಹಲ್ಲೆ ಮಾಡುತ್ತಿದ್ದಾರೆ, ಕೊಲ್ಲುತ್ತಿದ್ದಾರೆ. ಅದೇ ರೀತಿ ಭಾರತೀಯ ಉಪಖಂಡದಲ್ಲಿ



ವಹಾಬಿಗಳು ಹಾಗೂ ಬರೇಲವಿಗಳ ನಡುವೆ ಗಂಭೀರವಾದ ಸಂಘರ್ಷ ಇದ್ದೇ ಇದೆ. ಜೊತೆಗೆ ಅಹಮದಿಯಾರನ್ನು ನಾಸ್ತಿಕರೆಂದು ದೂಷಿಸಲಾಗುತ್ತಿದೆ. ವಾಸ್ತವದಲ್ಲಿ ಪ್ರತಿಯೊಂದು ಪಂಗಡವೂ ಉಳಿದೆಲ್ಲ ಪಂಗಡಗಳನ್ನು ನಾಸ್ತಿಕ (ಕಾಫಿರ್)ರೆಂದು ಖಂಡಿಸುತ್ತದೆ. 'ಕಾಫಿರ್' ಪದವನ್ನು ಬೇಕಾಬಿಟ್ಟಿಯಾಗಿ ಬಳಸಲಾಗುತ್ತದೆ.

ಪ್ರಾಯಃ ಮುಸ್ಲಿಮನೊಬ್ಬ ಇತರ ಪಂಗಡಗಳ ಮುಸ್ಲಿಮರಿಗಿಂತ ಮುಸ್ಲಿಮೇತರರೊಂದಿಗೇ ಹೆಚ್ಚು ಶಾಂತಿಯಿಂದ ಬದುಕುತ್ತಾನೆ. ಪಾಕಿಸ್ತಾನದ ಪಂಜಾಬಿನಲ್ಲಿ (ಕಳೆದ ಶತಮಾನದ) ಐವತ್ತರ ದಶಕದ ಆರಂಭದಲ್ಲಿ ನಡೆದಿದ್ದ ಕಾದಿಯಾನಿ ವಿರೋಧಿ ಗಲಭೆಗಳ ವಿಚಾರಣೆ ನಡೆಸಿದ ಜಸ್ಟಿಸ್ ಮುನೀರ್ ತಮ್ಮ ವರದಿಯಲ್ಲಿ ಹೇಳಿರುವಂತೆ, ಅವರು ಪಾಕಿಸ್ತಾನದ ಎಲ್ಲ ಪ್ರಮುಖ ದೈವಶಾಸ್ತ್ರಜ್ಞರ ವಿಚಾರಣೆ ನಡೆಸಿದ್ದರು, ಆ ಪೈಕಿ ಯಾವ ಇಬ್ಬರೂ 'ಮುಸ್ಲಿಮ'ನ ವ್ಯಾಖ್ಯೆ ಕುರಿತಂತೆ ಸಹಮತ ಹೊಂದಿರಲಿಲ್ಲ; ಆದಾಗ್ಯೂ ಮುಸ್ಲಿಮನಲ್ಲದವನನ್ನು ಕೊಲ್ಲಬೇಕು ಎನ್ನುವುದನ್ನು ಒಪ್ಪಿಕೊಂಡರು.

ಹೀಗೆ ಕುರ್‌ಆನ್‌ನ ಧಾರ್ಮಿಕ ಹಾಗೂ ಸಾಂಸ್ಕೃತಿಕ ಬಹುತ್ವದ ಸಿದ್ಧಾಂತವಿದ್ದರೂ ಮುಸ್ಲಿಂ ದೈವಶಾಸ್ತ್ರಜ್ಞರು ವ್ಯವಹಾರದಲ್ಲಿ ಅದನ್ನು ಸಮ್ಮತಿಸುವುದಿಲ್ಲ. ಬಹುತ್ವ ಕುರಿತು ಇರಾನಿನಲ್ಲಿ ನಡೆದ ಒಂದು ಸಮ್ಮೇಳನದಲ್ಲಿ ಎಲ್ಲ ಧರ್ಮಗಳೂ ಸಮಾನವಾಗಿಬಿಡುತ್ತವೆ ಎನ್ನುವ ಕಾರಣಕ್ಕಾಗಿ ಇಸ್ಲಾಂ ಬಹುತ್ವವನ್ನು ಸಮ್ಮತಿಸುವುದಿಲ್ಲವೆಂದು ಪ್ರಮುಖ ಅಯಾತುಲ್ಲಾಹ್‌ರೊಬ್ಬರು ಹೇಳಿದರು. ಇದನ್ನು ಒಪ್ಪಲಾಗದು. ನಾನು ಎದ್ದು ನಿಂತು ''ಸರ್, ಇದು ಕುರ್‌ಆನ್‌ನ ಚಿಂತನಾ ಕ್ರಮವಲ್ಲ, ವ್ಯಕ್ತಿಯೊಬ್ಬ ಅಲ್ಪಸಂಖ್ಯಾತನಾಗಿ ಬದುಕಿದಾಗಲೇ ಅವನು ಬಹುತ್ವದ ಮಹತ್ವವನ್ನು ಅರ್ಥಮಾಡಿಕೊಳ್ಳಬಲ್ಲನು'' ಎಂದು ಹೇಳಿದೆ. ಅದಕ್ಕೆ ಅಯಾತುಲ್ಲಾಹ್, ''ಬಹುತ್ವವನ್ನು ಒಪ್ಪಿಕೊಳ್ಳಬಾರದೆಂದು ನಾನು ಭಾವಿಸುವುದಿಲ್ಲ. ಆದರೆ ಎಲ್ಲ ಧರ್ಮಗಳ ಸಮಾನ ಸ್ಥಾನಮಾನವನ್ನು ಒಪ್ಪಿಕೊಳ್ಳಲಾಗದು'' ಎಂದರು. ಕಡೆಗೆ ನಾನು ಹೇಳಿದ್ದು: ''ಈ ವಿಷಯವಾಗಿ ಕುರ್‌ಆನ್ ೫ : ೪೮ನೆಯ ಶ್ಲೋಕದಲ್ಲಿ ಸ್ಪಷ್ಟವಾಗಿ ಸೂಚಿಸಿರುವಂತೆ ಇದನ್ನು ಅಲ್ಲಾಹನೇ ನಿರ್ಧರಿಸುವನೇ ವಿನಾ ನಮ್ಮಂತಹ ಮನುಷ್ಯರಲ್ಲ, ನಾವು ಮನುಷ್ಯರು ಯಾರು ಸರಿ ಹಾಗೂ ಯಾರು ತಪ್ಪು ಎನ್ನುವುದನ್ನು ತೀರ್ಮಾನಿಸುವುದಕ್ಕೆ ಬದಲಾಗಿ ಸುಕೃತ್ಯಗಳ ವಿಷಯವಾಗಿ ಪರಸ್ಪರರನ್ನು ಮೀರಿಸಲೆತ್ನಿಸಬೇಕು.

ದೈವಶಾಸ್ತ್ರಜ್ಞರು ಪರಸ್ಪರರಿಗೆ ಸವಾಲು ಹಾಕುತ್ತಾರೆ ಹಾಗೂ ಸಂಘರ್ಷದ ಸನ್ನಿವೇಶಗಳನ್ನು ಹುಟ್ಟುಹಾಕುತ್ತಾರೆ. ಆದರೆ ಸೂಫಿಗಳು, ಅದರಲ್ಲೂ ವಹದತ್ ಅಲ್-ವುಜೂದ್ (ಅಸ್ತಿತ್ವದ ಏಕತೆ) ತತ್ವಶಾಸ್ತ್ರದ ಸೂಫಿಗಳು ಧಾರ್ಮಿಕ ಹಾಗೂ ಸಾಂಸ್ಕೃತಿಕ ಬಹುತ್ವವನ್ನು ಒಪ್ಪಿಕೊಳ್ಳುತ್ತಾರೆ. ಕಾರಣ ಅವರ ತತ್ವಶಾಸ್ತ್ರದ ಪ್ರಕಾರ ಅಲ್ಲಾಹ್ ಪ್ರತಿಯೊಂದು ಜೀವಿಯಲ್ಲೂ ಪ್ರತಿಯೊಂದರಲ್ಲೂ ನೆಲೆಸಿರುತ್ತಾನೆ. ಹೀಗೆ ಎಲ್ಲ ಧರ್ಮಗಳ ಸಮಾನ ಸ್ಥಾನಮಾನ ಅವರಿಗೆ ಸಮಸ್ಯೆಯೇ ಅಲ್ಲ, ಅಷ್ಟೇ ಅಲ್ಲ, ಅವರು ಸ್ಥಳೀಯ ಭಾಷೆಗಳನ್ನು ಹಾಗೂ ಸ್ಥಳೀಯ ಸಂಪ್ರದಾಯಗಳನ್ನು ಯಾವುದೇ ರೀತಿಯ ಹಿಂಜರಿಕೆಯಿಲ್ಲದೆ ಒಪ್ಪಿಕೊಳ್ಳುತ್ತಾರೆ.

ದೈವಶಾಸ್ತ್ರಜ್ಞರು ಯಾವತ್ತೂ 'ಇಸ್ಲಾಮೀ ಪರಿಶುದ್ಧತೆ'ಗಾಗಿ ಹೆಣಗುತ್ತಾರೆ. ಆದರೆ ಸೂಫಿಗಳು ಸಾಂಸ್ಕೃತಿಕ ಸಂಕರಕ್ಕೆ ಹೆಚ್ಚಿನ ಮಹತ್ವ ನೀಡುತ್ತಾರೆ. ಆ ಕಾರಣಕ್ಕಾಗಿಯೇ ಮುಸ್ಲಿಂ ಜನಸಾಮಾನ್ಯರು ಸೂಫಿ ಸಂತರನ್ನು ಅಪಾರವಾಗಿ ಗೌರವಿಸುತ್ತಾರೆ, ಅವರ ಬಳಿ ಧಾವಿಸುತ್ತಾರೆ, ಅವರ ನಿಧನಾನಂತರ ಅವರ ಸಮಾಧಿಗಳಿಗೆ ಹಾಜರಿ ಕೊಡುತ್ತಾರೆ. ಇನ್ನು ದೈವಶಾಸ್ತ್ರಜ್ಞರ ಬಳಿ ಧಾವಿಸುವುದು, ಅವರ ಸಮಾಧಿಗೆ ಹಾಜರಿ ಕೊಡುವುದೊತ್ತಟ್ಟಿಗಿರಲಿ, ಅವರ ಬಗ್ಗೆ ಗೊತ್ತಿರುವುದು ಅಷ್ಟಕ್ಕಷ್ಟೆ. ಸೂಫಿ ಇಸ್ಲಾಂ ಇಂದಿಗೂ ಅಪಾರ ಜನಪ್ರಿಯತೆ ಗಳಿಸಿಕೊಂಡಿದೆ. ಕಾರಣ ಸಾಂಸ್ಕೃತಿಕ ಸಂಕರದಿಂದ ಅವರು ಸ್ಥಳೀಯರ ಮನಸ್ಸನ್ನು ಗೆದ್ದವರು.

ಬಹುತ್ವ ಹಾಗೂ ವೈವಿಧ್ಯ ನಮ್ಮ ಬದುಕನ್ನು ಶ್ರೀಮಂತಗೊಳಿಸಬಲ್ಲದು ಹಾಗೂ ಅದರ ಕೊರತೆ ನಮ್ಮ ಭಾಷೆ ಹಾಗೂ ಸಂಸ್ಕೃತಿಯನ್ನು ತೀರ ಅನಾಕರ್ಷಕಗೊಳಿಸುತ್ತದೆ ಎನ್ನುವುದು ಗಮನಾರ್ಹವಾದುದು. ಒಂದು ಧರ್ಮವನ್ನು ಲಕ್ಷಾಂತರ ಜನ ಅಂಗೀಕರಿಸಿದಾಗ, ಅದೂ ಅನೇಕ ಸಂಸ್ಕೃತಿಗಳು, ಭಾಷೆಗಳು, ಪರಂಪರೆಗಳು ಹಾಗೂ ಸಂಪ್ರದಾಯಗಳ ಜನರು ಅನುಸರಿಸುತ್ತಿದ್ದಾಗ ಅದರ ಗ್ರಹಿಕೆ ಹಾಗೂ ಅರಿವು ಏಕಪ್ರಕಾರದ್ದಾಗಿರುವುದಿಲ್ಲ. ಇಸ್ಲಾಂ ಅರೇಬಿಯಾಕ್ಕೆ ಸೀಮಿತವಾಗಿ ಉಳಿದಿದ್ದರೆ ಅದು ಏಕರೂಪದ್ದಾಗಿರುತ್ತಿತ್ತು. ಆದರೆ ಅದು ಜಗತ್ತಿನ ವಿಭಿನ್ನ ಪ್ರದೇಶಗಳಿಗೆ ಹಬ್ಬಿದ ನಂತರ ಸ್ಥಳೀಯ ತತ್ವಜ್ಞಾನ ಹಾಗೂ ಅನೇಕ ಸಂಪ್ರದಾಯಗಳನ್ನು ಅಪ್ಪಿಕೊಂಡಿರುತ್ತದೆ. ವಿಭಿನ್ನ ಸಾಂಸ್ಕೃತಿಕ ಸಂಪ್ರದಾಯಗಳು ಬೇರೆಲ್ಲೋ ಹುಟ್ಟಿದ ಧರ್ಮದ ಗ್ರಹಿಕೆಯನ್ನು ಗಾಢವಾಗಿ ಪ್ರಭಾವಿಸುತ್ತವೆ ಎಂದು ಹೇಳಬೇಕಾದ ಅಗತ್ಯವಿಲ್ಲ.

ಅರೇಬಿಯಾಕ್ಕೆ, ಇಸ್ಲಾಮಿಗಿಂತ ಮೊದಲು ಶ್ರೀಮಂತವಾದ ತಾತ್ವಿಕ ಹಾಗೂ ಸಾಂಸ್ಕೃತಿಕ ಪರಂಪರೆ ಇದ್ದಿರಲಿಲ್ಲ. ಲಿಖಿತ ಪರಂಪರೆಗಳೂ ಇದ್ದಿರಲಿಲ್ಲ. ಬುಡಕಟ್ಟು ಸಂಸ್ಕೃತಿಯಲ್ಲಿರುವ ಹಾಗೆ ಲಿಖಿತ ಸಂಪ್ರದಾಯಗಳಿಗಿಂತ ಮೌಖಿಕ ಸಂಪ್ರದಾಯಗಳಿಗೇ ಹೆಚ್ಚಿನ ಒತ್ತು ನೀಡಲಾಗಿತ್ತು. ಕುರ್‌ಆನ್ ಮೊದಲ ಲಿಖಿತ ಪಠ್ಯವಾಗಿತ್ತು. ಅದರ ಭಾಷೆ, ಆಧ್ಯಾತ್ಮಿಕತೆ ಹಾಗೂ ತಾತ್ವಿಕ ಆಳ ಅನನ್ಯವಾಗಿತ್ತು. ಅದರ ಸರಳವಾದ, ಆದರೆ ಅಗಾಧ ಆಧ್ಯಾತ್ಮಿಕತೆ ಹಾಗೂ ತಾತ್ವಿಕ ಆಳ, ಅದೂ ಓದಲು ಬರೆಯಲು ಬಾರದ ವ್ಯಕ್ತಿಯೊಬ್ಬನ ಸಾಧನೆ ಇದು ಎನ್ನುವುದು ಪವಾಡಕ್ಕಿಂತ ಕಡಿಮೆಯೇನೂ ಆಗಿರಲಿಲ್ಲ.

ಅದೇನೆ ಇರಲಿ, ತಮ್ಮ ಏಕರೂಪದ, ಸರಳವಾದ ಸಂಪ್ರದಾಯಗಳಿಂದಾಗಿ ಅರಬರು ಕುರ್‌ಆನ್‌ನ ತಾತ್ವಿಕ ಹಾಗೂ ಆಧ್ಯಾತ್ಮಿಕ ಶ್ರೀಮಂತಿಕೆಯನ್ನು ಸಮಗ್ರವಾಗಿ ಗ್ರಹಿಸದಾದರು. ತಾತ್ವಿಕತೆ ಹಾಗೂ ಆಧ್ಯಾತ್ಮಿಕತೆಗಿಂತ ಹೆಚ್ಚಾಗಿ ಅದನ್ನು ಭಾಷಿಕವಾಗಿ ಅರ್ಥೈಸಿಕೊಳ್ಳಲಾಯಿತು. ಆದರೆ ಇರಾನ್ ಹಾಗೂ ಭಾರತದಂತಹ ಇತರ ನಾಗರಿಕತೆಗಳಿಗೆ ಅದು ಪ್ರಸರಿಸಿದಾಗ ಅದು ಶ್ರೀಮಂತಿಕೆ, ಸಂಕೀರ್ಣತೆ ಹಾಗೂ ಆಳವನ್ನು ಗಳಿಸಿಕೊಳ್ಳತೊಡಗಿತು. ಆದರೆ ಅದು ಬಂದಿದ್ದು ಒಂದು ಬೆಲೆಗೆ, ಅಂದರೆ ವೈವಿಧ್ಯತೆಯ ಬೆಲೆಗೆ.

ಅಷ್ಟೇ ಅಲ್ಲ, ಪ್ರವಾದಿಯ ನಿಧನಾನಂತರ ಮೊದಲ ದಶಕದಲ್ಲೇ ಅರಬರಿಗೆ ಇಸ್ಲಾಂ ಅಂತರರಾಷ್ಟ್ರೀಯ ಧರ್ಮವಾಗಿಬಿಟ್ಟಿತು. ಮೊದಲನೆಯ ಹಿಜರಿ ಶತಮಾನದ ನಂತರ ಅದು ಏಷ್ಯಾ ಹಾಗೂ ಆಫ್ರಿಕಾದ ಬಹುತೇಕ ಪ್ರದೇಶಗಳಿಗೆ ಮತ್ತು ಯುರೋಪ್‌ನ ಕೆಲ ಪ್ರದೇಶಗಳಿಗೆ ಪ್ರಸರಿಸಿತು. ಈ ದೇಶಗಳಲ್ಲಿ ಅದು ಆಂತರಿಕ ವೈವಿಧ್ಯತೆಯ ಜೊತೆ ಅಷ್ಟೇ ಅಲ್ಲ, ಬಾಹ್ಯ ವೈವಿಧ್ಯತೆಯ ಜೊತೆ ಸಹ ಮುಖಾಮುಖಿಯಾಗಬೇಕಾಯಿತು, ಅಂದರೆ ಅದು ಇತರ ಧಾರ್ಮಿಕ ಸಂಪ್ರದಾಯಗಳೊಂದಿಗೆ ತನ್ನ ಅಸ್ತಿತ್ವವನ್ನು ಮುಂದುವರಿಸಿಕೊಳ್ಳಬೇಕಾಯಿತು. ಹೀಗೆ ಈಗ ಇಸ್ಲಾಂ ಒಳಗಿನಿಂದ ಹಾಗೂ ಹೊರಗಿನಿಂದ ಸವಾಲನ್ನೆದುರಿಸಬೇಕಾಯಿತು.

ಒಳಗಿನ ಸವಾಲು ಸಾಮಾನ್ಯ ಸವಾಲಾಗಿರಲಿಲ್ಲ, ಮುಂದೆ ಹೊರಗಿನ ಸವಾಲು ಪರಿಸ್ಥಿತಿಯನ್ನು ಇನ್ನಷ್ಟು ಸಂಕೀರ್ಣಗೊಳಿಸಿತು. ಅದು ಬರಿ ಅಸ್ತಿತ್ವದ ಪ್ರಶ್ನೆಯಾಗಿರದೆ ಅಧಿಕಾರಕ್ಕಾಗಿ ಇದ್ದ ಪೈಪೋಟಿಯೂ ಆಗಿತ್ತು. ಅರೇಬಿಯಾದಲ್ಲಿನ ಅನನ್ಯವಾದ ಐತಿಹಾಸಿಕ ಸನ್ನಿವೇಶದಿಂದ ದೈವಶಾಸ್ತ್ರಜ್ಞರು, ಇಸ್ಲಾಮಿನಲ್ಲಿ ಧರ್ಮ ಹಾಗೂ ರಾಜಕೀಯ ಅಧಿಕಾರ



ಜೊತೆ ಜೊತೆಗೇ ಸಾಗುವಂತಹವು ಎನ್ನುವ ಸಿದ್ಧಾಂತವನ್ನು ರೂಪಿಸಿದರು. ವಾಸ್ತವದಲ್ಲಿ ಈ ಸಿದ್ಧಾಂತವನ್ನು ಕುರ್‌ಆನ್‌ನ ಯಾವುದೇ ಪಠ್ಯದಿಂದ ದೃಢೀಕರಿಸಲಾಗದು. ಆದರೆ ಅದು ಅರೇಬಿಯಾದಲ್ಲಿ ಸಂಪೂರ್ಣವಾಗಿ ಶೂನ್ಯ ಅಧಿಕಾರದ ಫಲವಾಗಿತ್ತು. ಇಸ್ಲಾಂ ಅಂತರರಾಷ್ಟ್ರೀಯ ಧರ್ಮವಾಗುತ್ತಲೇ, ಇಸ್ಲಾಮಿಗೆ ಮುಂಚೆ ಅಲ್ಲಿ ಆಳ್ವಿಕೆ ನಡೆಸಿದ ಅರಸೊತ್ತಿಗೆಯಾಗಲೀ ಅಥವಾ ಯಾವುದೇ ರೂಪದಲ್ಲಿ ರಾಜಕೀಯ ಅಧಿಕಾರವಾಗಲೀ ಇರದೇ ಇದ್ದಾಗ ಮುಸ್ಲಿಮರು ಸಹ ಆಡಳಿತಗಾರರಾದರು.

ಈಗ ಈ ದೈವಶಾಸ್ತ್ರೀಯ ಸಿದ್ಧಾಂತದೊಂದಿಗೆ ಸನ್ನದ್ಧರಾಗಿ ಮುಸ್ಲಿಮರು ರಾಜಕೀಯ ಅಧಿಕಾರದ ಆಕಾಂಕ್ಷಿಗಳಾಗಿ ರೋಮನ್ ಸಾಮ್ರಾಜ್ಯಕ್ಕೆ ಅಧೀನವಾಗಿದ್ದ ಹಲವಾರು ದೇಶಗಳ ಕ್ರಿಶ್ಚಿಯನ್ ಅರಸರೊಂದಿಗೆ, ಇಲ್ಲವೇ ಪರ್ಶಿಯಾದ ಕ್ರಿಶ್ಚಿಯನೇತರ ಶಕ್ತಿಗಳೊಂದಿಗೆ ಹಣಾಹಣಿಗಿಳಿದರು. ರಾಜಕೀಯ ಅಧಿಕಾರದ ಈ ಹಣಾಹಣಿಯನ್ನು ಸಹ ಧರ್ಮಗಳ ಹಣಾಹಣಿಯೆಂದು ಪರಿಗಣಿಸಲಾಯಿತು. ವಾಸ್ತವದಲ್ಲಿ ಕುರ್‌ಆನ್‌ನ ಬೋಧನೆಗಳಲ್ಲಿ ಧರ್ಮಗಳ ಹಣಾಹಣಿಗೆ ಅವಕಾಶವೇ ಇಲ್ಲ. ಆ ಪ್ರದೇಶದ ಎರಡು ಮಹಾನ್ ಧಾರ್ಮಿಕ ಪರಂಪರೆಗಳಾದ ಜುಡಾಯಿಸಂ ಹಾಗೂ ಕ್ರಿಶ್ಚಿಯನ್ ಧರ್ಮಗಳನ್ನು ಅಲ್ಲಾಹನ ಪ್ರವಾದಿಗಳು ಹುಟ್ಟುಹಾಕಿದ ಧರ್ಮಗಳೆಂದು ಸಮ್ಮತಿಸಲಾಗಿತ್ತು. ಮುಸ್ಲಿಮರಿಗೆ ಗ್ರಂಥದ ಜನರ, ಅಂದರೆ ಜುಡಾಯಿಸಂ ಮತ್ತು ಕ್ರಿಶ್ಚಿಯನ್ ಧರ್ಮದವರ ಮಹಿಳೆಯರನ್ನು ಮದುವೆಯಾಗಲು ಅನುಮತಿ ನೀಡಲಾಗಿತ್ತು. ಧರ್ಮಗಳ ಘರ್ಷಣೆಯೇ ಇದ್ದಿರಲಿಲ್ಲ ಹಾಗೂ ಕುರ್‌ಆನ್ ಧಾರ್ಮಿಕ ಬಹುತ್ವವನ್ನು ಸಮ್ಮತಿಸಿತೆನ್ನುವುದನ್ನು ಇದು ಸಹ ಸ್ಪಷ್ಟವಾಗಿ ಎತ್ತಿ ತೋರಿಸುತ್ತದೆ.

ಇಸ್ಲಾಮೀ ಆಡಳಿತಗಳು ಎಂದೂ ಯಹೂದಿಯರನ್ನು, ಕ್ರಿಶ್ಚಿಯನ್ನರನ್ನು ದಂಡಿಸಲಿಲ್ಲ. ಅನೇಕ ಯಹೂದಿಯರು ಹಾಗೂ ಕ್ರಿಶ್ಚಿಯನ್ನರು ಅಬ್ಬಾಸಿ, ಫಾತಿಮಿ ಮತ್ತಿತರ ಇಸ್ಲಾಮೀ ಸಾಮ್ರಾಜ್ಯಗಳಲ್ಲಿ ಉನ್ನತ ಆಡಳಿತಾತ್ಮಕ ಹುದ್ದೆಗಳಲ್ಲಿದ್ದರೆನ್ನುವುದು ಸಹ ಚರಿತ್ರೆಯ ಸುಪರಿಚಿತ ವಾಸ್ತವವಾಗಿದೆ. ಆದರೆ ಉಳಿದಂತೆ ಅಧಿಕಾರಕ್ಕಾಗಿ ನಡೆದ ಪೈಪೋಟಿ ಕೂಡ ಘರ್ಷಣೆಗೆ ದಾರಿ ಮಾಡಿಕೊಟ್ಟಿತು, ವಿಶೇಷವಾಗಿ ಕ್ರಿಶ್ಚಿಯನ್‌ರೊಂದಿಗೆ. ಯಹೂದಿಯರೊಂದಿಗೆ ಇಂತಹ ಘರ್ಷಣೆಗಳಾಗಲಿಲ್ಲ, ಕಾರಣ ಯಹೂದಿಯರಿಗೆ ತಮ್ಮದೇ ಆದ ಸಾಮ್ರಾಜ್ಯವಿದ್ದಿರಲಿಲ್ಲ.

ಯಹೂದಿಯರು ಮಧ್ಯಪ್ರಾಚ್ಯದಾದ್ಯಂತ ಸಂಪೂರ್ಣ ಧಾರ್ಮಿಕ ಸ್ವಾತಂತ್ರ್ಯ ಅನುಭವಿಸಿದರು. ೧೯೪೮ರಲ್ಲಿ ಪ್ಯಾಲೆಸ್ಟೈನ್ ಪ್ರದೇಶದಲ್ಲಿ ಇಸ್ರೇಲ್‌ಅನ್ನು ಸ್ಥಾಪಿಸುವವರೆಗೆ ಅವರು ಶಾಂತಿಯಿಂದ ಸಹಬಾಳ್ವೆ ಮಾಡಿದರು. ಇದೇ ಯಹೂದಿಯರೊಂದಿಗಿನ ಘರ್ಷಣೆ ಧಾರ್ಮಿಕ ಸ್ವರೂಪದ್ದಾಗಿರದೆ ರಾಜಕೀಯ ಸ್ವರೂಪದ್ದಾಗಿತ್ತು ಎನ್ನುವುದನ್ನು ತೋರಿಸಿ ಕೊಡುತ್ತದೆ. ಪ್ಯಾಲೆಸ್ಟೈನ್ ಸಮಸ್ಯೆ ಆಧುನಿಕ ಇಸ್ಲಾಮೀ ಇತಿಹಾಸದಲ್ಲಿ ಒಂದು ಹುಣ್ಣಾಗಿ ಪರಿಣಮಿಸಿದೆ. ಅಮೇರಿಕ-ಅರಬ್ ಸಂಬಂಧದ್ದು ಇದಕ್ಕಿಂತ ಭಿನ್ನವಾದ ಕತೆಯಲ್ಲ. ಹಾರ್ವರ್ಡ್ ವಿದ್ವಾಂಸ ಪ್ರೊ॥ ಹಂಟಿಂಗ್ಟನ್ ಯಾವುದನ್ನು ನಾಗರಿಕತೆಗಳ ಘರ್ಷಣೆ ಎಂದನೋ ಅದು ನಾಗರಿಕತೆಗಳ ಘರ್ಷಣೆಯಾಗಿರದೆ ಹಿತಾಸಕ್ತಿಗಳ ಘರ್ಷಣೆಯಾಗಿದೆ.

ಮುಸ್ಲಿಮರು ಅಮೇರಿಕವನ್ನು ದ್ವೇಷಿಸುವುದಿಲ್ಲ. ಆದರೆ ಇಸ್ರೇಲ್‌ಗೆ ಅದರ ಬೇಷರತ್ತಾದ ಬೆಂಬಲಕ್ಕೆ ಅವರ ವಿರೋಧವಿದೆ. ಪ್ಯಾಲೆಸ್ಟೀನಿಯನ್ನರ ಹಕ್ಕುಗಳ ದಮನ, ಅವರನ್ನು ಮನೆಮಾರುಗಳಿಂದ ಹೊರಹಾಕುವುದಕ್ಕೆ ಅವರ ವಿರೋಧವಿದೆ. ಅದು ಇನ್ನೂ ಮುಂದುವರಿದಿದೆ. ಮಾಧ್ಯಮಗಳು ಬಿಂಬಿಸುವಂತೆ ಅದು ಕ್ರಿಶ್ಚಿಯನ್ ಹಾಗೂ ಇಸ್ಲಾಮ್ ಧರ್ಮಗಳ ನಡುವಣ ಸಮರವಾಗಿರದೆ ದುರಾಡಳಿತಗಾರರು ಹಾಗೂ ದಮನಿತರ ನಡುವಣ ಘರ್ಷಣೆಯಾಗಿದೆ. ಅಮೇರಿಕ ಅರಬರ ವಿಷಯದಲ್ಲಿ ಆಯ್ಕೆಯ ವಿಧಾನವನ್ನು ಅನುಸರಿಸುತ್ತದೆ. ಎಲ್ಲೆಲ್ಲಿ ಅದು ಅರಸರು, ಸರ್ವಾಧಿಕಾರಿಗಳು ಹಾಗೂ ಅಲ್ಲಿ ಶೇಖ್‌ರನ್ನು ಅಧಿಕಾರದ ಗದ್ದುಗೆಯಲ್ಲಿ ಸ್ಥಾಪಿಸಿದೆಯೊ, ಇಲ್ಲವೇ ಬೆಂಬಲಿಸುತ್ತಿದೆಯೋ ಅವರನ್ನು ಅದು ತನ್ನ ಮಿತ್ರರೆಂದು ಪರಿಗಣಿಸುತ್ತದೆ, ಸೌದಿ, ಕುವೇತ್, ಕತಾರ್ ಮತ್ತಿತರ ಕೊಲ್ಲಿ ಸರ್ಕಾರಗಳ ಜೊತೆ ಅತ್ಯಂತ ಒಳ್ಳೆಯ ಸಂಬಂಧಗಳನ್ನು ಹೊಂದಿದೆ. ಕುತೂಹಲಕರ ಸಂಗತಿಯೆಂದರೆ ಸರ್ವಾಧಿಕಾರಿಗಳಲ್ಲೂ ತನ್ನ ತಾಳಕ್ಕೆ ತಕ್ಕಂತೆ ಕುಣಿಯಲೊಪ್ಪದ ಸದ್ದಾಂ ಹುಸೇನ್, ಸಿರಿಯಾದ ಅಸದ್‌ರಂತಹವರನ್ನು ಅದು ದ್ವೇಷಿಸುತ್ತದೆ. ಇರಾನಿ ಸರ್ಕಾರ ದೊಂದಿಗೂ ಅದಕ್ಕೆ ವಿರೋಧವಿದೆ. ನಿನ್ನೆ ಮೊನ್ನೆವರೆಗೆ ಅದು ಶಾಹ್ ಜೊತೆಗೆ ತುಂಬ ಮೈತ್ರಿಪೂರ್ಣ ಸಂಬಂಧ ಹೊಂದಿತ್ತು.

ಸಮಸ್ಯೆಯಾಗುವುದು ಧಾರ್ಮಿಕ ಬಹುತ್ವವಲ್ಲ. ಆದರೆ ಸಮಸ್ಯೆಯಾಗುವುದು ಧಾರ್ಮಿಕ ಬಹುತ್ವದಿಂದ ಹೊರಹೊಮ್ಮುವ ಹಿತಾಸಕ್ತಿಗಳ ಸಂಘರ್ಷ ಒಮ್ಮೊಮ್ಮೆ – ಯಾವತ್ತೂ ಅಲ್ಲ– ಸಮಸ್ಯೆಯಾಗುತ್ತದೆ. ಹೀಗಾಗಿ ಧಾರ್ಮಿಕ ಬಹುತ್ವವನ್ನು ಆದರದೇ ದೃಷ್ಟಿಕೋನದಲ್ಲಿ ಅರಿತುಕೊಳ್ಳಬೇಕು. ಅಷ್ಟೇ ಅಲ್ಲ, ಬದಲಾಗುತ್ತಿರುವ ಸನ್ನಿವೇಶದೊಂದಿಗೇ ಧಾರ್ಮಿಕ ಬಹುತ್ವದ ಸ್ವರೂಪವೂ ಬದಲಾಗುತ್ತದೆ. ಇಂದು ಪಾಶ್ಚಿಮಾತ್ಯ ಕ್ರಿಶ್ಚಿಯನ್ನರು ಹಾಗೂ ಯಹೂದಿಯರ ನಡುವೆ ಬಲವಾದ ಒಗ್ಗಟ್ಟಿದೆ ಎಂದು ತೋರುತ್ತಿದೆ. ಮಧ್ಯ ಯುಗದಲ್ಲಿ ಯಹೂದಿಯರನ್ನು ದ್ವೇಷಿಸಲಾಗುತ್ತಿತ್ತು ಹಾಗೂ ಅವರ ಸಾಮೂಹಿಕ ಹತ್ಯೆಗಳಾಗುತ್ತಿದ್ದವು. ಜರ್ಮನಿಯಲ್ಲಿ ಹಿಟ್ಲರ್ ಲಕ್ಷಾಂತರ ಸಂಖ್ಯೆಯಲ್ಲಿ ಅವರ ಕಗ್ಗೊಲೆ ಮಾಡಿದ. ಇಂದು ಇಡೀ ಪಶ್ಚಿಮವೇ ಪ್ಯಾಲೆಸ್ಟೀನಿಯನ್ನರನ್ನು ದಮನಿಸಲು ಯಹೂದಿಯರ ಬೆಂಬಲಕ್ಕೆ ನಿಲ್ಲದೆ ಝಿಯೊನಿಸ್ಟ್‌ರ ಪರವಾಗಿದೆ.

ಯಾವತ್ತಿಗೂ ಶಾಶ್ವತ ಮಿತ್ರರು ಹಾಗೂ ಶಾಶ್ವತ ಶತ್ರುಗಳೆಂದು ಇರುವುದಿಲ್ಲ. ಅಧಿಕಾರಕ್ಕೆ ತನ್ನದೇ ಆದ ತರ್ಕವಿರುತ್ತದೆ. ಒಬಾಮ ಇಸ್ಲಾಮೀ ಜಗತ್ತಿಗೆ ತನ್ನ ಮೈತ್ರಿಯ ಹಸ್ತ ಚಾಚಿದರು ಹಾಗೂ ಮುಸ್ಲಿಮರು ಅಮೇರಿಕದ ಅಧ್ಯಕ್ಷನಾಗಿ ಅವರ ಆಯ್ಕೆಯನ್ನು ಸ್ವಾಗತಿಸಿದರು. ಅದೇ ಒಬಾಮ ಈಗ ಇಸ್ಲಾಮೀ ಜಗತ್ತಿಗೆ ಸಂಬಂಧಿಸಿದಂತೆ ತನ್ನ ಕ್ರಿಯಾ ಯೋಜನೆಯನ್ನು ಬದಲಾಯಿಸಿಕೊಳ್ಳುತ್ತಿದ್ದಾರೆ. ತನ್ನ ಮೈತ್ರಿಯ ಹಸ್ತವನ್ನು ಹಿಂತೆಗೆದು ಕೊಳ್ಳುವ ಯೋಚನೆಯಲ್ಲಿದ್ದಂತಿದೆ.

ಧಾರ್ಮಿಕ ಬಹುತ್ವ ತನ್ನಷ್ಟಕ್ಕೇ ಅತ್ಯಂತ ಪ್ರಯೋಜನಕಾರಿಯಾಗಿದ್ದು ಅದನ್ನು ಬಲಪಡಿಸಲೇಬೇಕು. ಜಾಗತೀಕರಣಗೊಂಡಿರುವ ಭೂಮಂಡಲದ ಯಾವುದೇ ಪ್ರದೇಶ ಎಂದೂ ಏಕಧರ್ಮೀಯ ಇಲ್ಲವೇ ಏಕಸಾಂಸ್ಕೃತಿಕವಾಗಿರಲಾರದು. ಒಂದು ಕಾಲಕ್ಕೆ ಅಮೇರಿಕ ತನ್ನ ಅಸ್ಮಿತೆಯನ್ನು ಕರಗಿಸುವ ಪಾತ್ರೆಯ ಮಾದರಿಯ ಬಗ್ಗೆ ಹೆಮ್ಮೆ ಪಡುತ್ತಿತ್ತು. ಕಾರಣ ಯುರೋಪ್‌ನಿಂದ ಅಮೇರಿಕಕ್ಕೆ ಬಂದವರೆಲ್ಲ ಪ್ರೊಟೆಸ್ಟಂಟ್ ಕ್ರಿಶ್ಚಿಯನ್ನರಾಗಿದ್ದರು. (ಆ ಪೈಕಿ ಬಹುತೇಕರು ಕೆಥೋಲಿಕ್ ಚರ್ಚ್‌ನ ಧಾರ್ಮಿಕ ಚಿತ್ರಹಿಂಸೆಗೆ ಗುರಿಯಾದವರೇ ಆಗಿದ್ದರು.) ಯುರೋಪ್‌ನಿಂದ ಬಂದ ವಲಸೆಗಾರರು ಪ್ರೊಟೆಸ್ಟಂಟ್ ಆಗಿರುವವರೆಗೆ ಮಾತ್ರ ಆ ಮಾದರಿ ನ್ಯಾಯಸಮ್ಮತವಾಗಿ ಉಳಿಯಿತು.

ಆದರೆ ಅದು ಈಗ ಹಾಗೆಯೇ ಉಳಿದಿಲ್ಲ. ಎರಡನೆಯ ವಿಶ್ವ ಯುದ್ಧದ ನಂತರ ವಲಸೆಗಾರರು ಏಷ್ಯಾ ಹಾಗೂ ಆಫ್ರಿಕಾದ ವಸಾಹತೋತ್ತರ ದೇಶಗಳಿಂದ ಬರತೊಡಗಿದರು. ಅವರು ಅಮೇರಿಕನ್ನರ ಅಸ್ಮಿತೆಗಳೊಂದಿಗೆ ತಮ್ಮ ಅಸ್ಮಿತೆಯನ್ನು ವಿಲೀನಗೊಳಿಸಲು ನಿರಾಕರಿಸಿದರು. ಹೀಗೆ ಕರಗಿಸುವ ಪಾತ್ರೆ ಅಪ್ರಸ್ತುತವಾಯಿತು. ಅದರ ಸ್ಥಾನಕ್ಕೆ ಮೊಸೇಯಿಕ್ (ಬಹುಮುಖೀ) ಮಾದರಿ ಬಂದಿತು. ಯುರೋಪಿಯನ್ನೇತರ ದೇಶಗಳ ಹಾಗೂ ಕ್ರಿಶ್ಚಿಯನ್ನೇತರ ವಲಸೆಗಾರರೆಲ್ಲ ತಮ್ಮನ್ನು ತಮ್ಮ ಮೂಲ ಅಸ್ಮಿತೆಗಳ ಮೂಲಕ, ಅಂದರೆ ಆಫ್ರಿಕನ್ ಅಮೇರಿಕನ್, ಅರಬ್ ಅಮೇರಿಕನ್, ಇಂಡಿಯನ್ ಅಮೇರಿಕನ್ ಇತ್ಯಾದಿಯಾಗಿ ಪರಿಚಯಿಸಿಕೊಳ್ಳತೊಡಗಿದ್ದಾರೆ.

ಮೊಸೇಯಿಕ್ ಮಾದರಿ ಬಹುತ್ವದ ಆಶಯಕ್ಕೆ ಹೆಚ್ಚು ಹತ್ತಿರವಾಗಿದೆ. ಹೀಗೆ ಬಹುತ್ವದ ಸಮಸ್ಯೆಗಳನ್ನು ಪ್ರಜಾಸತ್ತಾತ್ಮಕ ಆಶಯ ಹಾಗೂ ಸಹಬಾಳ್ವೆ ನಡೆಸುವ ಎಲ್ಲ ಧಾರ್ಮಿಕ ಸಮುದಾಯಗಳಿಗೆ ನ್ಯಾಯದ ಮೂಲಕ ಪರಿಹರಿಸಬಹುದು. ಹೀಗೆ ಇಂದಿನ ಜಗತ್ತಿನಲ್ಲಿ ಪ್ರಜಾಸತ್ತೆ, ವೈವಿಧ್ಯ ಹಾಗೂ ಸಂವಾದಗಳು ಶಾಂತಿಯುತ ಸಹಬಾಳ್ವೆಗೆ ಅತ್ಯಂತ ಮಹತ್ವದ್ದಾಗಿವೆ. ಆದರೆ ವಿಷಾದದ ಸಂಗತಿ ಎಂದರೆ ೨೧ನೆಯ ಶತಮಾನದಲ್ಲೂ ನಮ್ಮ ಜಗತ್ತಿನಲ್ಲಿ ಈ ಆದರ್ಶಗಳು ಹಾಗೂ ಮೌಲ್ಯಗಳ ಬರವಿದೆ.



ಮೂಲ : **ಡಾ॥ ಅಸ್ಗರ್‌ಅಲಿ ಎಂಜಿನಿಯರ್**
ಕನ್ನಡಕ್ಕೆ : **ಹಸನ್ ನಯೀಂ ಸುರಕೋಡ**
ನಂ. ೧೪೯, ಮಡ್ಡಿಗಲ್ಲಿ, ರಾಮದುರ್ಗ - ೫೯೧ ೧೨೩, ಬೆಳಗಾವಿ ಜಿಲ್ಲೆ



# ನ್ಯಾಯಮೂರ್ತಿ ಎ. ಜೆ. ಸದಾಶಿವ ಆಯೋಗ ವರದಿ ಜಾರಿಯಾಗಲೇಬೇಕು!

೧೯೩೧ರಲ್ಲಿ ನಡೆದ ಜನಗಣತಿಯಲ್ಲಿ ಪರಿಶಿಷ್ಟ ಜಾತಿಯ ಪಟ್ಟಿಯಲ್ಲಿ ಮಾದಿಗ ಮತ್ತು ಹೊಲೆಯರನ್ನು ಹಾಗೂ ಸ್ವಾತಂತ್ರ್ಯಾನಂತರ ಕೊರಮ, ಕೊರಚ ಮತ್ತು ಕೆಲವು ಅಲೆಮಾರಿ ಜಾತಿಗಳನ್ನು ಮಾತ್ರ ಸೇರಿಸಲಾಗಿತ್ತು. ಎಲ್. ಜಿ. ಹಾವನೂರು ಆಯೋಗದ (೧೯೭೨) ಶಿಫಾರಸ್ಸಿನಂತೆ ಒಕ್ಕಲಿಗ ಮತ್ತು ಕೆಲವು ಲಿಂಗಾಯತ ಉಪಜಾತಿಗಳನ್ನು ಹಿಂದುಳಿದ ವರ್ಗಕ್ಕೆ ಸೇರಿಸಿ, ಹಿಂದುಳಿದ ವರ್ಗದ ಕೆಲವು ಜಾತಿಗಳನ್ನು ಪರಿಶಿಷ್ಟ ವರ್ಗಕ್ಕೆ ಹಾಗೂ ಪರಿಶಿಷ್ಟ ವರ್ಗದಲ್ಲಿರುವ ಸ್ಪೃಶ್ಯ ಜಾತಿಯವರಾದ ಬೋವಿ ಮತ್ತು ಲಂಬಾಣಿ ಸಮುದಾಯವನ್ನು ಪರಿಶಿಷ್ಟ ಜಾತಿಗೆ ಸೇರಿಸಲಾಯಿತು. ಸ್ಪೃಶ್ಯಯೇತರ ಜಾತಿಗಳನ್ನು ಪರಿಶಿಷ್ಟರ ಪಟ್ಟಿಯಲ್ಲಿ ಸೇರಿಸುವುದೇ ಮೀಸಲಾತಿ ನಿಯಮಗಳ ಉಲ್ಲಂಘನೆ. ಕರ್ನಾಟಕವನ್ನು ಹೊರತುಪಡಿಸಿದರೆ ಬೋವಿ ಮತ್ತು ಲಂಬಾಣಿ ಜಾತಿಗಳು ಬೇರೆ ಯಾವ ರಾಜ್ಯದಲ್ಲೂ ಪರಿಶಿಷ್ಟ ಜಾತಿಯ ಪಟ್ಟಿ ಯಲ್ಲಿಲ್ಲ. ಏಕೆಂದರೆ, ಈ ಸ್ಪೃಶ್ಯ ಜಾತಿಗಳಿಗೆ ದಲಿತರ ಲಕ್ಷಣಗಳೇ ಇಲ್ಲ. ಅಸ್ಪೃಶ್ಯತೆಯು ವಾಸ್ತವದಲ್ಲಿ ದಲಿತರ ಜ್ಞಾನ, ವಿದ್ಯಾರ್ಹತೆ, ರಾಜಕೀಯ, ಆರ್ಥಿಕ, ಸಾಂಸ್ಕೃತಿಕ ಮತ್ತು ಅವರ ಸ್ಥಾನಮಾನಗಳ ಮೇಲೆ ಗಂಭೀರ ಪರಿಣಾಮ ಬೀರಿದೆ. ಆದ್ದರಿಂದ ಮೀಸಲಾತಿಗೆ ಅಸ್ಪೃಶ್ಯತೆಯೇ ಮಾನದಂಡವಾಗಿತ್ತು. ಆದರೆ ಇಂದು ನಮ್ಮನ್ನು ಆಳುವವರು ತಮ್ಮ ವೋಟು ಬ್ಯಾಂಕ್ ರಾಜಕಾರಣಕ್ಕಾಗಿ ಅಸ್ಪೃಶ್ಯರಲ್ಲದ ಕೆಲವು ಸ್ಪೃಶ್ಯ (ಬೋವಿ, ಲಂಬಾಣಿ ಇತ್ಯಾದಿ) ಜಾತಿಗಳನ್ನು ಪರಿಶಿಷ್ಟ ಜಾತಿ ಪಟ್ಟಿಯಲ್ಲಿ ಸೇರಿಸಿದ್ದಾರೆ.

ಕಳೆದ ಎಪ್ಪತ್ತರ ದಶಕದಿಂದ ಎಸ್. ಸಿ. ಪಟ್ಟಿಗೆ ಹಲವಾರು ಜಾತಿಗಳು ಸೇರ್ಪಡೆ ಗೊಂಡು ಈಗ ಒಟ್ಟು ೧೦೧ ಜಾತಿಗಳು ಎಸ್. ಸಿ. ಪಟ್ಟಿಯಲ್ಲಿವೆ. ಈ ೧೦೧ ಜಾತಿಗಳಲ್ಲಿ ಮುಖ್ಯವಾಗಿ ನಾಲ್ಕು ಗುಂಪುಗಳಿವೆ. ೧೯೭೬ರಲ್ಲಿ ನೇಮಕವಾದ ಹಾವನೂರು ವರದಿಯಲ್ಲಿ ಪರಿಶಿಷ್ಟ ಜಾತಿಗಳನ್ನು ಸುಮಾರು ನಾಲ್ಕು ಗುಂಪುಗಳನ್ನಾಗಿ ವಿಂಗಡಿಸಿದೆ. ಅವೆಂದರೆ :

೧. ಮಾದಿಗ ಮತ್ತು ಸಂಬಂಧಿತ ಜಾತಿಗಳು.

೨. ಮಾಲ/ಹೊಲೆಯ ಮತ್ತು ಸಂಬಂಧಿತ ಜಾತಿಗಳು.

೩. ಲಂಬಾಣಿ - ಬಂಜಾರ.

೪. ಕೊರಮ - ಕೊರಚ ಇತ್ಯಾದಿ.

ಈ ಮೇಲಿನ ಎರಡು ಗುಂಪುಗಳು (೧ ಮತ್ತು ೨) ಅಸ್ಪೃಶ್ಯ ಸಮುದಾಯಗಳಾದರೆ ೩ ಮತ್ತು ೪ ಗುಂಪುಗಳು ಸ್ಪೃಶ್ಯ ಸಮುದಾಯಗಳು. ಅಂಬೇಡ್ಕರ್ ಅವರು ಪ್ರತಿಪಾದಿಸುವಂತೆ ಮೀಸಲಾತಿಯ ಪ್ರಮುಖ ಆಧಾರ ಅಸ್ಪೃಶ್ಯತೆ. ಅಸ್ಪೃಶ್ಯತೆಯ ಜೊತೆ ಅಷ್ಟೇ ಸಮಾನವಾದ ಸಾಮಾಜಿಕ ಪಿಡುಗುಗಳಿಗೆ ಸಿಕ್ಕಿಕೊಂಡಿರುವ ಸಮುದಾಯಗಳನ್ನು ೧೯೭೭ ಜುಲೈ, ೨೭ರಲ್ಲಿ ಕೇಂದ್ರ ಸರಕಾರವು ನಂ. ಬಿ.ಸಿ.-೧೨೦೧೬/೩೪/೭೬-ಎಸ್‌ಸಿಟಿ-ವಿಯಲ್ಲಿ ಸೂಚಿಸಿರುವಂತೆ ತಿದ್ದುಪಡಿಮಾಡಿ ಆದೇಶ ಹೊರಡಿಸಿ ೧೯೫೬ ರಲ್ಲಿದ್ದ ಪರಿಶಿಷ್ಟ ವರ್ಗದ ಜಾತಿಗಳನ್ನು ಪರಿಶಿಷ್ಟ ಜಾತಿಯ ಪಟ್ಟಿಗೆ ಸೇರಿಸುವ ಮೂಲಕ ೧೦೧ ಜಾತಿಗಳ ಪಟ್ಟಿಯನ್ನು ಮಾಡಿದರು. ಇದರಿಂದ ಪರಿಶಿಷ್ಟ ಜಾತಿಗೆ ಶೇ. ೧೫ರಷ್ಟು ಇದ್ದ ಮೀಸಲಾತಿಯೊಳಗೆ ಇತರೆ ಜಾತಿಗಳನ್ನು ಸೇರಿಸಿದರೆ ವಿನಾ ಮೀಸಲಾತಿ ಪ್ರಮಾಣವನ್ನು ಹೆಚ್ಚಿಸಲಿಲ್ಲ. ಈ ತಾರತಮ್ಯದಿಂದಾಗಿ ನಮ್ಮ ರಾಜ್ಯದಲ್ಲಿ ಪರಿಶಿಷ್ಟ ಜಾತಿಯ ಸಮುದಾಯಕ್ಕೆ ರಾಜಕೀಯ, ಉದ್ಯೋಗ, ಶಿಕ್ಷಣ, ಆರ್ಥಿಕ ರಂಗಗಳಲ್ಲಿ ಸಮಾನವಾಗಿ ಹಂಚಿಕೆಯಾಗದೆ ಇರುವುದರಿಂದ ಪರಿಶಿಷ್ಟ ಜಾತಿಯ ಬಹುಸಂಖ್ಯಾತರಾದ ಮಾದಿಗ ಮತ್ತು ಸಂಬಂಧಿತ ಜಾತಿಗಳು (ಕರ್ನಾಟಕದಾದ್ಯಂತ) ಹಾಗೂ ಹೊಲೆಯ ಮತ್ತು ಸಂಬಂಧಿತ ಜಾತಿಗಳಿಗೆ (ಅತಿ ಹೆಚ್ಚು ಉತ್ತರ ಕರ್ನಾಟಕದಲ್ಲಿ) ಮೀಸಲಾತಿ ಹಂಚಿಕೆಯಲ್ಲಿ ಅನ್ಯಾಯವಾಗಿರುವುದನ್ನು

ದೇಶದಲ್ಲಿ ದಲಿತರ ಸಂಖ್ಯೆ ವರ್ಷದಿಂದ ವರ್ಷಕ್ಕೆ ಹೆಚ್ಚಾಗುತ್ತಿದೆ. ಆದ್ದರಿಂದ ತಮಿಳುನಾಡಿನಲ್ಲಿರುವ ಶೇ. ೬೭ ಮೀಸಲಾತಿಯಂತೆ ಕರ್ನಾಟಕದಲ್ಲೂ ಹೆಚ್ಚಿಸಿ ಜಾತಿಗಳ ಜನಸಂಖ್ಯೆಗನುಗುಣವಾಗಿ ಮೀಸಲಾತಿಯನ್ನು ವಿಂಗಡಣೆ ಮಾಡಬೇಕು. ಮೀಸಲಾತಿ ಅಸಮರ್ಪಕ ವಿತರಣೆ ಅಸಮಾನ ಹಂಚಿಕೆಯಿಂದ ದಲಿತ ಜಾತಿಗಳಲ್ಲಿ ಆಂತರಿಕ ಬಿಕ್ಕಟ್ಟು ಸೃಷ್ಟಿಯಾಗಿ ಸಂಬಂಧಗಳು ಕಳೆಯುತ್ತಿವೆ. ಇಂದು ಶೋಷಕ ಜಾತಿಗಳು ಒಂದಕ್ಕೊಂದು ಹತ್ತಿರವಾಗುತ್ತಿವೆ, ಆದರೆ ಶೋಷಿತ ಜಾತಿಗಳು ಒಂದಕ್ಕೊಂದು ದೂರವಾಗುವ ಬದಲು ಒಳ ಮೀಸಲಾತಿ ಕುರಿತು ದಲಿತರು ಒಟ್ಟಿಗೆ ಕುಳಿತು ಚರ್ಚಿಸಬೇಕು. ಇದನ್ನು ಲಾಭ - ನಷ್ಟದ ದೃಷ್ಟಿಯಿಂದ ಪರಿಗಣಿಸದೆ, ತಾಂತ್ರಿಕ ಕಾರಣಗಳಿಂದ ನೋಡದೆ ನ್ಯಾಯ, ಮಾನವೀಯ ಕಲ್ಪನೆಗಳಿಂದ ವಿಚಾರ ಮಾಡಬೇಕು. ಅದರ ಸಾಮಾಜಿಕ ಆರ್ಥಿಕ ಸಮಸ್ಯೆಗಳನ್ನು ಚರ್ಚಿಸಿ ಅದರ ಅನುಷ್ಠಾನಕ್ಕೆ ಒತ್ತಾಯಿಸಬೇಕು. ದಲಿತರಿಂದಲೇ ದಲಿತರ ಶೋಷಣೆಯಾಗಬಾರದು ಎಂದರೆ ಸರಕಾರ ಕೂಡಲೆ ಒಳ ಮೀಸಲಾತಿ ಜಾರಿಗೆ ತರಬೇಕು. ಮೀಸಲಾತಿ ವರ್ಗೀಕರಣ ಮಾಡಿದರೆ ದಲಿತರ ಜಾತಿ-ಜಾತಿಗಳಲ್ಲಿ ಸಮಾನತೆ, ಸೌಹಾರ್ದತೆ, ಜಾತ್ಯತೀತ, ಪರಸ್ಪರ ಸ್ನೇಹಸಂಬಂಧಗಳು ಬೆಳೆಯುತ್ತವೆ.

ನ್ಯಾಯಮೂರ್ತಿ ಎ. ಜೆ. ಸದಾಶಿವ ಆಯೋಗದ ವರದಿಯಲ್ಲಿ ತಿಳಿಸಿರುವುದು ಸತ್ಯ. ಈ ವರದಿಯನ್ನು ವಿರೋಧಿಸುತ್ತಿರುವ ಪಟ್ಟಭದ್ರ ರಾಜಕಾರಣಿಗಳು, ಬೋವಿ ಮತ್ತು ಲಂಬಾಣಿ ಸಂಘಟನಕಾರರು ಸತ್ಯಾಂಶವನ್ನು ಮರೆಮಾಚಿ, ಸದಾಶಿವ ಆಯೋಗವು ೧೦೧ ಜಾತಿಗಳ ಪೈಕಿ ಕೇವಲ ಮಾದಿಗ ಮತ್ತು ಹೊಲೆಯರಿಗೆ ಮಾತ್ರ ಮೀಸಲಾತಿಗೆ ಶಿಫಾರಸ್ಸು ಮಾಡಿದೆ, ಉಳಿದ ೯೯ ಜಾತಿಗಳಿಗೆ ಅನ್ಯಾಯವಾಗುತ್ತಿದೆ ಎಂದು ಹಾಗೂ ಇದು ಒಡೆದು ಆಳುವ ನೀತಿ ಎಂದು ಅಪಪ್ರಚಾರ ಮಾಡಿ ಗೊಂದಲ ಸೃಷ್ಟಿಸಿ ವಾದ ಮಾಡುತ್ತಿದ್ದಾರೆ.

ಪರಿಶಿಷ್ಟರಲ್ಲಿ ಹಂಚಿ ತಿನ್ನುವ ಔದಾರ್ಯ ತೋರಿದ್ದರಿಂದ ೧೯೭೬ರ ತಿದ್ದುಪಡಿಗೆ ವಿರೋಧ ವ್ಯಕ್ತಪಡಿಸದೆ ಇತರೆ ಸ್ಪೃಶ್ಯ ಜಾತಿಗಳನ್ನು ಸಮಾನರೆಂದು ಪರಿಗಣಿಸಿದ ಅಸ್ಪೃಶ್ಯ ಜಾತಿಗಳಾದ ಮಾದಿಗ ಮತ್ತು ಹೊಲೆಯ ಸಂಬಂಧಿತ ಜಾತಿಗಳ ವಿರುದ್ಧ ಷಡ್ಯಂತ್ರ ಮಾಡುತ್ತಿರುವುದು ಸಂವಿಧಾನಬಾಹಿರವಾದದ್ದು, ಒಳ ಮೀಸಲಾತಿಯಿಂದ ಅನ್ಯಾಯವಾಗುತ್ತಿದೆ ಎಂದು ಅಪಪ್ರಚಾರ ಮಾಡುತ್ತಿರುವವರು ಮತ್ತು ಸದಾಶಿವ ಆಯೋಗದ ವರದಿಯನ್ನು ವಿರೋಧಿಸುತ್ತಿರುವವರು ಪರಿಶಿಷ್ಟರ ೧೦೧ ಜಾತಿಗಳಲ್ಲಿ ಬೋವಿ ಮತ್ತು ಲಂಬಾಣಿಗಳು ಮಾತ್ರ.

ಉತ್ತರ ಕರ್ನಾಟಕದ ಅನೇಕ ಕಡೆ ತಾಲೂಕು ಮತ್ತು ಜಿಲ್ಲಾ ಪಂಚಾಯತಿ ಮಟ್ಟದ ಅಧಿಕಾರದಲ್ಲೂ ಅಸ್ಪೃಶ್ಯರನ್ನು (ಮುಖ್ಯವಾಗಿ ಮಾದಿಗರನ್ನು) ವಂಚಿತರನ್ನಾಗಿ ಮಾಡಿದ್ದಾರೆ. ಇಂದು ರಾಜ್ಯದಲ್ಲಿ ಬೋವಿ ಜನಾಂಗದ ೧೧ ಶಾಸಕರು, ಲಂಬಾಣಿ ಜನಾಂಗದ ೭ ಶಾಸಕರಿದ್ದಾರೆ. ಆದರೆ ಮಾದಿಗ ಜನಾಂಗದ ಶಾಸಕರು ೪, ಹೊಲೆಯ ಜನಾಂಗದ ಶಾಸಕರು ಇರುವುದು ಐವರು ಮಾತ್ರ. ಇದರರ್ಥ ರಾಜ್ಯದ ಅಧಿಕಾರದಲ್ಲೂ ಅಸ್ಪೃಶ್ಯರ ಪಾಲೂ ಗಣನೀಯವಾಗಿಲ್ಲ ಎಂಬುದು. ಅಸ್ಪೃಶ್ಯರ ರಾಜಕೀಯ ಮತ್ತು ಆರ್ಥಿಕ ಪ್ರಾತಿನಿಧ್ಯ ವರ್ಷದಿಂದ ವರ್ಷಕ್ಕೆ ಕಡಿಮೆಯಾಗುತ್ತಿದೆ. ಸ್ಪೃಶ್ಯರು ಮೇಲುವರ್ಗಗಳ ಜೊತೆ ಶಾಮೀಲಾಗಿ ಅಸ್ಪೃಶ್ಯ ಜಾತಿಗಳನ್ನು ರಾಜಕೀಯವಾಗಿ, ಆರ್ಥಿಕವಾಗಿ ತುಳಿಯುತ್ತಿದ್ದಾರೆ.

ಅಸ್ಪೃಶ್ಯರಿಗೆ ಸಿಗಬೇಕಾದ ಮೀಸಲಾತಿ ಸೌಲಭ್ಯಗಳನ್ನು ಸ್ಪೃಶ್ಯ (ಬೋವಿ, ಲಂಬಾಣಿ ಇತ್ಯಾದಿ) ಜಾತಿಗಳಿಗೆ ಸೇರಿದವರು ಪಡೆದುಕೊಳ್ಳುತ್ತಿದ್ದಾರೆ. ಸಾಮಾಜಿಕ, ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಮಾತನಾಡುವುದಾದರೆ ಈ ಸ್ಪೃಶ್ಯ (ಬೋವಿ, ಲಂಬಾಣಿ ಇತ್ಯಾದಿ) ಜಾತಿಗಳು ಮೀಸಲಾತಿ ಪಟ್ಟಿಯಲ್ಲಿರುವುದು ಅಸಂಗತ. ಅಸ್ಪೃಶ್ಯರು ಸಾಮಾಜಿಕ ಮತ್ತು ಆರ್ಥಿಕ ಅಸಮಾನತೆಯಿಂದ ನರಳುತ್ತಿದ್ದರೆ ಸ್ಪೃಶ್ಯ ಜಾತಿಯವರು ಆರ್ಥಿಕ ಅಸಮಾನತೆಯಿಂದ ಮಾತ್ರ ನರಳುತ್ತಿದ್ದಾರೆ. ನಮ್ಮ ಸಂವಿಧಾನ ಪ್ರಕಾರ ಮೀಸಲಾತಿಯ ಮಾನದಂಡ ಸಾಮಾಜಿಕ ಅಸಮಾನತೆಯೇ ಹೊರತು ಆರ್ಥಿಕ ಅಸಮಾನತೆಯ ಮಾನದಂಡವಲ್ಲ. ಅಸ್ಪೃಶ್ಯತೆಯ ನಿವಾರಣೆಗೆ ಮೀಸಲಾತಿಯನ್ನು ಜಾರಿಗೆ ತರಲಾಯಿತು. ಅದಕ್ಕೆ ಅಸ್ಪೃಶ್ಯತೆಯೇ ಮಾನದಂಡವಾಗಿತ್ತು.

ಮೀಸಲಾತಿಯಿಂದ ದಲಿತರ ಸಾಮಾಜಿಕ, ಆರ್ಥಿಕ, ರಾಜಕೀಯ, ಶೈಕ್ಷಣಿಕ... ಹೀಗೆ ಎಲ್ಲ ಕ್ಷೇತ್ರಗಳಲ್ಲಿ ಸ್ಥಾನ ಪಡೆದುಕೊಳ್ಳುತ್ತಾರೆಂದು ನಂಬಲಾಗಿತ್ತು. ಆದರೆ ಇಂದು ಮೀಸಲಾತಿ ಪಡೆದುಕೊಳ್ಳುತ್ತಿರುವವರು ಹಿಂದುಳಿದ ವರ್ಗಗಳು ಹಾಗೂ ಸ್ಪೃಶ್ಯ (ಬೋವಿ, ಲಂಬಾಣಿ ಇತ್ಯಾದಿ) ಜಾತಿಗಳು. ನಿಜವಾದ ಅಸ್ಪೃಶ್ಯ ದಲಿತರಿಗೆ ಮೀಸಲಾತಿ ಸೌಲಭ್ಯಗಳು ಸಿಗುತ್ತಿಲ್ಲ. ದೇಶವನ್ನು ಆಳುವ ಮೇಲುಜಾತಿಯವರು ದಲಿತರ ಮೀಸಲಾತಿ ಪಟ್ಟಿಯಲ್ಲಿ ಸ್ಪೃಶ್ಯ (ಬೋವಿ, ಲಂಬಾಣಿ ಇತ್ಯಾದಿ) ಜಾತಿಗಳನ್ನು ಸೇರಿಸಿ ಆ ಸೌಲಭ್ಯಗಳನ್ನು ಅವರು ಪಡೆದುಕೊಳ್ಳುವಂತೆ ಮಾಡಿ ಅಸ್ಪೃಶ್ಯ ಜಾತಿಗಳ ಜನರು ಮೇಲೆ ಬಾರದಂತೆ ಮಾಡಿದ್ದಾರೆ.

ಅಸ್ಪೃಶ್ಯರಲ್ಲಿ ಅಸ್ಪೃಶ್ಯರಾದ ಮಾದಿಗರಲ್ಲಿ ಹೆಚ್ಚಿನವರು ಭೂರಹಿತರು. ಕೃಷಿ ಕಾರ್ಮಿಕರಾಗಿ, ಪೌರಕಾರ್ಮಿಕರಾಗಿ, ಚರ್ಮಗಾರಿಕೆ ಕೆಲಸಗಾರರಾಗಿ ಕೆಲಸ ಮಾಡುತ್ತಾ ಜೀವನ ಸಾಗಿಸುತ್ತಿದ್ದಾರೆ. ಇವರು ತಮ್ಮ ಮಾನವೀಯ ಹಕ್ಕುಗಳಿಂದ ವಂಚಿತರಾಗಿದ್ದಾರೆ ಹಾಗೂ ಹಲವಾರು ಸಮಸ್ಯೆಗಳಿಂದ ನರಳುತ್ತಿದ್ದಾರೆ. ದಲಿತರಲ್ಲಿ ಮಾದಿಗ ಜನಾಂಗವು ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಎಲ್ಲ ನೆಲೆಗಳಲ್ಲಿ ದೀರ್ಘ ಕಾಲದಿಂದಲೂ ಎಲ್ಲ ವಿಧದ ಅನ್ಯಾಯ, ತುಳಿತಗಳಿಗೆ ಒಳಗಾಗಿರುವ ಸಮುದಾಯ. ೧೯೯೧ರ ಜನಗಣತಿಯ ಪ್ರಕಾರ ದಕ್ಷಿಣ ಭಾರತದಲ್ಲಿ ಮಾದಿಗರ ಜನಸಂಖ್ಯೆ ಶೇ. ೫೦ರಷ್ಟಿತ್ತು. ೧೯೭೫ರ ಎಲ್. ಜಿ. ಹಾವನೂರು ವರದಿಯ ಪ್ರಕಾರ ಪರಿಶಿಷ್ಟರಲ್ಲಿ ಶೇ. ೫೭.೨ರಷ್ಟು ಮಾದಿಗರು. ಒಂದು ಅಂದಾಜಿನಂತೆ ಕರ್ನಾಟಕದಲ್ಲಿ ಇರುವ ಮಾದಿಗರ ಜನಸಂಖ್ಯೆ ೮೫ ಲಕ್ಷ. ಸಂವಿಧಾನ ದತ್ತವಾಗಿ ಬಂದಿರುವ ಮೀಸಲಾತಿ ನೀತಿಯ ಪ್ರಕಾರ ಅವರಿಗೆ ಸರಕಾರಿ ಉದ್ಯೋಗ ಮತ್ತು ಶಿಕ್ಷಣದಲ್ಲಿ ಶೇ. ೧೫ರಲ್ಲಿ ಸಿಗಬೇಕಾದ ಪ್ರಮಾಣ ಶೇ. ೮ರಷ್ಟು, ಆದರೆ ಇದುವರೆಗೆ ಸರಕಾರಿ ಉದ್ಯೋಗ ಮತ್ತು ಶಿಕ್ಷಣದಲ್ಲಿ ಮೀಸಲಾತಿ ಅವರಿಗೆ ದಕ್ಕಿರುವುದು ಕೇವಲ ಶೇ. ೨ರಷ್ಟು ಮಾತ್ರ. ಬಹುಸಂಖ್ಯಾತರಾದ ಮಾದಿಗರಿಗೆ ನ್ಯಾಯಯುತ ಮೀಸಲಾತಿ ದೊರೆತಿಲ್ಲವೆಂಬ ಅತೃಪ್ತಿಯಿಂದ, ಅವರ ಹೆಸರಿನಲ್ಲಿ ಬಲಿಷ್ಠ ದಲಿತ ಜಾತಿಗಳಾದ ಹೊಲೆಯ (ಬಲಗೈ) ಮತ್ತು ಸ್ಪೃಶ್ಯ (ಬೋವಿ, ಲಂಬಾಣಿ) ಜಾತಿಯವರು ಅವಕಾಶಗಳನ್ನು ಪಡೆದುಕೊಳ್ಳುತ್ತಿದ್ದಾರೆ ಎಂದು ಆರೋಪಿಸುತ್ತ ತಮಗೆ ಆದ ಅನ್ಯಾಯವನ್ನು ಸರಿಪಡಿಸಿಕೊಳ್ಳಲು, ಇನ್ನೊಬ್ಬರ ಪಾಲು ನಮಗೆ ಬೇಡ, ನಮ್ಮ ಪಾಲಿನ ಹಕ್ಕನ್ನು ನಮಗೆ ಕೊಡಿ ಎಂದು, ಮತ್ತಿತರ ಹಕ್ಕುಗಳನ್ನು ಪಡೆದುಕೊಳ್ಳಲಿಕ್ಕಾಗಿ ಮತ್ತು ಮೀಸಲಾತಿಯಲ್ಲಿನ ಮೀಸಲಾತಿಗಾಗಿ, ಒಳ ಮೀಸಲಾತಿಗಾಗಿ ಅಥವಾ ಮೀಸಲಾತಿ ವರ್ಗೀಕರಣಕ್ಕಾಗಿ ಮಾದಿಗರು ರಾಜ್ಯದಲ್ಲಿ ೧೯೯೬ರಿಂದ ಹೋರಾಟ ಪ್ರಾರಂಭ ಮಾಡಿದರು.

ಕರ್ನಾಟಕವೂ ಸೇರಿದಂತೆ ಹಲವಾರು ರಾಜ್ಯಗಳಲ್ಲಿ ಹಿಂದುಳಿದ ವರ್ಗಗಳಿಗೆ ಶೇ. ೩೨ರ ಮೀಸಲಾತಿಯಲ್ಲಿ ಒಳ ಮೀಸಲಾತಿ ಕಲ್ಪಿಸಲಾಗಿದೆ. ಹರಿಯಾಣ (ವಾಲ್ಮೀಕಿ ಮತ್ತು ಸಿಖ್ ಜನಾಂಗಗಳಿಗೆ) ಮತ್ತು ಪಂಜಾಬ್ ರಾಜ್ಯಗಳಲ್ಲಿ ದಲಿತರಲ್ಲಿ ಒಳ ಮೀಸಲಾತಿ ಜಾರಿಯಲ್ಲಿದೆ. ಇತ್ತೀಚೆಗೆ, ತಮಿಳುನಾಡಿನಲ್ಲಿ ನ್ಯಾಯಮೂರ್ತಿ ಜನಾರ್ಧನ್ ಆಯೋಗದ ಶಿಫಾರಸ್ಸಿನಂತೆ ದಲಿತರಿಗೆ ಮೀಸಲಾತಿ ವರ್ಗೀಕರಣ ಮಾಡಲಾಗಿದೆ. ಇದನ್ನು ಆಕ್ಷೇಪಿಸಿ ಕೋರ್ಟ್‌ಗೆ ಸಲ್ಲಿಸಿದ ಅರ್ಜಿಯನ್ನು ಅಲ್ಲಿನ ಮಧುರೈ ನ್ಯಾಯಾಲಯ ತಿರಸ್ಕರಿಸಿದೆ.

ರಾಜ್ಯದಲ್ಲಿ ಮಾದಿಗರ ಹೋರಾಟದ ಒತ್ತಡದಿಂದಾಗಿ ಧರಂಸಿಂಗ್ ಸರಕಾರ ೨೦೦೫ರ ಸೆಪ್ಟೆಂಬರ್‌ನಲ್ಲಿ ಪರಿಶಿಷ್ಟ ಜಾತಿಯಲ್ಲಿನ ಸಾಂವಿಧಾನಿಕ ಮೀಸಲಾತಿ ಸೌಲಭ್ಯ ಹಂಚಿಕೆಯಲ್ಲಿನ ತಾರತಮ್ಯ ನಿವಾರಿಸಲು ನೇಮಿಸಿದ್ದ ನಿವೃತ್ತ ನ್ಯಾಯಮೂರ್ತಿ ಎ. ಜೆ. ಸದಾಶಿವ ಆಯೋಗವು ೧೨ ಕೋಟಿ ವೆಚ್ಚದಲ್ಲಿ ೭ ವರ್ಷಗಳ (ಆಂಧ್ರದಲ್ಲಿ ೮ ತಿಂಗಳು, ತಮಿಳುನಾಡುವಿನಲ್ಲಿ ೩ ತಿಂಗಳು ಅಲ್ಲಿನ ದಲಿತರ ಮೀಸಲಾತಿ ವರ್ಗೀಕರಣದ ಆಯೋಗಗಳು ಸಮೀಕ್ಷೆ ನಡೆಸಿವೆ) ಕಾಲ ರಾಜ್ಯಾದ್ಯಂತ ಹರಡಿರುವ ಪರಿಶಿಷ್ಟ ಜಾತಿಗಳಿಗೆ ಸೇರಿದ ೨೦ ಲಕ್ಷ ೫೪ ಸಾವಿರ ಕುಟುಂಬಗಳು ಹಾಗೂ ಸುಮಾರು ೯೬ ಲಕ್ಷದ ೬೦ ಸಾವಿರ ಜನಸಂಖ್ಯೆಯ ಕುರಿತು ವಿಸ್ತೃತ ಸಮೀಕ್ಷೆ ನಡೆಸಿ ಜಾತಿವಾರು ಜನಸಂಖ್ಯೆಯನ್ನು ಹಾಗೂ ಆರ್ಥಿಕ ಸ್ಥಿತಿಗಳ ಸಮೀಕ್ಷೆ ನಡೆಸಿದೆ. ಹಾಗೂ ರಾಜ್ಯಾದ್ಯಂತ ವಿವಿಧ ಇಲಾಖೆಗಳಲ್ಲಿ ಕೆಲಸ ಮಾಡುತ್ತಿರುವ ಎಸ್.ಸಿ. ಕೆಟಗರಿಗೆ ಸೇರಿದ ಒಂದು ಲಕ್ಷದ ೫೮ ಸಾವಿರ


**'ಹೊಸತು' ಚಂದಾ ನೋಂದಣಿಗೆ ಮತ್ತು**
**ಸದಭಿರುಚಿಯ ಪುಸ್ತಕಗಳಿಗೆ ಕೆಳಕಂಡ**
**ನವಕರ್ನಾಟಕ ಪುಸ್ತಕ ಪ್ರದರ್ಶನಗಳಿಗೆ ಭೇಟಿ ನೀಡಿ**

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಬೀರಲಿಂಗೇಶ್ವರ ದೇವಸ್ಥಾನದ ಆವರಣ, ಪಿ. ಬಿ. ರಸ್ತೆ, ದಾವಣಗೆರೆ - ೫೭೭ ೦೦೧

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಕಡಪ ಮೈದಾನದ ಆವರಣ, ಕಲಾಭವನ, ಧಾರವಾಡ - ೫೮೦ ೦೦೧

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಯೂನಿಯನ್ ಕ್ಲಬ್ ಆವರಣ, ಪುರಸಭೆ ಕಚೇರಿ ಬಳಿ, ಎಂ. ಜಿ. ರಸ್ತೆ, ಬಿಜಾಪುರ - ೫೮೬ ೧೦೧

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಎಂ. ಜಿ. ಕ್ರೀಡಾಂಗಣ ಆವರಣ, ಅಂಬೇಡ್ಕರ್ ವೃತ್ತ, ರಾಯಚೂರು - ೫೮೪ ೧೦೧

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಹಿಂದು ಮುಸಾಫಿರ್ ಛತ್ರ, ಮಯೂರ ಹೋಟೆಲ್ ಹತ್ತಿರ, ಎಂ.ಜಿ.ರಸ್ತೆ, ಚಿಕ್ಕಮಗಳೂರು - ೫೭೭ ೧೦೧

ನೌಕರರ ಸರ್ವೇಕ್ಷಣೆ ನಡೆಸಲಾಗಿದೆ. ಕರ್ನಾಟಕದಲ್ಲಿ ಎಸ್.ಸಿ. ಕೆಟಗರಿಯಡಿ ಬರುವ ೧೦೧ ಜಾತಿಗಳ ಆರ್ಥಿಕ, ಸಾಮಾಜಿಕ, ಶೈಕ್ಷಣಿಕ, ಸಾಂಸ್ಕೃತಿಕ, ರಾಜಕೀಯ ಸ್ಥಿತಿಗತಿಗಳನ್ನು ಅರಿಯಲು ೧೪೧ ಪ್ರಶ್ನಾವಳಿಗಳನ್ನು ಒಳಗೊಂಡ ಫಾರಂನಲ್ಲಿ ಮಾಹಿತಿ ಸಂಗ್ರಹಿಸಿ ಅವುಗಳನ್ನು ವಿಶ್ಲೇಷಣೆ ಮತ್ತು ಆಳವಾಗಿ ಅಧ್ಯಯನ ಮಾಡಿ ವೈಜ್ಞಾನಿಕ ಹಾಗೂ ಆಚರಣ ಯೋಗ್ಯವಾದ ವರದಿಯನ್ನು ನೀಡಿದೆ. ಅದು ಜಾತಿವಾರು ಜನಸಂಖ್ಯೆಗೆ ಅನುಗುಣವಾಗಿ ಮೀಸಲಾತಿ ವರ್ಗೀಕರಣಕ್ಕೆ ಶಿಫಾರಸ್ಸು ಮಾಡಿದೆ. ಆ ಆಯೋಗವು ಜನಸಂಖ್ಯೆಯಲ್ಲಿ ಶೇ. ೩೩.೪೭ರಷ್ಟಿರುವ ಮಾದಿಗ ಮತ್ತದರ ಒಳಪಂಗಡಕ್ಕೆ ಶೇ. ೬, ಜನಸಂಖ್ಯೆಯಲ್ಲಿ ಶೇ. ೩೨ರಷ್ಟಿರುವ ಹೊಲೆಯ ಮತ್ತದರ ಒಳಪಂಗಡಕ್ಕೆ ಶೇ. ೫, ಸ್ಪೃಶ್ಯ (ಬೋವಿ, ಲಂಬಾಣಿ ಇತ್ಯಾದಿ) ಜಾತಿಗಳಿಗೆ ಶೇ. ೩ ಹಾಗೂ ಇತರರಿಗೆ (ಕೊರಚರ ಸಂಬಂಧಿತ ಮತ್ತು ಕೊರಮ ಸಂಬಂಧಿತ ಹಾಗೂ ಇತರೆ ಅವಕಾಶವಂಚಿತ ಜಾತಿಗಳು) ಶೇ. ೧ರಂತೆ ಒಳ ಮೀಸಲಾತಿ ಹಂಚಿಕೆ ಮಾಡಬೇಕೆಂದು ಸರಕಾರಕ್ಕೆ ಆಯೋಗವು ಶಿಫಾರಸ್ಸು ಮಾಡಿದೆ.

ಆಂಧ್ರದಲ್ಲಿ ಹೊಲೆಯ ಬಂಧುಗಳು ಒಳ ಮೀಸಲಾತಿಯನ್ನು ವಿರೋಧಿಸಿ ಕೋರ್ಟ್‌ಗೆ ಹೋಗಿರುವುದರಿಂದ ಅಲ್ಲಿ ಸಮಸ್ಯೆ ಉಂಟಾಗಿದೆ. ಆದರೆ ಕರ್ನಾಟಕದಲ್ಲಿ ಅಸ್ಪೃಶ್ಯ ಜಾತಿಯ ಪ್ರಬಲ ಕೋಮುಗಳಾದ ಹೊಲೆಯ ಮತ್ತು ಮಾದಿಗರು ಒಂದಾಗಿ ಒಳ ಮೀಸಲಾತಿ ಜಾರಿಗೆ ಒತ್ತಾಯಿಸುತ್ತಿರುವುದರಿಂದ ಆಂಧ್ರದಂತೆ ಇಲ್ಲಿ ಸಮಸ್ಯೆ ಉದ್ಭವಿಸುವುದಿಲ್ಲ. ನಮ್ಮ ಸ್ವಾತಂತ್ರ್ಯಕ್ಕೆ, ಸಂವಿಧಾನಕ್ಕೆ ನಿಜವಾದ ಅರ್ಥ ಬರಬೇಕೆಂದಾದರೆ ಸರಕಾರ ಈ ಕೂಡಲೇ ಸದಾಶಿವ ಆಯೋಗದ ವರದಿಯ ಶಿಫಾರಸ್ಸಿನಂತೆ ಪರಿಶಿಷ್ಟರ ಪಟ್ಟಿಯಲ್ಲಿನ ಜಾತಿಗಳ ಸಂಖ್ಯೆಗೆ ಅನುಗುಣವಾಗಿ ಮೀಸಲಾತಿ ಸೌಲಭ್ಯಗಳನ್ನು ಕಲ್ಪಿಸಬೇಕು. ಇದು ಸರಕಾರ ಪರಿಶಿಷ್ಟರಿಗೆ ನೀಡಿರುವ ಶೇ. ೧೫ರಲ್ಲಿನ ಹಂಚಿಕೆಯಾಗಿರುವುದರಿಂದ ಸಾಂವಿಧಾನಾತ್ಮಕ ಬಿಕ್ಕಟ್ಟು ಉದ್ಭವಿಸಲಾರದು.

ಪ್ರಜಾಪ್ರಭುತ್ವದಲ್ಲಿ ಜನಸಂಖ್ಯೆಗನುಸಾರವಾಗಿ ಅಧಿಕಾರದಲ್ಲಿ ಪಾಲು ಪಡೆಯುವುದು ಎಲ್ಲ ಶೋಷಿತ ಜಾತಿಗಳ ಜನರ ಹಕ್ಕು, ಹಾಗೂ ಸಮಾನತೆಯಲ್ಲಿ ಪಾಲು ಪಡೆಯಲು ಅರ್ಹರು ಕೂಡ. ತಮ್ಮ ಹಕ್ಕು ಮತ್ತು ಸೌಲಭ್ಯಗಳಿಂದ ವಂಚಿತರಾದವರನ್ನು ಮನಗಂಡು ದಲಿತರೆಲ್ಲರೂ ಒಳ ಮೀಸಲಾತಿಗಾಗಿ ಸಹಕರಿಸಬೇಕು. ಡಾ|| ಬಿ. ಆರ್. ಅಂಬೇಡ್ಕರ್ ಅವರ ಆಶಯದಂತೆ ಯಾವುದೇ ಜಾತಿಗೆ ಪ್ರಾತಿನಿಧ್ಯತೆಯನ್ನು ನಿಗದಿ ಮಾಡುವ ಕಾಲಕ್ಕೆ ಜನಸಂಖ್ಯಾ ಪ್ರಮಾಣವು ಒಂದು ಮಾನದಂಡವಾಗಬೇಕು, ಏಕೆಂದರೆ, ಪ್ರತಿಯೊಂದು ಜಾತಿಯೂ ತನ್ನದೇ ಪ್ರತ್ಯೇಕ ಸಂಸ್ಕೃತಿ, ಅಸ್ತಿತ್ವ, ಪರಂಪರೆ ಹೊಂದಿದೆ. ಆದ್ದರಿಂದ ದೇಶದ ಸಕಲ ಸಂಪತ್ತು, ಆದಾಯ, ಅಧಿಕಾರ ಪ್ರತಿಯೊಂದು ಜಾತಿಯ ಜನಸಂಖ್ಯೆಗೆ ಅನುಗುಣವಾಗಿ ವಿತರಿಸಬೇಕು ಎಂಬುದಾಗಿತ್ತು. ಒಟ್ಟಾರೆ ಎಲ್ಲಾ ಜಾತಿಗಳ ಜನಸಂಖ್ಯೆಗೆ ಅನುಗುಣವಾಗಿ ಆರ್ಥಿಕ, ರಾಜಕೀಯ, ಶೈಕ್ಷಣಿಕ, ಆಡಳಿತ ರಂಗಗಳಲ್ಲಿ ಪ್ರಾತಿನಿಧ್ಯ ಮತ್ತು ಪಾಲು ಪಡೆಯಬೇಕೆಂಬುದು ಅವರ ಸಮಗ್ರ ಆಲೋಚನೆಯ ತಿರುಳು.

ಕಳೆದ ಮೂರು ದಶಕಗಳಿಂದ ತೀವ್ರವಾಗಿ ಚರ್ಚೆಗೆ ಒಳಗಾಗಿರುವ ವಿಚಾರ ಒಳ ಮೀಸಲಾತಿ. ೧೯೬೨ರಲ್ಲಿ ಹಿಂದುಳಿದ ವರ್ಗಗಳಲ್ಲಿ ಒಳ ಮೀಸಲಾತಿ ಅಸ್ತಿತ್ವಕ್ಕೆ ಬಂದಾಗಿನಿಂದಲೂ ಮಾದಿಗರು ಪರಿಶಿಷ್ಟರಲ್ಲಿ ಒಳ ಮೀಸಲಾತಿಗಾಗಿ ಧ್ವನಿ ಎತ್ತಿದರು. ಹಿಂದುಳಿದ ವರ್ಗಗಳ ಒಳ ಮೀಸಲಾತಿಯನ್ನು ವೈಜ್ಞಾನಿಕವೆಂದು ಪ್ರತಿಪಾದಿಸಲಾಗಿದೆ. ಆದರೆ ದಲಿತರ ಮೀಸಲಾತಿ ಮಾತ್ರ ವರ್ಗೀಕರಣ ಮಾಡದೇ ಇರುವುದು ಆಶ್ಚರ್ಯದ ಸಂಗತಿ.

ಅಸ್ಪೃಶ್ಯರನ್ನು ಸಮಾಜದಿಂದ ಬಹಿಷ್ಕರಿಸಲಾಗಿದೆ ಹಾಗೂ ಶತಶತಮಾನಗಳಿಂದ ಆಳುವ ವರ್ಗಗಳು ಮತ್ತು ಪುರೋಹಿತಶಾಹಿಗಳು ಅವರನ್ನು ಶೋಷಣೆ ಮಾಡಿದ್ದಾರೆ. ಮತ್ತು ದೇಶದ ಸಂಪತ್ತಿನ ಉತ್ಪಾದನೆಯಲ್ಲಿ ಅವರ ಶ್ರಮದ ಪಾಲು ಹೆಚ್ಚು ಇದ್ದರೂ ಕೂಡ ಆ ಶ್ರಮದ ಬೆಲೆ ಅವರಿಗೆ ಸಿಗದಂತೆ ಆಳುವ ವರ್ಗಗಳು ದೋಚಿಕೊಂಡಿರುವ ಹಿನ್ನೆಲೆಯಲ್ಲಿ ಇಂದು ಮೀಸಲಾತಿಯನ್ನು ಅಸ್ಪೃಶ್ಯರಿಗೆ ಜಾತಿ ವ್ಯವಸ್ಥೆ ಇರುವವರೆಗೂ ಕೊಡಬೇಕು.

ಅಲ್ಪಸಂಖ್ಯಾತ ಬ್ರಾಹ್ಮಣರು ಶೇ. ೯೦ರಷ್ಟು ಸೌಲಭ್ಯಗಳನ್ನು ಪಡೆಯುತ್ತಿದ್ದಾರೆ. ಈ ಎಲ್ಲವುಗಳನ್ನು ಗ್ರಹಿಸಿ ಡಾ|| ಬಿ. ಆರ್. ಅಂಬೇಡ್ಕರ್ ಭಾರತದಲ್ಲಿ ಜನಸಂಖ್ಯೆ ಆಧಾರಿತ ಮೀಸಲಾತಿ ಹಂಚಿಕೆಯಾಗಬೇಕೆಂದು ವಾದಿಸಿದ್ದರು. ಹೊಲೆಮಾದಿಗರು ಒಳ ಮೀಸಲಾತಿಯನ್ನು ಪಡೆದರೂ ವಿಘಟನೆಗೊಳ್ಳದೆ ಈ ದೇಶದಲ್ಲಿ ಜಾತಿವ್ಯವಸ್ಥೆ, ಅಸ್ಪೃಶ್ಯತೆ ಇರುವವರೆಗೂ ಮತ್ತು ಖಾಸಗಿ ವಲಯದಲ್ಲೂ ಮೀಸಲಾತಿ ಹಾಗೂ ಅದರ ಉಳಿವಿಗಾಗಿ ಹೋರಾಟ ಮಾಡಬೇಕು. ಇದರ ಅವಶ್ಯಕತೆ ದಲಿತರಿಗೆ ಇದೆ. ಅದನ್ನು ಬಳಸಿಕೊಂಡು ಜಾತಿ ವಿನಾಶಮಾಡದೆ ಹೋದರೆ ಉಳಿಗಾಲವಿಲ್ಲ.

ದೇಶದಲ್ಲಿ ದಲಿತರ ಸಂಖ್ಯೆ ವರ್ಷದಿಂದ ವರ್ಷಕ್ಕೆ ಹೆಚ್ಚಾಗುತ್ತಿದೆ. ಆದ್ದರಿಂದ ತಮಿಳುನಾಡಿನಲ್ಲಿರುವ ಶೇ. ೬೭ ಮೀಸಲಾತಿಯಂತೆ ಕರ್ನಾಟಕದಲ್ಲೂ ಹೆಚ್ಚಿಸಿ ಜಾತಿಗಳ ಜನಸಂಖ್ಯೆಗನುಗುಣವಾಗಿ ಮೀಸಲಾತಿಯನ್ನು ವಿಂಗಡಣೆ ಮಾಡಬೇಕು. ಮೀಸಲಾತಿ ಅಸಮರ್ಪಕ ವಿತರಣೆ ಅಸಮಾನ ಹಂಚಿಕೆಯಿಂದ ದಲಿತ ಜಾತಿಗಳಲ್ಲಿ ಆಂತರಿಕ ಬಿಕ್ಕಟ್ಟು ಸೃಷ್ಟಿಯಾಗಿ ಸಂಬಂಧಗಳು ಕಳೆಯುತ್ತಿವೆ. ಇಂದು ಶೋಷಕ ಜಾತಿಗಳು ಒಂದಕ್ಕೊಂದು ಹತ್ತಿರವಾಗುತ್ತಿವೆ, ಆದರೆ ಶೋಷಿತ ಜಾತಿಗಳು ಒಂದಕ್ಕೊಂದು ದೂರವಾಗುವ ಬದಲು ಒಳ ಮೀಸಲಾತಿ ಕುರಿತು ದಲಿತರು ಒಟ್ಟಿಗೆ ಕುಳಿತು ಚರ್ಚಿಸಬೇಕು. ಇದನ್ನು ಲಾಭ - ನಷ್ಟದ ದೃಷ್ಟಿಯಿಂದ ಪರಿಗಣಿಸದೆ, ತಾಂತ್ರಿಕ ಕಾರಣಗಳಿಂದ ನೋಡದೆ ನ್ಯಾಯ, ಮಾನವೀಯ ಕಲ್ಪನೆಗಳಿಂದ ವಿಚಾರ ಮಾಡಬೇಕು. ಅದರ ಸಾಮಾಜಿಕ ಆರ್ಥಿಕ ಸಮಸ್ಯೆಗಳನ್ನು ಚರ್ಚಿಸಿ ಅದರ ಅನುಷ್ಠಾನಕ್ಕೆ ಒತ್ತಾಯಿಸಬೇಕು. ದಲಿತರಿಂದಲೇ ದಲಿತರ ಶೋಷಣೆಯಾಗಬಾರದು ಎಂದರೆ ಸರಕಾರ ಕೂಡಲೆ ಒಳ ಮೀಸಲಾತಿ ಜಾರಿಗೆ ತರಬೇಕು. ಮೀಸಲಾತಿ ವರ್ಗೀಕರಣ ಮಾಡಿದರೆ ದಲಿತರ ಜಾತಿ-ಜಾತಿಗಳಲ್ಲಿ ಸಮಾನತೆ, ಸೌಹಾರ್ದತೆ, ಜಾತ್ಯತೀತ, ಪರಸ್ಪರ ಸ್ನೇಹಸಂಬಂಧಗಳು ಬೆಳೆಯುತ್ತವೆ.

ಇದು ಒಡೆದು ಆಳುವ ನೀತಿಯಲ್ಲ, ಇದು ಹಂಚಿ ತಿನ್ನುವುದು. ಇದು ಮಾನವತಾವಾದ. ಕಿತ್ತು ತಿನ್ನುವುದು ಮನುವಾದ. ಸ್ಪೃಶ್ಯ ಜಾತಿಗಳು ಪಟ್ಟಭದ್ರ ಹಿತಾಸಕ್ತಿಗಳ ಕುತಂತ್ರಕ್ಕೆ ಸಮನಾಗಿ ಬಲಿಯಾಗದೆ ಮೀಸಲಾತಿ ವರ್ಗೀಕರಣಕ್ಕೆ ಒತ್ತಾಯಿಸಬೇಕು.


ಶ್ರೀನಿವಾಸ ಮರಡ್ಡಿ
ಮುಖ್ಯೋಪಾಧ್ಯಾಯರು, ಸರಕಾರಿ ಪ್ರೌಢಶಾಲೆ
ಸಿಂಗನೋಡಿ, ರಾಯಚೂರು ತಾಲೂಕು





ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

**ವಿಶೇಷ ಸಂಚಿಕೆ – ೨೦೧೩**

ಜನವರಿ ೨೦೧೩ರ 'ಹೊಸತು' ಎಂದಿನಂತೆ ವಾರ್ಷಿಕ ವಿಶೇಷ ಸಂಚಿಕೆಯಾಗಿ ಪ್ರಕಟವಾಗುತ್ತದೆ.

ಸಮಕಾಲೀನ ವಿದ್ಯಮಾನಗಳ ಮೇಲೆ ಬೆಳಕು ಬೀರುವ ವಿಚಾರಪೂರ್ಣ ಲೇಖನಗಳು

ಜೀವನದ ಬೇರೆ ಬೇರೆ ಕ್ಷೇತ್ರಗಳಲ್ಲಿ ತಮ್ಮ ಹೆಜ್ಜೆಗುರುತು ಮೂಡಿಸಿರುವ ಮಹನೀಯರೊಂದಿಗೆ ಸಂದರ್ಶನಗಳು

ಜೊತೆಗೆ ಖ್ಯಾತ ಹಿರಿಯ ಹಾಗೂ ಕಿರಿಯ ಲೇಖಕರ ಕಥೆಗಳು, ಕವಿತೆಗಳು, ಪ್ರಬಂಧಗಳು, ಸಚಿತ್ರ ಪ್ರವಾಸ ಲೇಖನಗಳು

ಅಲ್ಲದೆ, ಓದುಗರ ವೇದಿಕೆ (ವಿಷಯ : ಮಾಧ್ಯಮಗಳಲ್ಲಿ ಭವಿಷ್ಯವಾಣಿ ) ಇವೆಲ್ಲಾ ಸೇರ್ಪಡೆಗೊಳ್ಳುತ್ತವೆ.

ಇನ್ನೂ ಹಲವಾರು ವೈಶಿಷ್ಟ್ಯಗಳೊಂದಿಗೆ ಪ್ರಕಟವಾಗಲಿದೆ.

'ಹೊಸತು' ಚಂದಾದಾರರಿಗೆ ವಾರ್ಷಿಕ ವಿಶೇಷ ಸಂಚಿಕೆ ಉಚಿತ !

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಕುಮಾರ ಪಾರ್ಕ್ ಪೂರ್ವ
ಅಂಚೆ ಪೆಟ್ಟಿಗೆ ಸಂಖ್ಯೆ ೫೧೯೮, ಬೆಂಗಳೂರು – ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦, ೩೦೫೭೮೦೨೨
ಫ್ಯಾಕ್ಸ್ : ೩೦೫೭೮೦೨೩
e-mail : navakarnataka@gmail.com
hosathu@gmail.com



ನಭಾವಲೋಕನ

# ಗ್ರಹಣವಲ್ಲದ ಗ್ರಹಣ

ಡಾ|| ಬಿ. ಎಸ್. ಶೈಲಜಾ
ಜವಾಹರ್‌ಲಾಲ್ ನೆಹರೂ ತಾರಾಲಯ, ಹೈಗ್ರೌಂಡ್ಸ್
ಬೆಂಗಳೂರು - ೫೬೦ ೦೦೧

ಗ್ರಹಣ ಎಂದ ಕೂಡಲೇ ಕಪ್ಪು ಸೂರ್ಯನನ್ನು ಅಥವಾ ಕಂದು ಚಂದ್ರನನ್ನೋ ನೆನಪು ಮಾಡಿಕೊಳ್ಳುವಿರಿ. ಈ ತಿಂಗಳಲ್ಲಿ ಸೂರ್ಯಗ್ರಹಣವಿದೆ; ಅದು ನಮಗೆ ಕಾಣುವುದಿಲ್ಲ. 28ರಂದು ಚಂದ್ರಗ್ರಹಣವೂ ಇದೆ. ಆದರೆ ಚಂದ್ರ ನೆರಳಿನಲ್ಲಿದೆ ಎಂದು ಗುರುತಿಸುವುದೇ ಒಂದು ಸವಾಲಾಗಬಹುದು. ಲೆಕ್ಕದ ಪ್ರಕಾರ ಚಂದ್ರ ಭೂಮಿಯ ನೆರಳಿನ ಅಂಚನ್ನು ಪ್ರವೇಶಿಸುವುದು ಸಂಜೆ 5ಗಂಟೆಗೆ; ಆಗ ಇನ್ನೂ ಚಂದ್ರೋದಯವೇ ಆಗಿರುವುದಿಲ್ಲ. ಮುಕ್ತಾಯ ರಾತ್ರಿ 10:23ಕ್ಕೆ. ಗರಿಷ್ಠ ಎಂದು ಕರೆಯಬಹುದಾದ ಸಮಯ 8:30. ಆದ್ದರಿಂದ ಆಗ ನೀವು ಹೊರಗೆ ಬಂದು ನೋಡಿದಿರಾದರೆ ಚಂದ್ರನ ದಕ್ಷಿಣ ಅಂಚು ಮಾತ್ರ ಸ್ವಲ್ಪ ಮಂಕು ಎನ್ನಿಸಬಹುದು. ನಿಮ್ಮ ವೀಕ್ಷಣಾ ಕೌಶಲ್ಯಕ್ಕೆ ಇದೊಂದು ಸವಾಲು.

ಗುರು ಗ್ರಹ ಈ ತಿಂಗಳು ಅದರ ಚಲನೆಯ ಸುಳಿವನ್ನು ತಿಳಿಸಿ ಕೊಡಲು ಒಳ್ಳೆಯ ಅವಕಾಶವನ್ನು ಕೊಟ್ಟಿದೆ. 2 ಮತ್ತು 29ರ ಮುಂಜಾವು ಪಶ್ಚಿಮದಲ್ಲಿ ಗುರು ಮತ್ತು ಚಂದ್ರ ಒಟ್ಟಿಗೇ ಕಾಣುತ್ತವೆ. ಆದರೆ ಸೂಕ್ಷ್ಮವಾಗಿ ಗಮನಿಸಿದರೆ ಮಾತ್ರ ರೋಹಿಣಿ ಮತ್ತು ಗುರುಗ್ರಹದ ನಡುವೆ ಇರುವ ಕೋನೀಯ ವ್ಯತ್ಯಾಸ ತಿಳಿಯುತ್ತದೆ. ಒಂದು ತಿಂಗಳಲ್ಲಿ ಗ್ರಹದ ಚಲನೆ ಎಷ್ಟು ಎಂದು ತಿಳಿಯಲು ಇದು ಸದವಕಾಶ. ವಾಸ್ತವದಲ್ಲಿ ಗುರುಗ್ರಹವನ್ನು ಚಂದ್ರ ಮರೆಮಾಡುವ ಆಚ್ಛಾದನೆ ಎಂಬ ಘಟನೆ ಈ ಎರಡೂ ದಿನ ನಡೆಯುತ್ತದೆಯಾದರೂ ಆಗ ಅವು ನಮ್ಮ ದಿಗಂತದಿಂದ ಕೆಳಗಿರುವುದರಿಂದ ನಮಗೆ ನೋಡುವ ಅವಕಾಶ ಇಲ್ಲ.

ಸಂಜೆ ಕಾಣುವ ಗ್ರಹ ಬುಧ. ತಿಂಗಳ ಮೊದಲ ವಾರದಲ್ಲಿ ಇದನ್ನು ಗುರುತಿಸಲು ಪ್ರಯತ್ನಿಸಿ. ದಿನೇ ದಿನೇ ದಿಗಂತದ ಕಡೆಗೆ ಸರಿಯುವ ಇದನ್ನು ಸಂಜೆಗೆಂಪಿನಲ್ಲಿ ಗುರುತಿಸುವುದು ಕಷ್ಟ. 14ರಂದು ತೆಳ್ಳನೆಯ ರೇಖಾಚಂದ್ರ ಇದರ ಪಕ್ಕಕ್ಕೇ ಕಾಣುವ ಸಂದರ್ಭವನ್ನು ಬಳಸಬಹುದು. ಅದಾದ ಮೇಲೆ ನೋಡಲು ಅವಕಾಶವಿಲ್ಲ. 17ರಂದು ಸೂರ್ಯನ ಮುಂದೆಯೇ ಹಾದುಹೋಗುವ ಘಟನೆ ಇದೆ. ಇದಕ್ಕೆ ನೀಚ ಯುತಿ ಎಂದು ಹೆಸರು. ಸೋಹೋ ವೆಬ್ ಸೈಟ್‌ನಲ್ಲಿ ಇದನ್ನು ಸ್ಪಷ್ಟವಾಗಿ ನೋಡಬಹುದು. ತಿಂಗಳ ಕೊನೆಗೆ ಬೆಳಗಿನ ಜಾವ ಪೂರ್ವದ ಅಂಚಿನಲ್ಲಿ ಕಾಣುವುದು.

ಸಂಜೆ ಕಾಣುವ ಇನ್ನೊಂದು ಗ್ರಹ ಧನುರಾಶಿಯಲ್ಲಿರುವ ಮಂಗಳ. ಪಶ್ಚಿಮದ ಅಂಚಿನಲ್ಲಿಯೇ ಸಂಜೆಗೆಂಪಿನಲ್ಲಿ ಕರಗಿಹೋಗುವಂತೆಯೇ ಇದೆ. 16ರಂದು ಚಂದ್ರನ ಪಕ್ಕ ಕಾಣುತ್ತದೆ. ಇದರ 4 ಡಿಗ್ರಿ ಉತ್ತರಕ್ಕೆ ಪ್ಲೂಟೋ ಇದೆ. 17ರಂದು ಚಂದ್ರ ಪ್ಲೂಟೋವನ್ನು ಮುಚ್ಚಿಹಾಕುವ ಆಚ್ಛಾದನೆ (ಸಣ್ಣ ಗ್ರಹಣ ಎನ್ನಬಹುದು) ಹಗಲಿನಲ್ಲಿ ನಡೆಯುತ್ತದೆ. ಆದರೆ ಅದು ನಮಗೆ ನೋಡಲು ಅನುಕೂಲಕರವಾಗಿಲ್ಲ. ಆ ಸಂಜೆ ಮಂಗಳ ಮತ್ತು ಚಂದ್ರ ಎರಡೂ ಕಾಣುವ ಹಾಗೆ ಚಂದ್ರನ ಛಾಯಾಚಿತ್ರ ತೆಗೆದರೆ ಎರಡರ ನಡುವೆ ಪ್ಲೂಟೋ ಎಂಬ ಸಣ್ಣ ಚುಕ್ಕೆ ಕಂಡರೂ ಕಾಣಬಹುದು. ಆದರೆ ಯಾವ ಚುಕ್ಕೆ ಪ್ಲೂಟೋ ಎಂದು ನಿರ್ಧರಿಸುವುದೇ ಕಷ್ಟ.



೨೯ರ ಮುಂಜಾವು ಪಶ್ಚಿಮದಲ್ಲಿ
ಗುರು ಮತ್ತು ಚಂದ್ರ



೨ರ ಮುಂಜಾವು ಪಶ್ಚಿಮದಲ್ಲಿ
ಗುರು ಮತ್ತು ಚಂದ್ರ

ಕಳೆದ ತಿಂಗಳು ಸಂಜೆಯ ಆಕಾಶದಿಂದ ಮಾಯವಾದ ಶನಿ ಸೂರ್ಯನ ಆಚೆ ಬದಿಯನ್ನು ಹಾದು ಈ ತಿಂಗಳು ಬೆಳಗಿನ ಆಕಾಶದಲ್ಲಿ ಕಾಣತೊಡಗಿದೆ. ತಿಂಗಳ ಕೊನೆಗೆ ಶುಕ್ರದ ಪಕ್ಕದಲ್ಲಿಯೇ ಕಾಣತೊಡಗುವುದು. ತಿಂಗಳ ಕೊನೆಯ ವಾರ ಬುಧ, ಶುಕ್ರ, ಶನಿ ಮೂರೂ ಗ್ರಹಗಳನ್ನು ಪೂರ್ವದ ಅಂಚಿನಲ್ಲಿ ನೋಡಬಹುದು.

28ರ ಹುಣ್ಣಿಮೆಯಂದೇ ಚಂದ್ರ ಭೂಮಿಯಿಂದ ಗರಿಷ್ಠ ದೂರದಲ್ಲಿರುವುದರಿಂದ ಸಣ್ಣ ಚಂದ್ರ ಕಾಣಬೇಕು. ಆದರೆ ನಮ್ಮ ಬರಿಗಣ್ಣು ಈ ವ್ಯತ್ಯಾಸವನ್ನು ಗುರುತಿಸಲಾರದು. ಅಂದು ಅದು ವೃಷಭ ರಾಶಿಯ ಕೃತ್ತಿಕಾ ನಕ್ಷತ್ರದ ಸಮೀಪ ಕಾಣಲಿದೆ. ಹಾಗಾಗಿ ಈ ತಿಂಗಳು ಕಾರ್ತಿಕ ಎಂಬ ಹೆಸರು ಪಡೆಯುತ್ತದೆ. ಅಧಿಕಮಾಸ ಎಂಬ ತಿದ್ದುಪಡಿಯ ಎರಡು ಶ್ರಾವಣ ಮಾಸಗಳು ಬಂದಿದ್ದ ಕಾರಣ ಹೀಗೆ ಹುಣ್ಣಿಮೆಯ ಚಂದ್ರನ ಸಮೀಪದ ನಕ್ಷತ್ರವನ್ನು ಹೆಸರಿನೊಡನೆ ತಾಳೆ ಮಾಡುವುದು ಸಾಧ್ಯವಾಗಿದೆ. ಇಲ್ಲದಿದ್ದರೆ ಈ ತಿಂಗಳ ಹೆಸರು ಮಾರ್ಗಶಿರ ಎಂದಾಗಿಬಿಡುತ್ತಿತ್ತು, ಅಲ್ಲವೇ?

ಈ ತಿಂಗಳಲ್ಲಿ ಟೆಂಪೆಲ್ ಟಟಲ್ ಎಂಬ ಧೂಮಕೇತುವಿನ ಧೂಳು ಉಲ್ಕಾವೃಷ್ಟಿಯಾಗಿ ಭೂಮಿಯನ್ನು ತಲುಪಲಿದೆ. ಲಿಯೋನಿಡ್ಸ್ ಎಂಬ ಈ ವೃಷ್ಟಿ 18ರಂದು ಗರಿಷ್ಠವಾಗಲಿದೆ. ಮುಂಜಾವಿನಲ್ಲಿ ಗಂಟೆಗೆ 20-30 ಉಲ್ಕೆಗಳು ಕಾಣುತ್ತವೆ.

ಸಂಜೆಯ ಆಕಾಶಕ್ಕಾಗಿ ಉಪಯೋಗಿಸಬಹುದಾದದ್ದು ಈ ನಕ್ಷೆ. ವಾಯುವ್ಯದಲ್ಲಿ ವೀಣಾ (ಲೈರಾ) ಗರುಡ (ಅಕ್ವಿಲಾ) ಮತ್ತು ರಾಜಹಂಸ (ಸಿಗ್ನಸ್)ಗಳ ಮೂಲಕ ಆಕಾಶಗಂಗೆಯ ಹರಿವನ್ನು ಗುರುತಿಸಬಹುದು. ಮಕರ, ಕುಂಭ, ಮೀನ ಈ ಕ್ಷೀಣ ಪುಂಜಗಳನ್ನು ಗುರುತಿಸಲು ನಕ್ಷೆಯ ಸಹಾಯ ಅಗತ್ಯ. ಪೂರ್ವದಲ್ಲಿ ವೃಷಭ ತಿಂಗಳ ಕೊನೆಗೆ ಸ್ಫುಟವಾಗಿ ಕಾಣುತ್ತದೆ. ಮೇಷ, ಪೆಗಸಸ್ (ನಕುಲ)ದ ಚೌಕ ಇವುಗಳನ್ನು ಕಾಣಬಹುದು. ಈಶಾನ್ಯದಲ್ಲಿ ದ್ರೌಪದಿ (ಆಂಡ್ರೋಮಿಡಾ), ಕುಂತಿ (ಕೆಸಿಯೋಪಿಯಾ) ಮತ್ತು ಪಾರ್ಥ (ಪರ್ಸಿಯುಸ್) ಕಾಣುತ್ತವೆ.

**ಖಗೋಳ ದಿನಚರಿ**

**ನವೆಂಬರ್**

1 ಚಂದ್ರ - ಭೂಮಿ ನಡುವೆ ಗರಿಷ್ಠ ಅಂತರ
2 ಗುರು ಚಂದ್ರ ಜೋಡಿ*
7 ಚಾಂದ್ರಮಾಸದ ಕೊನೆಯ ಪಾದ (ಬಹುಳ ಅಷ್ಟಮಿ)
11 ಶುಕ್ರ ಚಂದ್ರ ಜೋಡಿ*
12 ಶನಿ - ಚಂದ್ರ ಜೋಡಿ
14 ಅಮಾವಾಸ್ಯೆ 04:38ಕ್ಕೆ (ಗ್ರಹಣ ಭಾರತಕ್ಕೆ ಕಾಣುವುದಿಲ್ಲ) ಬುಧ ಚಂದ್ರ ಜೋಡಿ ಚಂದ್ರ - ಭೂಮಿ ನಡುವೆ ಕನಿಷ್ಠ ಅಂತರ
16 ಮಂಗಳ ಚಂದ್ರ ಜೋಡಿ*
17 ಬುಧ ಗ್ರಹದ ನೀಚ ಯುತಿ (ಬುಧ ಸೂರ್ಯನ ಜೊತೆ ಇರುವುದನ್ನು ಸೋಹೋ ವೆಬ್ ಸೈಟ್‌ನಲ್ಲಿ ನೋಡಬಹುದು)
18 ಮುಂಜಾವು ಲಿಯೋನಿಡ್ಸ್ ಉಲ್ಕಾ ವೃಷ್ಟಿ*
21 ಚಾಂದ್ರಮಾಸದ ಮೊದಲ ಪಾದ (ಶುಕ್ಲ ಅಷ್ಟಮಿ)
27 ಶುಕ್ರ - ಶನಿ ಜೋಡಿ*
28 ಹುಣ್ಣಿಮೆ 20:16ಕ್ಕೆ ; ಚಂದ್ರ-ಭೂಮಿ ನಡುವೆ ಗರಿಷ್ಠ ಅಂತರ
29 ಗುರು ಚಂದ್ರ ಜೋಡಿ*

(*ಛಾಯಾಗ್ರಹಣಕ್ಕೆ ಸದವಕಾಶ)

# ಸಿರಿಯಾ ವಿರುದ್ಧ ಅಪಪ್ರಚಾರ

ಮೂಲ : ಥಿಯೆರ‍್ರಿ ಮೇಯ್ಸನ್
ಕನ್ನಡಕ್ಕೆ : ಸುರೇಶ ಭಟ್ ಬಾಕ್ರಬೈಲು

ಸದ್ಯದಲ್ಲೆ ಸಿರಿಯಾದ ರಾಷ್ಟ್ರೀಯ ಟಿವಿ ವಾಹಿನಿಗಳು ಅನೇಕ ಸ್ಟುಡಿಯೊ ನಿರ್ಮಿತ ಕಾರ್ಯಕ್ರಮಗಳನ್ನು ಪ್ರಸಾರ ಮಾಡಲಿವೆ. ಈ ಪೂರ್ವನಿರ್ಮಿತ ಕಾರ್ಯಕ್ರಮಗಳ ರೂವಾರಿ ಇನ್ಯಾರೂ ಅಲ್ಲ, ಅಮೆರಿಕಾದ ಸಿಐಎ. ಇದರ ಭಾಗವಾಗಿ ಸಿರಿಯಾದ ಮಾಧ್ಯಮಗಳಲ್ಲಿ ಸಾಮೂಹಿಕ ಹತ್ಯೆಗಳನ್ನು ತೋರಿಸಿ ಅದರ ಹೊಣೆಗಾರಿಕೆಯನ್ನೆಲ್ಲ ಸಿರಿಯಾ ಸರ್ಕಾರದ ತಲೆಗೆ ಕಟ್ಟಲಾಗುವುದು. ಇನ್ನೂ ಅನೇಕ ವಿದ್ಯಮಾನಗಳನ್ನು ಬಿತ್ತರಿಸಲಾಗುವುದು. ಉದಾಹರಣೆಗೆ: ಸಾರ್ವಜನಿಕ ಪ್ರತಿಭಟನೆಗಳು, ಸಚಿವರ, ಸೇನಾದಂಡನಾಯಕರ ರಾಜೀನಾಮೆಗಳು, ಅಧ್ಯಕ್ಷ ಅಲ್ ಅಸ್ಸಾದ್ ಪರಾರಿಯಾಗುವಿಕೆ, ವಿವಿಧ ನಗರಗಳ ಕೇಂದ್ರ ಪ್ರದೇಶಗಳಲ್ಲಿ ಬಂಡಾಯಗಾರರ ಜಮಾವಣೆ ಮತ್ತು ಕೊನೆಗೆ ಅಧ್ಯಕ್ಷೀಯ ಭವನದಲ್ಲಿ ನೂತನ ಸರಕಾರವೊಂದರ ಸ್ಥಾಪನೆ.

ಇದೊಂದು ಅಪಪ್ರಚಾರದ ಆಂದೋಳನ. ಇದರ ಉದ್ದೇಶ ಮೊದಲು ಸಿರಿಯನ್ನರ ಸ್ಥೈರ್ಯವನ್ನು ಕುಗ್ಗಿಸಿ ಆನಂತರ ಸರಕಾರದ ಪತನಕ್ಕೆ ಅನುವುಮಾಡಿಕೊಡುವ ಕ್ಷಿಪ್ರಕ್ರಾಂತಿಯೊಂದನ್ನು ನಡೆಸುವುದು. ಇದರ ನೇತೃತ್ವವನ್ನು ಬೆನ್ ರೋಡ್ಸ್ ಎಂಬಾತನಿಗೆ ವಹಿಸಲಾಗಿದೆ. ಈತ ಅಮೆರಿಕಾದ ಯುದ್ಧ ಸಂದೇಶ ವಿಭಾಗದ ಉಪ ರಾಷ್ಟ್ರೀಯ ಭದ್ರತಾ ಸಲಹೆಗಾರ. ರಷ್ಯಾ ಮತ್ತು ಚೀನಾ ವಿಶ್ವಸಂಸ್ಥೆಯಲ್ಲಿ ವೀಟೊ ಅಧಿಕಾರ ಚಲಾಯಿಸಿದ್ದರಿಂದ ನ್ಯಾಟೊ ರಾಷ್ಟ್ರಗಳಿಗೆ ಅಸಮಾಧಾನವಾಗಿದೆ. ಹಾಗಾಗಿ ಸಿರಿಯಾದ ಮೇಲೆ ಕಾನೂನುಬಾಹಿರ ದಾಳಿ ನಡೆಸದೆಯೂ ಜಯ ಸಾಧಿಸಲೆಂದು ಈ ಕಾರ್ಯಕ್ರಮವನ್ನು ಯೋಜಿಸಲಾಗಿದೆ. ಸಿರಿಯಾದಲ್ಲಿ ನಡೆಯುತ್ತಿರುವ ವಿದ್ಯಮಾನಗಳ ಬಗ್ಗೆ ಜನ ಯಾವುದೇ ನಿಲುವು ತಾಳಿರಬಹುದು. ಆದರೆ ಕ್ಷಿಪ್ರಕ್ರಾಂತಿ ನಡೆಯಿತೆಂದರೆ ಸಿರಿಯಾದಲ್ಲಿ ಪ್ರಜಾಸತ್ತಾತ್ಮಕ ಆಡಳಿತ ಸ್ಥಾಪನೆಯಾಗುವ ಕುರಿತು ಜನರ ಏನೇ ಹಾರೈಕೆಗಳಿದ್ದರೂ ಅವೆಲ್ಲವೂ ನುಚ್ಚುನೂರಾಗಲಿವೆ.

ಅರಬ್‌ಸ್ಯಾಟ್ ಮತ್ತು ನೈಲ್‌ಸ್ಯಾಟ್ ಉಪಗ್ರಹಗಳು ಇನ್ನು ಮುಂದೆ ಸಿರಿಯಾದ ಯಾವುದೇ ಖಾಸಗಿ ಮತ್ತು ಸರಕಾರಿ ಟಿವಿ ಮಾಧ್ಯಮಗಳನ್ನು (ಸಿರಿಯಾ ಟಿವಿ, ಅಲ್ ಅಕ್‌ಬರಿಯ, ಅದ್‌ದೌನಿಯ, ಚಾಮ್ ಟಿವಿ ಇತ್ಯಾದಿ) ಬಿತ್ತರಿಸುವಂತಿಲ್ಲ. ಇಂತಹ ಒಂದು ಅಧಿಕೃತ ಆದೇಶವನ್ನು ಅರಬ್ ಒಕ್ಕೂಟದ ಮುಖಾಂತರ ರವಾನಿಸಲಾಗಿದೆ. ಪರಿಣಾಮವಾಗಿ ಸಿರಿಯಾದ ಟಿವಿ ಪರದೆಗಳ ಮೇಲೆ ಬೇರೆಯೇ ರೀತಿಯ ಕಾರ್ಯಕ್ರಮಗಳು ಕಾಣಿಸಿಕೊಳ್ಳಲಿವೆ. ಇದೇನೂ ಹೊಸ ವಿಷಯವಲ್ಲ. ಇತ್ತೀಚೆಗೆ ಲಿಬಿಯಾದಲ್ಲಿ ನಡೆದದ್ದೂ ಇದೇ ರೀತಿಯ ಕಾರ್ಯಾಚರಣೆ. ಲಿಬಿಯಾದ ಜಮಾಹಿರಿಯಾ ನಾಯಕರು ಪ್ರಜೆಗಳ ಜೊತೆ ಯಾವುದೇ ಸಂವಹನ ನಡೆಸದಂತೆ ನೋಡಿಕೊಳ್ಳಲಾಗಿತ್ತು.

ವಾಸ್ತವವಾಗಿ ಈ ಆಂದೋಳನವನ್ನು ಉತ್ತಮ ರೀತಿಯಲ್ಲಿ ಸಂಘಟಿಸುವುದಕ್ಕಾಗಿ ಇದೇ ಜೂನ್ ತಿಂಗಳ ಎರಡನೆಯ ವಾರದಲ್ಲಿ ಹಲವಾರು ಅಂತರರಾಷ್ಟ್ರೀಯ ಸಭೆಗಳನ್ನು ಏರ್ಪಡಿಸಲಾಗಿತ್ತೆಂದು ತಿಳಿದುಬಂದಿದೆ. ತಾಂತ್ರಿಕ ವಿಷಯಗಳಿಗೆ ಸಂಬಂಧಪಟ್ಟ ಮೊದಲ ಎರಡು ಸಭೆಗಳನ್ನು ದೋಹಾದಲ್ಲಿ ನಡೆಸಲಾಯಿತು. ಮೂರನೆಯದು ರಾಜಕೀಯ ಸಭೆಯಾಗಿತ್ತು. ಅದನ್ನು ರಿಯಾದ್‌ನಲ್ಲಿ ಏರ್ಪಡಿಸಲಾಗಿತ್ತು.

ಅಮೆರಿಕಾದ ಭೂಸೇನೆಯಲ್ಲಿ 'ಮನೋವೈಜ್ಞಾನಿಕ ಕಾರ್ಯಕ್ರಮಗಳ ಪಡೆ' (ಮಕಾಪ) ಎಂಬ ಒಂದು ವಿಶೇಷ ತಂಡವಿದೆ. ೧೯೯೮ರಿಂದ ಆರಂಭಿಸಿ ಹಲವಾರು **ಮಕಾಪ** ಅಧಿಕಾರಿಗಳನ್ನು ಸಿಎನ್‌ಎನ್ ವಾಹಿನಿಯಲ್ಲಿ ತುರುಕಿಸಲಾಗಿದೆ. ತರುವಾಯ ನ್ಯಾಟೊ ಕೂಡ ಇದನ್ನು ಅನುಸರಿಸಿತು. ಅದೀಗ ಇನ್ನಿತರ ಮಾಧ್ಯಮಗಳಲ್ಲಿಯೂ ಇಂತಹ ಅಧಿಕಾರಿಗಳನ್ನು ಭರ್ತಿಮಾಡಿದೆ. ದೋಹಾದ ಮೊದಲ ಸಭೆಯಲ್ಲಿ ಭಾಗವಹಿಸಿದವರೆಲ್ಲ ಅಲ್‌ಅರಬೀಯ, ಅಲ್‌ಜಜ್ಹೀರ, ಬಿಬಿಸಿ, ಸಿಎನ್‌ಎನ್, ಫಾಕ್ಸ್, ಫ್ರಾನ್ಸ್ ೨೪, ಫ್ಯೂಚರ್ ಟಿವಿ ಮತ್ತು ಎಂಟಿವಿಗಳಲ್ಲಿರುವ **ಮಕಾಪ** ಅಧಿಕಾರಿಗಳಾಗಿದ್ದರು. ಇವರು

ಇದೊಂದು ಅಪಪ್ರಚಾರದ ಆಂದೋಳನ. ಇದರ ಉದ್ದೇಶ ಮೊದಲು ಸಿರಿಯನ್ನರ ಸ್ಥೈರ್ಯವನ್ನು ಕುಗ್ಗಿಸಿ ಆನಂತರ ಸರಕಾರದ ಪತನಕ್ಕೆ ಅನುವುಮಾಡಿಕೊಡುವ ಕ್ಷಿಪ್ರಕ್ರಾಂತಿಯೊಂದನ್ನು ನಡೆಸುವುದು. ಇದರ ನೇತೃತ್ವವನ್ನು ಬೆನ್ ರೋಡ್ಸ್ ಎಂಬಾತನಿಗೆ ವಹಿಸಲಾಗಿದೆ. ಈತ ಅಮೆರಿಕಾದ ಯುದ್ಧ ಸಂದೇಶ ವಿಭಾಗದ ಉಪ ರಾಷ್ಟ್ರೀಯ ಭದ್ರತಾ ಸಲಹೆಗಾರ. ರಷ್ಯಾ ಮತ್ತು ಚೀನಾ ವಿಶ್ವಸಂಸ್ಥೆಯಲ್ಲಿ ವೀಟೊ ಅಧಿಕಾರ ಚಲಾಯಿಸಿದ್ದರಿಂದ ನ್ಯಾಟೊ ರಾಷ್ಟ್ರಗಳಿಗೆ ಅಸಮಾಧಾನವಾಗಿದೆ. ಹಾಗಾಗಿ ಸಿರಿಯಾದ ಮೇಲೆ ಕಾನೂನುಬಾಹಿರ ದಾಳಿ ನಡೆಸದೆಯೂ ಜಯ ಸಾಧಿಸಲೆಂದು ಈ ಕಾರ್ಯಕ್ರಮವನ್ನು ಯೋಜಿಸಲಾಗಿದೆ. ಸಿರಿಯಾದಲ್ಲಿ ನಡೆಯುತ್ತಿರುವ ವಿದ್ಯಮಾನಗಳ ಬಗ್ಗೆ ಜನ ಯಾವುದೇ ನಿಲುವು ತಾಳಿರಬಹುದು. ಆದರೆ ಕ್ಷಿಪ್ರಕ್ರಾಂತಿ ನಡೆಯಿತೆಂದರೆ ಸಿರಿಯಾದಲ್ಲಿ ಪ್ರಜಾಸತ್ತಾತ್ಮಕ ಆಡಳಿತ ಸ್ಥಾಪನೆಯಾಗುವ ಕುರಿತು ಜನರ ಏನೇ ಹಾರೈಕೆಗಳಿದ್ದರೂ ಅವೆಲ್ಲವೂ ನುಚ್ಚುನೂರಾಗಲಿವೆ.



ಬೆನ್ ರೋಡ್ಸ್ ತಂಡ ಶ್ವೇತಭವನದಲ್ಲಿ ಸೃಷ್ಟಿಸಿದ ''ಕಥಾ ನಿರೂಪಣೆ''ಯ ವಸ್ತುವನ್ನು ಆಧಾರವಾಗಿರಿಸಿಕೊಂಡು ಅಪಪ್ರಚಾರದ ಕಥನಗಳನ್ನು ಮೊದಲೇ ಸಿದ್ಧಪಡಿಸಿದರು. ವೀಕ್ಷಕರು ತಾವು ನೋಡುತ್ತಿರುವುದನ್ನೆಲ್ಲ ಸತ್ಯವೆಂದು ಭ್ರಮಿಸ ಬೇಕಲ್ಲವೇ? ಅದಕ್ಕೋಸ್ಕರ ವಿವಿಧ ಮಾಧ್ಯಮಗಳು ಪರಸ್ಪರರ ಸುಳ್ಳು ಕಥನಗಳನ್ನು ಉಲ್ಲೇಖಿಸಿಕೊಳ್ಳುವಂತೆ ಮಾಡುವ ಏರ್ಪಾಟನ್ನೂ ಇಲ್ಲಿಯೇ ಮಾಡಲಾಯಿತು. ಅಮೆರಿಕಾದ ಸಿಐಎ ಸಂಸ್ಥೆಯ ಬರಾಡ, ಫ್ಯೂಚರ್ ಟಿವಿ, ಎಂಟಿವಿ, ಓರಿಯೆಂಟ್ ನ್ಯೂಸ್, ಸಿರಿಯಾ ಚಾಬ್, ಸಿರಿಯಾ ಅಲ್‌ಗಾದ್ ಮೊದಲಾದ ಟಿವಿ ಚಾನಲ್‌ಗಳನ್ನು ಮತ್ತು ೪೦ ವಹಾಬಿ ಧಾರ್ಮಿಕ ಚಾನಲ್‌ಗಳನ್ನು ಸಿರಿಯಾ ಮತ್ತು ಲೆಬನಾನ್‌ಗಳಿಗೆ ತೋರಿಸಿ ''ಕ್ರೈಸ್ತರು ಬೇರೂತಿಗೆ, ಅಲವೈಟ್‌ಗಳಿಗೆ ಸಮಾಧಿ!'' ಎಂಬ ಘೋಷಣೆಗಳೊಂದಿಗೆ ಸ್ವಧರ್ಮನಿಷ್ಠೆಯ ಸಾಮೂಹಿಕ ಹತ್ಯೆಗೆ ಕರೆಕೊಡಿಸುವ ನಿರ್ಧಾರವನ್ನೂ ಇದೇ ಸಭೆಯಲ್ಲಿ ತೆಗೆದುಕೊಳ್ಳಲಾಯಿತು.

ಎರಡನೆಯ ಸಭೆಗೆ ಪ್ರಸಾರ ಮಾಧ್ಯಮ ಎಂಜಿನಿಯರ್‌ಗಳನ್ನು ಹಾಗೂ ತಂತ್ರಜ್ಞರನ್ನು ಕರೆಸಲಾಯಿತು. ಇವರಿಗೆ ವಹಿಸಲಾದ ಕರ್ತವ್ಯವೇನು? ಕಾಲ್ಪನಿಕ ಚಿತ್ರಗಳನ್ನು ತಯಾರಿಸಿ ಅವುಗಳ ಒಂದು ಭಾಗವನ್ನು ಹೊರಾಂಗಣದ ಸ್ಟುಡಿಯೊದಲ್ಲಿ ಬೆರೆಸಿ ಮತ್ತೊಂದು ಭಾಗವನ್ನು ಕಂಪ್ಯೂಟರ್ - ಸೃಷ್ಟಿತ ಚಿತ್ರಗಳೊಂದಿಗೆ ಬೆರೆಸುವುದು. ಇದಕ್ಕೋಸ್ಕರ ಸೌದಿ ಅರೇಬಿಯದಲ್ಲಿ ಹಲವು ಸ್ಟುಡಿಯೊಗಳನ್ನು ಸ್ಥಾಪಿಸಲಾಗಿದೆ. ಅಲ್ಲೆಲ್ಲ ಸಿರಿಯಾದ ಎರಡು ಅಧ್ಯಕ್ಷೀಯ ಅರಮನೆಗಳ ಮತ್ತು ಡಮಾಸ್ಕಸ್, ಅಲೆಪ್ಪೊ, ಹೋಮ್ಸ್ ನಗರಗಳ ಪ್ರಧಾನ ಚೌಕಗಳ ನಕಲುಗಳನ್ನು ನಿರ್ಮಿಸಲಾಗುವುದು. ಈ ತೆರನಾದ ಸ್ಟುಡಿಯೊಗಳು ದೋಹಾದಲ್ಲಿ ಈಗಾಗಲೆ ಇವೆಯಾದರೂ ಅವುಗಳ ಸಂಖ್ಯೆ ಈ ಕಾರ್ಯಕ್ರಮಕ್ಕೆ ಬೇಕಾಗುವಷ್ಟಿಲ್ಲ.

ಮಾಧ್ಯಮಗಳ ಮತ್ತು ''ಸಿರಿಯಾದ ಸ್ವತಂತ್ರ'' ಸೇನೆಯ ಚಟುವಟಿಕೆಗಳ ನಡುವೆ ಹೊಂದಾಣಿಕೆ ಇರುವಂತಾಗಲು ಏನೆಲ್ಲ ಕ್ರಮಗಳ ಅಗತ್ಯವಿದೆಯೋ ಅದನ್ನೆಲ್ಲ ಮಾಡಿದ್ದು ರಿಯಾದ್‌ನ ಮೂರನೆಯ ಸಭೆಯಲ್ಲಿ. ಆ ರಾಜಕೀಯ ಸಭೆಯಲ್ಲಿ ಭಾಗವಹಿಸಿದ ಮಹಾನುಭಾವರೆಂದರೆ ಅಮೆರಿಕಾದ ರಾಯಭಾರಿ, ಜನರಲ್ ಜೇಮ್ಸ್ ಬಿ. ಸ್ಮಿಥ್, ಬ್ರಿಟನ್‌ನ ಓರ್ವ ಪ್ರತಿನಿಧಿ, ರಾಜಕುವರ ಬಂದರ್ ಬಿನ್ ಸುಲ್ತಾನ್. ಇಂದು ಸಿರಿಯಾದ ಸ್ವತಂತ್ರ ಸೇನೆಯಲ್ಲಿ ನಿರ್ಧಾರಾತ್ಮಕ ಪಾತ್ರ ವಹಿಸುತ್ತಿರುವವರು ಯಾರು ಗೊತ್ತೇ? ಇದೇ ರಾಜಕುವರ ಬಂದರ್‌ಗೆ ಸೇರಿದ ಕೂಲಿ ಸಿಪಾಯಿಗಳು.

ಸಿರಿಯಾ ವಿರುದ್ಧದ ಈ ಕಾರ್ಯಾಚರಣೆ ಕಳೆದ ಕೆಲವು ತಿಂಗಳುಗಳ ಹಿಂದೆಯೇ ಆರಂಭವಾಗಿತ್ತು. ನ್ಯಾಟೊ ಪಡೆಗಳು ಸಿರಿಯಾದಲ್ಲಿ ಕಾನೂನುಬಾಹಿರವಾಗಿ ಮಧ್ಯಪ್ರವೇಶ ಮಾಡುವುದನ್ನು, ಬಲಪ್ರಯೋಗವೂ ಸೇರಿದಂತೆ ಎಲ್ಲಾ ವಿಧಾನಗಳ ಮೂಲಕ ವಿರೋಧಿಸಲಾಗುವುದೆಂದು ರಷ್ಯಾ ಅಧ್ಯಕ್ಷ ಪುಟಿನ್ ಹೇಳಿದಾಕ್ಷಣ ಅಮೆರಿಕಾದ ರಾಷ್ಟ್ರೀಯ ಭದ್ರತಾ ಮಂಡಳಿ ಗಡಬಡಾಯಿಸಿ ಕಾರ್ಯಾಚರಣೆಯನ್ನು ಚುರುಕುಗೊಳಿಸಲು ನಿರ್ಧರಿಸಿತು. ಈ ಕಾರ್ಯಾಚರಣೆಯ ಹಿಂದೆ ಎರಡು ಉದ್ದೇಶಗಳಿವೆ. ಒಂದು, ಅಪಪ್ರಚಾರ ನಡೆಸುವುದು; ಇನ್ನೊಂದು, ಎಲ್ಲಾ ರೀತಿಯ ಪ್ರತಿಕ್ರಿಯೆಗಳನ್ನು ಕಟುವಾಗಿ ಖಂಡಿಸುವುದು.

ಟಿವಿ ಉಪಗ್ರಹಗಳನ್ನು ಮಿಲಿಟರಿ ಉದ್ದೇಶಗಳಿಗೆ ಬಳಸಿಕೊಳ್ಳುವುದು ಹೊಸ ವಿದ್ಯಮಾನವೇನೂ ಅಲ್ಲ. ಇಸ್ರೇಲ್ ಒತ್ತಡಕ್ಕೆ ಮಣಿದ ಅಮೆರಿಕಾ ಮತ್ತು ಐರೋಪ್ಯ ಒಕ್ಕೂಟಗಳು ಲೆಬನಾನ್, ಇರಾಕ್, ಲಿಬಿಯ ಮತ್ತು ಇರಾನ್‌ನ ಟಿವಿ ವಾಹಿನಿಗಳ ಪ್ರಸಾರಗಳನ್ನು ಒಂದೊಂದಾಗಿ ತಡೆಗಟ್ಟುತ್ತಾ ಬಂದಿವೆ. ಆದರೆ ವಿಶ್ವದ ಇತರೆಡೆಗಳ ಚಾನಲ್‌ಗಳಿಗೆ ಯಾವುದೇ ತಡೆ ಒಡ್ಡಲಾಗಿಲ್ಲ. ಸುಳ್ಳು ಸುದ್ದಿಗಳ ಪ್ರಸಾರ ಕೂಡ ಒಂದು ಹೊಸ ಆವಿಷ್ಕಾರವಲ್ಲ. ಕಳೆದ ಒಂದು ದಶಕದಲ್ಲಿ ಪ್ರಚಾರತಂತ್ರಕ್ಕೆ ಸಂಬಂಧಿಸಿದ ನಾಲ್ಕು ಗಮನಾರ್ಹ ಕ್ರಮಗಳನ್ನು ಕೈಗೊಳ್ಳಲಾಗಿದೆ. ಅವೆಂದರೆ :

೧. ೧೯೯೪ರಲ್ಲಿ ''ಜಿರಲೆಗಳನ್ನು ಸಾಯಿಸಿ'' ಎಂಬ ಘೋಷಣೆಯೊಂದಿಗೆ ರುವಾಂಡಾ ದೇಶದಲ್ಲಿ ಜನಾಂಗ ಹತ್ಯೆಗೆ ಚಾಲನೆ ನೀಡಿದ್ದು ''ಫ್ರೀ ರೇಡಿಯೊ ಆಫ್ ದ ಥೌಸೆಂಡ್ ಹಿಲ್ಸ್'' (ಆರ್.ಟಿ.ಎಮ್.ಎಲ್.) ಹೆಸರಿನ ಒಂದು ಪಾಪ್ ಸಂಗೀತದ ಬಾನುಲಿ ನಿಲಯ.
೨. ೨೦೦೧ರಲ್ಲಿ ೯/೧೧ರ ದಾಳಿಗಳ ಕುರಿತ ಒಂದೇ ವ್ಯಾಖ್ಯಾನವನ್ನು ಜನರ ಮೇಲೆ ಹೇರಲು ನ್ಯಾಟೊ ಬಳಸಿದ್ದು ಮಾಧ್ಯಮಗಳನ್ನು. ಅಫಘಾನಿಸ್ತಾನ ಮತ್ತು ಇರಾಕ್ ಮೇಲಿನ ದಾಳಿಗಳನ್ನು ಸಮರ್ಥಿಸಿಕೊಳ್ಳಲು ಕೂಡ ಇದೇ ರೀತಿ ಮಾಧ್ಯಮಗಳನ್ನು ಬಳಸಿಕೊಳ್ಳಲಾಯಿತು. ನಂತರ ಆ ದಾಳಿಗಳ ಕುರಿತಂತೆ ಕೀನ್/ಹ್ಯಾಮಿಲ್ಟನ್ ಆಯೋಗದ ವರದಿಗಳು ಹೊರಬಿದ್ದವು. ಬುಷ್ ಆಡಳಿತದ ಆದೇಶದಂತೆ ಈ ವರದಿಗಳನ್ನು ಸೃಷ್ಟಿಸಿದಾತ ಇನ್ಯಾರೂ ಅಲ್ಲ, ಬೆನ್ ರೋಡ್ಸ್.
೩. ೨೦೦೨ರಲ್ಲಿ ಐದು ಟಿವಿ ಚಾನಲ್‌ಗಳನ್ನು (ಟೆಲೆವೆನ್, ಗ್ಲೋಬೊಷನ್, ವೇಲ್ ಟಿವಿ, ಸಿಎಂಟಿ) ಬಳಸಿಕೊಂಡ ಸಿಐಎ, ಹುಸಿ ಪ್ರತಿಭಟನಾಕಾರರು ವೆನೆಝುವೆಲಾದ ಚುನಾಯಿತ ಅಧ್ಯಕ್ಷ ಹ್ಯೂಗೊ ಚಾವೆಝ್‌ನನ್ನು ಸೆರೆ ಹಿಡಿದು ರಾಜೀನಾಮೆ ನೀಡುವಂತೆ ಬಲಾತ್ಕರಿಸಿದರು ಎಂಬ ಕಟ್ಟುಕಥೆಯನ್ನು ಅಲ್ಲಿನ ಜನ ನಂಬುವಂತೆ ಮಾಡಿತ್ತು. ವಾಸ್ತವದಲ್ಲಿ ಅಂದು ನಡೆದದ್ದು ಸೇನಾಪಡೆಗಳ ಕ್ಷಿಪ್ರಕ್ರಾಂತಿ.
೪. ೨೦೧೧ರಲ್ಲಿ ಲಿಬಿಯಾದ ಸಿಎನ್‌ಟಿ ಬಿತ್ತರಿಸಿದ ಸುದ್ದಿಗಳಿಗೆ ಮೂಲವಾಗಿದ್ದುದು 'ಫ್ರಾನ್ಸ್ ೨೪' ಎಂಬ ಚಾನಲ್. ಇದಕ್ಕೋಸ್ಕರ ಅವೆರಡರ ಮಧ್ಯೆ ಲಿಖಿತ ಒಪ್ಪಂದವೊಂದು ಏರ್ಪಟ್ಟಿತ್ತು. ರಾಜಧಾನಿ ಟ್ರಿಪೊಲಿಯಲ್ಲಿ ಕದನ ನಡೆಯುತ್ತಿದ್ದಾಗ ಸ್ಟುಡಿಯೊಗಳಲ್ಲಿ ನಕಲಿ ಸಿನಿಮಾಗಳನ್ನು ತಯಾರಿಸಿದ ನ್ಯಾಟೊ ಅವನ್ನೆಲ್ಲ ಅಲ್ ಜಜೀ಼ರಾ ಮತ್ತು ಅಲ್ ಅರೇಬಿಯಗಳ ಮೂಲಕ ಪ್ರಸಾರ ಮಾಡಿತ್ತು. ಲಿಬಿಯಾದ ಬಂಡಾಯಕೋರರು ಟ್ರಿಪೊಲಿಯ ಪ್ರಧಾನ ಚೌಕದಲ್ಲಿರುವಂತಹ ಕಾಲ್ಪನಿಕ ಚಿತ್ರಗಳನ್ನು ತೋರಿಸಲಾಯಿತು. ನಿಜವಾಗಿ ಅವರೆಲ್ಲ ಬಹಳಷ್ಟು ದೂರದಲ್ಲಿದ್ದರು. ನಕಲಿ ಸಿನಿಮಾಗಳನ್ನು ನೋಡಿ ಯುದ್ಧದಲ್ಲಿ ಸೋಲಾಗಿದೆಯೆಂದು ನಂಬಿದ ಟ್ರಿಪೊಲಿ ನಾಗರಿಕರು ಯಾವುದೇ ಪ್ರತಿರೋಧಕ್ಕೆ ಮುಂದಾಗಲಿಲ್ಲ.

ಇದರರ್ಥ ಮಾಧ್ಯಮಗಳು ಇಂದು ಯುದ್ಧವನ್ನು ಬೆಂಬಲಿಸುವುದಷ್ಟೆ ಅಲ್ಲ, ಅದನ್ನು ನಿರ್ಮಿಸುವ ಕೆಲಸವನ್ನೂ ಮಾಡುತ್ತವೆ. ಇದು ವಿಶ್ವಸಂಸ್ಥೆಯ ಸಾರ್ವತ್ರಿಕ ಮಾನವ ಹಕ್ಕುಗಳ ಘೋಷಣೆಯ ಕಲಮು ೧೯ ಮಾತ್ರವಲ್ಲ, ದ್ವಿತೀಯ ಮಹಾಯುದ್ಧದ ಬಳಿಕ ವಿಶ್ವಸಂಸ್ಥೆಯ ಪ್ರಧಾನ ಸಭೆ ಕೈಗೊಂಡ ನಿರ್ಣಯ ಸಂಖ್ಯೆ ೧೧೦, ೩೮೧, ೮೧೯ರ ಉಲ್ಲಂಘನೆಯಾಗಿದೆ. ಯುದ್ಧಕ್ಕೆ ಸಂಬಂಧಿಸಿದ ಪ್ರಚಾರ ಮಾಡುವುದೆಂದರೆ ಶಾಂತಿಯ ವಿರುದ್ಧ ಅಪರಾಧ ಎಸಗಿದಂತೆ. ಇಂತಹ ಪ್ರಚಾರ ಯುದ್ಧಾಪರಾಧಗಳಿಗೆ ಮತ್ತು ಜನಾಂಗೀಯ ಹತ್ಯೆಗಳಿಗೆ ಅನುವುಮಾಡಿಕೊಡುವುದರಿಂದ ಇದನ್ನು ಅತ್ಯಂತ ಘೋರ ಅಪರಾಧವೆಂದು ಕರೆಯಬೇಕಾಗುತ್ತದೆ.

*(ಥಿಯೆರ್ರಿ ಮೇಯ್ಸನ್ ಫ್ರಾನ್ಸ್‌ನ ಓರ್ವ ಚಿಂತಕರು. ಅಂತರರಾಷ್ಟ್ರೀಯ ಸಂಬಂಧಗಳ ವಿಷಯದ ಕುರಿತು ಅರಬಿಕ್, ಸ್ಪಾನಿಷ್ ಮತ್ತು ರಷ್ಯನ್ ಭಾಷೆಯ ಪತ್ರಿಕೆ ಹಾಗೂ ನಿಯತಕಾಲಿಕೆಗಳಲ್ಲಿ ಲೇಖನ ಬರೆಯುತ್ತಿರುತ್ತಾರೆ. ಇವರು 'ವೋಲ್ಟೇರ್ ನೆಟ್‌ವರ್ಕ್' ಮತ್ತು 'ಆಕ್ಸಿಸ್ ಫಾರ್ ಪೀಸ್ ಕಾನ್‌ಫರೆನ್ಸ್'ಗಳ ಸ್ಥಾಪಕ ಹಾಗೂ ಅಧ್ಯಕ್ಷರು).*

ಮೂಲ : **ಥಿಯೆರ್ರಿ ಮೇಯ್ಸನ್**
ಕನ್ನಡಕ್ಕೆ : **ಸುರೇಶ ಭಟ್ ಬಾಕ್ರಬೈಲು**
'ಈಶಾವಾಸ್ಯಂ', ೨-೧೦-೭೭೬, ಬಿಜೈ, ಮಂಗಳೂರು-೫೭೫ ೦೦೪

## ಶ್ರದ್ಧಾಂಜಲಿ



ರಂಗಭೂಮಿಗೆ ಹೊಸ ಆಯಾಮ ನೀಡಿದ ಹಿರಿಯ ರಂಗ ಕಲಾವಿದೆ ಆರ್. ನಾಗರತ್ನಮ್ಮ ನಿಧನರಾಗಿದ್ದಾರೆ. ೧೯೨೬ರಲ್ಲಿ ಮೈಸೂರಿನಲ್ಲಿ ಜನಿಸಿದ ನಾಗರತ್ನಮ್ಮ ತಮ್ಮ ೧೨ನೇ ವಯಸ್ಸಿನಲ್ಲಿಯೇ ರಂಗಭೂಮಿ ಪ್ರವೇಶಿಸಿ ತಮ್ಮ ಪ್ರತಿಭೆ ಹಾಗೂ ನಿರಂತರ ಶ್ರಮದಿಂದ ರಂಗಭೂಮಿಗೇ ಹೊಸ ಆಯಾಮ ನೀಡಿದವರು. ಮಹಿಳಾ ಪಾತ್ರಗಳನ್ನು ಪುರುಷರೇ ಮಾಡುವ ಸಂದರ್ಭದಲ್ಲಿ ಪುರುಷ ಪಾತ್ರಗಳನ್ನು ಅಭಿನಯಿಸಿ ತೋರಿದ ನಾಗರತ್ನಮ್ಮ ೧೯೫೮ರಲ್ಲಿ ಸ್ತ್ರೀ ನಾಟಕ ಮಂಡಲಿಯನ್ನೇ ಸ್ಥಾಪಿಸಿದವರು. ಬದುಕಿನುದ್ದಕ್ಕೂ ರಂಗಭೂಮಿ ಸೇವೆ ಮಾಡಿ ನಿರ್ಗಮಿಸಿದ ಅವರಿಗೆ 'ಹೊಸತು' ಬಳಗ ಸಂತಾಪ ಹಾಗೂ ಗೌರವ ಅರ್ಪಿಸುತ್ತದೆ.



ಹಿಂದಿಮೂಲ : ಡಾ|| ಹರಿಕೃಷ್ಣ ದೇವಸರೆ
ಕನ್ನಡಕ್ಕೆ : ಡಾ|| ಪಂಚಾಕ್ಷರಿ ಹಿರೇಮಠ

# ಗುಮಾಸ್ತ ಮತ್ತು ರಾವಣ

ಗುಮಾಸ್ತ ದುಖೀರಾಮ ಖಾತೆ ಬರೆದು ಮುಗಿಸುತ್ತಲೇ ಗೋಡೆಯ ಮೇಲಿದ್ದ ಗಡಿಯಾರ ಹನ್ನೆರಡು ಗಂಟೆ ಬಾರಿಸಿತು. ಆತ ಮಸಿದೌತಿ, ಲೆಕ್ಕಣಿಕೆ ಒಂದೆಡೆ ಇರಿಸಿ ಅಂಗಡಿಗೆ ಕೀಲಿ ಹಾಕಿ ಬಗಲಿನಲ್ಲಿ ಕೊಡೆ ಇರಿಸಿಕೊಂಡ ಹಾಗೂ ಚಾಳೀಸನ್ನು ಸ್ವಚ್ಛಗೊಳಿಸಿ ಹಾಕಿಕೊಂಡು ಹೊರಡಲು ಸಿದ್ಧನಾದ.

ವಿಪರೀತ ಕತ್ತಲೆಯ ರಾತ್ರಿ ಅದು. ದಾರಿಯ ದೀಪಗಳು ಕೇವಲ ದೀಪದ ಕಂಬಕ್ಕೆ ಮಾತ್ರ ಬೆಳಕು ಕೊಡುತ್ತಲಿದ್ದವು. ರಸ್ತೆ ದಾಟಿ ಗುಮಾಸ್ತ ತನ್ನ ಮನೆಯತ್ತ ಹೋಗುವ ಓಣಿಯಲ್ಲಿ ಹೊರಳುತ್ತಿರುವಂತೆಯೇ ಓರ್ವ ದಪ್ಪಗಿನ, ಕಪ್ಪಗಿನ ಧಾಂಡಿಗ ಮನುಷ್ಯ ಅವನೆದುರಿಗೇ ಬಂದುನಿಂತ. ಅವನನ್ನು ನೋಡಿದ ಗುಮಾಸ್ತ ನಡುಗತೊಡಗಿದ.

''ಏಯ್ ಗುಮಾಸ್ತ, ಅಂಗಡಿ ಹಾಕಿದೆಯೋ ?'' ಎಂದ ಆ ಮನುಷ್ಯ. ಅವನ ಧ್ವನಿ ಕೂಡ ಭಯ ಹುಟ್ಟಿಸುವ ಹಾಗಿತ್ತು.

ಅದಕ್ಕೆ ಗುಮಾಸ್ತ, ''ಹಾಂ, ಅಂಗಡಿ ಹಾಕಿದೆ. ರಾತ್ರಿ ಹನ್ನೆರಡು ಗಂಟೆ ಆಯಿತಲ್ಲ, ಮುಂಜಾನೆ ಕೂಡ ಜಲ್ದಿ ಬರಬೇಕಲ್ಲ'' ಎಂದು ಭಯದಿಂದಲೇ ಉತ್ತರಿಸಿದ.

''ಇದೆಲ್ಲ ನನಗೆ ಬೇಕಾಗಿಲ್ಲ. ಗೋದಿಯ ಚೀಲದಲ್ಲಿ ಇಟ್ಟಂಗಿಯ ತುಣುಕು ಕೂಡಿಸಲು ನೌಕರರಿಗೇಕೆ ಅವಕಾಶ ಕೊಡಲಿಲ್ಲ ಎಂಬುದನ್ನು ನನಗೆ ಹೇಳು. ಮಾಲೀಕ ನಿನಗೆ ಹಾಗೆ ಮಾಡೆಂದು ಹೇಳಿರುವಾಗ, ಹಾಗೆ ಮಾಡಬಾರದೆಂದು ಹೇಳಲು ನೀನು ಯಾರು ?'' ಎಂದು ಅವನು ಗರ್ಜಿಸಿದಾಗ ಗುಮಾಸ್ತ ಗಲಿಬಿಲಿಗೊಂಡ. ಈ ವಿಷಯ ಕೇವಲ ಮಾಲೀಕ ಮತ್ತು ತನಗೆ ಮಾತ್ರ ಗೊತ್ತೆಂದು ತಿಳಿದಿದ್ದ ಗುಮಾಸ್ತ ಕಕ್ಕಾವಿಕ್ಕಿಯಾದ. ಆದರೂ ಧೈರ್ಯ ತಂದುಕೊಂಡು, ''ಇದೆಲ್ಲ ನಿನಗೆ ಹೇಗೆ ತಿಳಿಯಿತು ? ಅದೂ ಅಲ್ಲದೆ ಇದರಿಂದ ನಿನಗೆ ಏನಾಗಬೇಕು ?'' ಎಂದಾಗ ಆ ಮನುಷ್ಯ ಹಲ್ಲು ಕಡಿಯುತ್ತ ಗರ್ಜಿಸುತ್ತ,

''ಏನಂದೆ ? ಇದರಿಂದ ನನಗೇನಾಗಬೇಕೆಂದು ಕೇಳುತ್ತಿದ್ದೀಯಾ ? ಅದೂ ಅಲ್ಲದೆ ಇಂದು ಹೊರಗಿನಿಂದ ಬಂದ ಎರಡು ಲಕ್ಷ ರೂಪಾಯಿಗಳನ್ನು ಲೆಕ್ಕದಲ್ಲಿ ಜಮಾ ಹಿಡಿಯಬೇಡ ಎಂದು ನಿನ್ನ ಮಾಲೀಕ ದುಲೀಪಚಂದ ನಿನಗೆ ಹೇಳಿದ್ದರೂ ನೀನು ಅದನ್ನು ಲೆಕ್ಕದಲ್ಲಿ ಜಮಾ ತೋರಿಸಿದ್ದೇಕೆ ?''

''ಅದೆಲ್ಲ ಇರಲಿ. ನೀನು ಯಾರೆಂಬುದನ್ನು ಮೊದಲು ಹೇಳು'' ಎಂದಾಗ ಆ ಮನುಷ್ಯ ಕ್ರೂರವಾದ ದನಿಯಲ್ಲಿ,

''ಹಂ... ಹಂ... ನಾನು ಯಾರು ? ಹಂ... ಹಂ... ನಾನು ರಾವಣ. ದುಲೀಪಚಂದ ನನ್ನ ಭಕ್ತ...''

''ಅಂ... ಏನಂದೆ... ನೀನು ...ನೀನು ರಾವಣ ! ...ಅವಾ... ಸತ್ತು...'' ಎನ್ನುತ್ತ ಗುಮಾಸ್ತ ಹೌಹಾರಿದ...

''ಹಾಂ... ಅದೇ ರಾವಣ... ನಾನು...''

ಈ ಮಾತನ್ನು ಕೇಳಿದ ಗುಮಾಸ್ತನ ಗಂಟಲು ಕಟ್ಟಿತು.

''ಹಾಂ... ಹಾಂ... ಅದೇ ರಾವಣ ನಾನು...''

ಆಗ ಗುಮಾಸ್ತ ಅವನ ಕಣ್ಣಲ್ಲಿ ಕಣ್ಣು ಹಾಕಿ ನೋಡಿದಾಗ ಎದುರಿಗೆ ನಿಂತವನು ನಿಜವಾಗಿಯೂ ರಾವಣನಂತೆಯೇ ಕಂಡ. ಆದರೂ ಗುಮಾಸ್ತ ಮತ್ತೆ ಕೇಳಿದ –

''ಅವನಿಗೆ ಹತ್ತು ತಲೆಗಳಿದ್ದವು...''

''ಹಾಂ... ಹಾಂ... ಗುಮಾಸ್ತರೇ... ಅವನಿಗೆ ಹತ್ತು ತಲೆಗಳಿದ್ದವು. ಆದರೆ ನಾನು ಕಲಿಯುಗದ ರಾವಣ. ನನಗೆ ಹತ್ತಲ್ಲ ಲಕ್ಷಗಟ್ಟಲೆ ತಲೆಗಳಿವೆ. ನನ್ನ ಪ್ರತಿಯೊಬ್ಬ ಭಕ್ತನ ತಲೆ ನನ್ನ ತಲೆಯಾಗಿದೆ. ನಿಮ್ಮ ಮಾಲೀಕ ದುಲೀಪಚಂದ ಕೂಡ ನನ್ನದೇ ಒಂದು ತಲೆಯಾಗಿದ್ದಾನೆ. ತಿಳಿಯಿತೇ ?''

''ಹಾಂ... ಹಾಂ... ಹೌದು, ತಿಳಿಯಿತು'' ಎಂದ ಗುಮಾಸ್ತ ಉಗುಳು ನುಂಗುತ್ತ.

ಮತ್ತೆ ಗುಮಾಸ್ತ ಹೇಳಿದ, ''ಎಷ್ಟೊಂದು ಅಪ್ರಾಮಾಣಿಕರು, ಕಳ್ಳರು ಅವರೆಲ್ಲ.''

''ಏಯ್, ಸುಮ್ಮನಿರು, ನಾಲಿಗೆ ಬಿಗಿಹಿಡಿದು ಮಾತಾಡು... ಹುಷಾರ್...'' ಎಂದು ರಾವಣ, ಗದರಿಸಿದ. ಗುಮಾಸ್ತನ ಕಣ್ಣೆದುರಿನಲ್ಲಿ ಗಾಢಾಂಧಕಾರ ಕವಿದ ಅನುಭವವಾಯಿತು. ಗುಮಾಸ್ತ ಕೊಂಚ ಸುಧಾರಿಸಿಕೊಂಡಾಗ ರಾವಣ ಅನ್ನುತ್ತಿದ್ದುದನ್ನು ಕೇಳಿದ :

''ನಾನೀಗ ಮನುಷ್ಯ ವೇಷದಲ್ಲಿ ಅಡ್ಡಾಡುತ್ತಿದ್ದೇನೆ. ನನ್ನ ಮನಸ್ಸಿಗೆ ಬಂದಂತೆ ಅವನಿಂದ ಕೆಲಸ ಮಾಡಿಸುತ್ತಿದ್ದೇನೆ, ಆಧುನಿಕ ರೀತಿಯಲ್ಲಿ, ಹೇಗೆಂದರೆ ಎಲ್ಲ ವಸ್ತುಗಳಲ್ಲೂ ಕಲಬೆರಕೆ ಮಾಡಿಸುತ್ತೇನೆ. ಯಾವುದನ್ನು ಜನ ಹೆಚ್ಚು ಬಯಸುತ್ತಾರೋ ಅದನ್ನೆಲ್ಲ ನಾನು ಸಂಗ್ರಹಿಸಿಟ್ಟು ಕೊಳ್ಳುತ್ತೇನೆ. ಬಜಾರದಲ್ಲಿ ಸಿಗದಂತೆ ಮಾಡುತ್ತೇನೆ. ಯಾರಿಗಾದರೂ ಅವಶ್ಯವೆನಿಸಿದರೆ ನನ್ನಲ್ಲಿದ್ದ ಮಾಲಿನ ಬೆಲೆ ಮೂರು ನಾಲ್ಕು ಪಟ್ಟು ಏರಿಸಿ ಮಾರುತ್ತೇನೆ. ಕಡಿಮೆ ತೂಕ, ಲೆಕ್ಕದಲ್ಲಿ ಏರುಪೇರು ಮಾಡಿ ಇನ್‌ಕಮ್ ಟ್ಯಾಕ್ಸ್ ಉಳಿಸುವುದು ನನ್ನ ಹವ್ಯಾಸಗಳಾಗಿವೆ. ಬೆಳ್ಳಿ-ಬಂಗಾರಗಳ ಬಗ್ಗೆ ನನಗೆ ಅತ್ಯಂತ ಪ್ರೀತಿ, ಮೋಹ. ಅಂತೆಯೇ ನನ್ನ ಚಿನ್ನದ ಲಂಕೆಯನ್ನು ದೊಡ್ಡ ದೊಡ್ಡ ತಿಜೋರಿಗಳಲ್ಲಿ ಬಚ್ಚಿಟ್ಟಿದ್ದೇನೆ.''

''ಈಗೀಗ ಮಾತಾ ಮಂಡೋದರಿ ಮಹಾರಾಣಿಯವರು ಎಲ್ಲಿದ್ದಾರೆ ?'' ಎಂದು ಅತ್ಯಂತ ವಿನಮ್ರತೆಯಿಂದ ಗುಮಾಸ್ತ ನಡುಗುವ ದನಿಯಲ್ಲಿಯೇ ಕೇಳಿದ.

''ಅವಳೂ ಇಲ್ಲಿಯೇ ಇದ್ದಳು. ನಾವಿಬ್ಬರೂ ನಮ್ಮ ಮಾಯಾಜಾಲದ ಶಕ್ತಿಯಿಂದ ಯಾರಿಗೂ ಕಾಣಿಸಿಕೊಳ್ಳುವುದಿಲ್ಲ. ಅವಳಂತೂ ಈಗೀಗ ತುಂಬ ಪ್ರಸಿದ್ಧಿ. ಪ್ರತಿಯೊಂದು ವಸ್ತುವಿನೊಂದಿಗೂ ಅಂಟಿಕೊಳ್ಳುತ್ತಾಳೆ ಹಾಗೂ ಎಲ್ಲದರ ಬೆಲೆಯನ್ನೂ ಹೆಚ್ಚಿಸುತ್ತಾಳೆ. ಜನರಿಗೆ ಇದೆಲ್ಲ ಗೊತ್ತಿಲ್ಲದೆ ದುಬಾರಿ ಬೆಲೆಯ ಬಗ್ಗೆ ಮಾತಾಡುತ್ತಾರೆ'' ಎಂದು ಹೇಳಿದ ರಾವಣ ಒಂದು ಕ್ಷಣ ಮಾತು ನಿಲ್ಲಿಸಿ ಮತ್ತೆ ಎಚ್ಚರಗೊಂಡವನಂತೆ, ''ಓ, ನೀನು ನನ್ನನ್ನು ಮಾತಿನಲ್ಲೇ

ತೊಡಗಿಸಿಬಿಟ್ಟೆ. ನನ್ನ ಪ್ರಶ್ನೆಗೆ ಉತ್ತರ ಕೊಡಲಿಲ್ಲ, ನೀನು ನನ್ನ ಆಜ್ಞೆ ಪಾಲಿಸುತ್ತಿಲ್ಲ... ಮುಂದೆ ಹೀಗೆ ಮಾಡುವುದಿಲ್ಲ ತಾನೇ ?''

''ಮಹಾರಾಯ, ನನ್ನಿಂದ ಈ ಪಾಪದ ಕೆಲಸ ಸಾಧ್ಯವಿಲ್ಲ. ಜೀವನದುದ್ದಕ್ಕೂ ಪ್ರಾಮಾಣಿಕನಾಗಿ ಬದುಕಿದ್ದೇನೆ. ನನಗೊಬ್ಬ ಮಗಳಿದ್ದಾಳೆ. ಅವಳ ಮದುವೆ ಮಾಡಬೇಕಾಗಿದೆ. ಅಂತೆಯೇ ಈ ಮುಪ್ಪಿನಲ್ಲೂ ಮಾಲೀಕರಲ್ಲಿ ದುಡಿಯುತ್ತಿದ್ದೇನೆ.''

''ನಾನು ಹೇಳಿದಂತೆ ಕೇಳು ಗುಮಾಸ್ತ. ನಿನ್ನ ಮಗಳ ಮದುವೆಯೂ ಭರ್ಜರಿಯಾಗಿ ನಡೆಯುತ್ತದೆ. ನಿನ್ನ ಜೀವನ ಸುಖಮಯವಾಗುತ್ತದೆ. ನನ್ನ ಮಾತಿನಂತೆ ನಡೆದವರು ಬಹಳ ಶ್ರೀಮಂತರಾಗಿದ್ದಾರೆ, ಸುಖ ವಾಗಿದ್ದಾರೆ. ನನಗೆ ಶರಣಾದವರು ತಮ್ಮ ಇಬ್ಬಿಬ್ಬರು ಹೆಣ್ಣುಮಕ್ಕಳ ಭರ್ಜರಿ ಮದುವೆ ಮಾಡಿ ಸುಖವಾದ ಜೀವನ ನಡೆಸುತ್ತಿದ್ದಾರೆ.''

''ಇರಬಹುದು. ಈ ಪಾಪದ ಕೆಲಸ ನನ್ನಿಂದ ಸಾಧ್ಯವಿಲ್ಲ. ಇಂಥ ಪಾಪದ ಕೆಲಸ ಮಾಡುವುದಕ್ಕಿಂತ ಸಾಯುವುದು ಮೇಲು.'' ಎಂದು ಹೇಳಿದ ಗುಮಾಸ್ತ ಕೊಡೆಯನ್ನು ನೆಲದ ಮೇಲೆ ಊರಿದ. ಆಗ ರಾವಣ, ''ಸರಿ, ಆದರೂ ನಾಳೆ ಬೆಳಗಿನವರೆಗೂ ಯೋಚಿಸು'' ಎಂದು ಹೇಳುತ್ತ ಕಣ್ಮರೆಯಾದ.

ಎದೆ ಭಾರದೊಂದಿಗೆ ಗುಮಾಸ್ತ ಮನೆಗೆ ನಡೆದ.

ಆ ರಾತ್ರಿಯೆಲ್ಲ ಅವನಿಗೆ ನಿದ್ರೆಯೇ ಬರಲಿಲ್ಲ. ರಾವಣನ ಮಾತುಗಳದ್ದೇ ಯೋಚನೆ. ಆ ಯೋಚನೆ ಯಲ್ಲಿಯೇ ಬಡಬಡಿಸಿದ – ''ಈ ಯುಗದಲ್ಲಿ ರಾವಣ ನಂತೂ ಜನ್ಮವೆತ್ತಿದ. ಆದರೆ ಇದುವರೆಗೂ ರಾಮನ ಜನನದ ಸಮಾಚಾರವೇ ಇಲ್ಲವಲ್ಲ!'' ಎಂದು.

ಮಾರನೆಯ ದಿನ ಬೆಳಗ್ಗೆ ಮತ್ತೆ ಕೆಲಸದ ಮೇಲೆ ಹೋದಾಗ ಮಾಲೀಕ ದುಲೀಪಚಂದ ಗಾದಿಯ ಮೇಲೆ ಲೋಡಿಗೆ ಹಾಯಾಗಿ ಒರಗಿ ತಾಂಬೂಲ ಮೆಲ್ಲುತ್ತಲಿದ್ದ.

ಗುಮಾಸ್ತನನ್ನು ಕಂಡಕೂಡಲೇ ಮಾಲೀಕ ವ್ಯಂಗ್ಯವಾಗಿ, ''ಗುಮಾಸ್ತರೆ, ಎರಡು ಲಕ್ಷ ರೂಪಾಯಿಗಳನ್ನು ಖಾತೆಯಲ್ಲಿ ತೋರಿಸಿಯೇ ಬಿಟ್ಟಿರಿ. ಗೋದಿ ಚೀಲದಲ್ಲಿ ಇಟ್ಟಂಗಿಯ ಚೂರು ಕೂಡಿಸದೆ ಅವುಗಳನ್ನು ಕಳಿಸಿಯೇ ಬಿಟ್ಟಿರಿ. ಆಗಲಿ ಗುಮಾಸ್ತರೆ, ನೀವು ಪ್ರಾಮಾಣಿಕ ರಾಗಿಯೇ ಇರಿ. ನಮಗೆ ನಮ್ಮ ವ್ಯಾಪಾರ ಮಾಡಗೊಡಿ. ನೀವು ನಿಮ್ಮ ಲೆಕ್ಕ ಮಾಡಿಕೊಂಡು ನಿಮ್ಮ ಪ್ರಾಮಾಣಿಕತನದೊಂದಿಗೆ ಜೀವಿಸಿ. ನಮಗೆ ನಿಮ್ಮ ಪ್ರಾಮಾಣಿಕತನದ ಅವಶ್ಯಕತೆಯಿಲ್ಲ. ಇಂದಿನಿಂದ ನಮ್ಮಲ್ಲಿ ನಿಮ್ಮ ಅವಶ್ಯಕತೆಯಿಲ್ಲ'' ಎಂದು ಹೇಳುತ್ತ ವ್ಯಂಗ್ಯವಾಗಿ ನಕ್ಕ.

ಗುಮಾಸ್ತ ದುಖೀರಾಮ ಬಿಟ್ಟ ಕಣ್ಣು ಬಿಟ್ಟಂತೆ ತನ್ನ ಮಾಲೀಕ ದುಲೀಪಚಂದನನ್ನು ನೋಡಿದ. ಅವನಿಗೆ, ಆ ನಗುಮುಖ ನೋಡಿ ಅನ್ನಿಸಿತು – ತಾನು ನೋಡು ತ್ತಿರುವುದು ಮಾಲೀಕ ದುಲೀಪಚಂದನ ಮುಖವನ್ನಲ್ಲ ಸ್ವಯಂ ರಾವಣ ನಗುತ್ತಿರುವುದನ್ನು ನೋಡುತ್ತಿದ್ದೇನೆ ಎನ್ನಿಸಿತು.

ಹಿಂದಿಮೂಲ : **ಡಾ|| ಹರಿಕೃಷ್ಣ ದೇವಸರೆ**
ಕನ್ನಡಕ್ಕೆ : **ಡಾ|| ಪಂಚಾಕ್ಷರಿ ಹಿರೇಮಠ**
ಜಯನಗರ, ಧಾರವಾಡ - ೫೮೦ ೦೦೧

# ಬಿತ್ತಿ ಬೆಳಸೇವು ನಾವು...



ಇಲ್ಲಿ ಜನ ಬಿತ್ತುತ್ತಾರೆ ಬೀಜ
ಗೊಬ್ಬರ ಹಾಕಿ ನೀರುಣಿಸುತ್ತಾರೆ

ನೆಲವ ಸೀಳಿ ಒಂದೊಂದೇ ಹಸಿರು ಹುಟ್ಟಿ
ಹೊಲದ ತುಂಬ ಪಚ್ಚೆಮಣಿ ಹರವಿ
ಖುಷಿಯೋ ಖುಷಿ
ಎದೆಯುಬ್ಬಿಸಿ ಮೀಸೆ ತಿರುವುತ್ತ
ಹತ್ತೂರಿಗೆ ಸಿಹಿ

ಕರಟ್ಯಾವು ಬಿಸಿಲೀಗೆ
ಕೊಳೆತಾವು ನೀರೀಗೆ
ಬುಡಕಿತ್ತಿ ಒರಗ್ಯಾವು
ಬಿರುಗಾಳಿ ಚಳಿಗೆ

ಕೊಡೆಯಾಗುತ್ತಾರೆ
ಒಡ್ಡಾಗುತ್ತಾರೆ
ಬೆಚ್ಚನೆಯ ಮುಸುಕಾಗುತ್ತಾರೆ
ಗಾಳಿಗಡ್ಡ ಮೈ ಹರವಿ
ಒತ್ತು ಮರವಾಗುತ್ತಾರೆ

ಬೆಳೆಯ ಸಿರಿ ಮೊಳಕೆಯಲ್ಲಿ
ಸಾಲದು ನೂರು ಕಣ್ಣು

ಇನ್ನೇನು ಬಿರಿದಾವು
ಕಾಳುಗಳು ಸುರಿದಾವು
ಒಂದಕ್ಕೆ ಹತ್ತಾಗಿ
ಹತ್ತಕ್ಕೆ ನೂರಾಗಿ
ಮನೆಗೆ ಗೋಪುರ ಕಟ್ಟಿ
ಕೀರ್ತಿ ಪತಾಕೆಯ ಹಿಡಿದಾವು

ಹಾದಿ ಬೀದಿಯ ಮೇಲೆ
ದಳ್ಳಾಳಿಗಳ ಜಾತ್ರೆ
ತುಂಬಿದ ತೆನೆಗಳ ಕುತ್ತಿಗೆಗೆ
ಯಾರದೋ ಕತ್ತಿ

ಎಂಥೆಂಥ ತೇಜ ತುಂಬಿದ ಮುತ್ತು
ಮಾರಿಕೊಂಡಿವೆ ತಮ್ಮನ್ನು ತಾವೇ
ಚೆಲ್ಲಾಡಿವೆ ಚಿಪ್ಪುಗಳು ಮೂಲೆ ಮೂಲೆಯಲಿ
ಮುತ್ತಿನ ಹಾರ ವೈಟ್ ಹೌಸಿನಲಿ

ಮತ್ತೂ ಜನರು
ಇಲ್ಲಿ ಬಿತ್ತುತ್ತಾರೆ ಬೀಜ
ವಿದೇಶಿ ತಟ್ಟೆಗಳಲ್ಲಿ
ಕಾಣುತ್ತವೆ ರೊಟ್ಟಿಗಳು

**ಶ್ವೇತಾ ನರಗುಂದ**
ನಂ. ೨೨, ಸುಭಾಷ ನಗರ, ಎಂ. ಎಂ. ಸೆಕ್ಟರ್ - ೧
ಬೆಳಗಾವಿ - ೫೯೦ ೦೧೬

# ಸಮಾನತೆಯು ಅಪಾರ್ಥಕ್ಕೀಡಾಗುವುದು ಸಲ್ಲ

೧೯೪೩ರಲ್ಲಿ ಜನಿಸಿದ ಟೆರಿ ಈಗಲ್‌ಟನ್ ಮೂಲತಃ ಐರ್ಲೆಂಡಿನ ಒಂದು ಕುಟುಂಬದವನು. ಆದರೆ ಹುಟ್ಟಿದ್ದು, ವಿದ್ಯಾಭ್ಯಾಸ ಪಡೆದಿದ್ದು ಮತ್ತು ಕೆಲಸ ಮಾಡಿದ್ದು ಇಂಗ್ಲೆಂಡಿನಲ್ಲಿ, ಕೇಂಬ್ರಿಜ್, ಆಕ್ಸ್‌ಫರ್ಡ್, ಮ್ಯಾಂಚೆಸ್ಟರ್ ಮತ್ತು ಲೆಸ್ಟರ್ ವಿಶ್ವವಿದ್ಯಾನಿಲಯಗಳೊಡನೆ ಅವನದು ಐವತ್ತಕ್ಕೂ ಹೆಚ್ಚು ವರ್ಷಗಳ ಸಂಬಂಧ. ವ್ಯಾಸಂಗ ಕೇಂಬ್ರಿಜ್‌ನಲ್ಲಿ, ಆದರೆ ಪ್ರಾಧ್ಯಾಪಕನಾಗಿದ್ದುದು ಲೆಸ್ಟರ್‌ನಲ್ಲೇ ಹೆಚ್ಚು. ಬೇರೆ ಎರಡು ವಿಶ್ವವಿದ್ಯಾನಿಲಯಗಳಲ್ಲೂ ಬೋಧನೆ ಮತ್ತು ಸಂಶೋಧನೆ ನಡೆಸಿದ್ದಾನೆ. ಸಾಹಿತ್ಯ, ಇತಿಹಾಸ ಮತ್ತು ತತ್ತ್ವಶಾಸ್ತ್ರ ಅವನ ಆಸಕ್ತಿಯ ಕ್ಷೇತ್ರಗಳು. ಸಾಹಿತ್ಯ ಮೀಮಾಂಸೆ ಮತ್ತು ವಿಮರ್ಶೆಯಲ್ಲಿ ಆತನ ಕೃಷಿ ಅತ್ಯಂತ ಮೌಲಿಕವಾದ್ದು. ಅದಕ್ಕೆ ವಿಶೇಷ ಮಾನ್ಯತೆ ಲಭ್ಯವಾಗಿದೆ. ಮಾರ್ಕ್ಸ್‌ವಾದಿ ಸಿದ್ಧಾಂತದ ಬಗೆಗಿನ ಅವನ ತಿಳಿವು ಕೇವಲ ಅಧ್ಯಯನದಿಂದ ಬಂದಿದ್ದಲ್ಲ, ಅವನೊಬ್ಬ ಖ್ಯಾತ ಸಂಘಟಕ ಮತ್ತು ಹೋರಾಟಗಾರ ಕೂಡ. ಅಮೆರಿಕಾದಲ್ಲಿ ಇರುವ ಯೇಲ್ ವಿಶ್ವವಿದ್ಯಾನಿಲಯ ೨೦೧೧ರಲ್ಲಿ ''ಮಾರ್ಕ್ಸ್ ಹೇಳಿದ್ದು ಏಕೆ ಸರಿ ?'' ಎಂಬ ಅವನ ೨೪೦ ಪುಟಗಳ ಪುಸ್ತಕವನ್ನು ಪ್ರಕಟಿಸಿತು. ಮಾರ್ಕ್ಸ್‌ವಾದ ವನ್ನು ಖಂಡಿಸುವವರು ಸಾಮಾನ್ಯವಾಗಿ ಎತ್ತುತ್ತಲೇ ಬಂದಿರುವ ಆಕ್ಷೇಪಗಳನ್ನು ಪರೀಕ್ಷಿಸಿ ಸತ್ವಯುತವಾದ ವಿಮರ್ಶೆ ಮಾಡುವುದು ಅವನ ಉದ್ದೇಶ. ಈ ಪುಸ್ತಕವನ್ನು ಅನುಸರಿಸಿ ಡಾ|| ಜಿ. ರಾಮಕೃಷ್ಣ ಅವರು ಸಂಗ್ರಹ ರೂಪದಲ್ಲಿ ಮಾರ್ಕ್ಸ್‌ವಾದದ ಬಗೆಗಿನ ಪ್ರತಿಪಾದನೆಯನ್ನು ಪರಿಚಯಿಸಿದ್ದಾರೆ. ಇದು ಐದನೆಯ ಕಂತು.



ಎಲ್ಲ ಮಾನವರಿಗೂ ಅನ್ವಯವಾಗುವ ಪ್ರಾಥಮಿಕ ಲಕ್ಷಣಗಳು ಅಷ್ಟೋ ಇಷ್ಟೋ ಇದ್ದೇ ಇವೆ. ಅದಿಲ್ಲದಿದ್ದರೆ ಜಾಗತಿಕ ಸಹಕಾರ ವೆಂಬುದು ಕೇವಲ ಮರೀಚಿಕೆ. ಹಾಗೇನಾದರೂ ಆದರೆ ಸಮಾಜವಾದಿ ನಿರೀಕ್ಷೆ ನಿಷ್ಫಲ ಎನ್ನಬೇಕಾದೀತು. ಮಾರ್ಕ್ಸ್ 'ಸಾಮಾನ್ಯತಃ ಅಸ್ತಿತ್ವದಲ್ಲಿ ಇರುವ ಮಾನವ ಸ್ವಭಾವ' ಮತ್ತು 'ಪ್ರತ್ಯೇಕ ಚಾರಿತ್ರಿಕ ಘಟ್ಟಗಳಲ್ಲಿ ಬದಲಾದ ಮಾನವ ಸ್ವಭಾವ' ಎಂದು ಭಿನ್ನೈಸಿರುವುದು ಗಮನಾರ್ಹ. ಇತಿಹಾಸದುದ್ದಕ್ಕೂ ಮಾನವ ಜೀವಿಗಳಲ್ಲಿ ಬದಲಾಗದೆ ಉಳಿದಿರುವ ಲಕ್ಷಣಗಳುಂಟು. ''ಆಧುನಿಕೋತ್ತರ'' ಎಂದು ಕರೆದುಕೊಳ್ಳುವ ಚಿಂತನೆಗೆ ಅದು ಮಾನ್ಯವಲ್ಲದಿರಬಹುದು. ಬಹುಶಃ ಆ ಚಿಂತಕರಿಗೆ ಪ್ರಕೃತಿ ಮತ್ತು ಜೀವಶಾಸ್ತ್ರ ಎಂದರೆ ಏನೋ ಗುಮಾನಿ ಇರಬೇಕು ! ಅಲ್ಲದೆ ''ಸ್ವಭಾವ'' ಇದೆ ಎಂದರೆ ಅದು ಬದಲಾಗದಿರುವುದು ಎಂಬರ್ಥ ಬಂದುಬಿಡುತ್ತದೆಂಬ ಭಯವೂ ಇರಬಹುದು. ಬದಲಾವಣೆ ಎಂಬುದು ಯಾವಾಗಲೂ ಆಘಾತಕರವೇ ಆಗಿರುತ್ತದೆಂಬುದಿಲ್ಲ, ಆದರೆ ಕೆಲವೇಳೆ ಹಾಗಿರುತ್ತದೆ. ಖಾಯಂ ಆದ್ದು ಎಲ್ಲವೂ ತಿರಸ್ಕಾರಯೋಗ್ಯವೆಂಬುದೂ ಅಷ್ಟೇ ತಪ್ಪು. ಸದಾಕಾಲ ಎಳನೀರು ಸಿಗುವಂತಿರ ಬೇಕೆಂದರೆ ಏಕೆ ಬೇಡ ! ಅಸ್ಪೃಶ್ಯತೆ ಇಲ್ಲದ ಸಮಾಜ ಬಂದಾಗ ಅದು ಮೂರು ವರ್ಷ ಮಾತ್ರ ಇರಲಿ ಎನ್ನುತ್ತೀರೇನು ?

ದಮನ, ಅನ್ಯಾಯ, ಶೋಷಣೆ, ಎಂದೆಲ್ಲಾ ಹೇಳುವಾಗ ಅವನ್ನು ಬಿಟ್ಟು ಸಮಾಜವಾದಿಗಳಿಗೆ ಬೇರೇನೂ ಗೊತ್ತಿಲ್ಲವೆಂದು ಭಾವಿಸಬೇಕಾಗಿಲ್ಲ. ''ಶೋಷಣೆ ಇರುವ ಸಮಾಜ'' ಎಂಬುದನ್ನು ಕುರಿತು ಹೇಳುವಾಗ ಶೋಷಣೆಯ ಸಂಬಂಧವಿಲ್ಲದ ಒಂದು ಸಮಾಜದ ಕಲ್ಪನೆ ಇರಬೇಕಲ್ಲವೆ ? ಅದಕ್ಕೆ ''ಮಾನವ ಸ್ವಭಾವ''ದ ವಿಚಾರ ಎಳೆದು ತರಬೇಕಾಗಿಲ್ಲ, ಬದಲಾಗಿ ಚಾರಿತ್ರಿಕ ಅಂಶಗಳನ್ನು ಗಮನಿಸಿದರೆ ಸಾಕು. ಹಾಗೆಂದು ಮಾನವ ಸ್ವಭಾವದ ನಿರಾಕರಣೆಯೂ ಕೂಡದು. ಏಕೆಂದರೆ, ಏನೋ ಒಂದು ಸ್ವಭಾವವಿದೆ. ಉದಾಹರಣೆಗೆ, ಹುಟ್ಟುತ್ತಲೇ ಮಾನವ ತನ್ನನ್ನು ತಾನು ಪೋಷಿಸಿಕೊಳ್ಳಲಾರ. ಕೆಲಕಾಲ ಅಮ್ಮನ ಆಸರೆ ಅಗತ್ಯ. ಆದರೆ ಅದು ಬಹು ದೀರ್ಘಕಾಲಿಕ ಆಸರೆಯಾದರೆ ಮಗುವಿಗೇನೋ ಮಾನಸಿಕ ದೌರ್ಬಲ್ಯವಿದೆ ಯೆಂಬುದು ಖಚಿತ. ಹುಟ್ಟಿದ ತಕ್ಷಣ ಆನೆಮರಿಯ ರೀತಿ ಮಾನವ ಶಿಶು ಎದ್ದು ಓಡಾಡುವಂತಿದ್ದರೆ ರಾತ್ರಿಯೆಲ್ಲಾ ಅರಚುವ ಮಗುವಿನಿಂದಾಗಿ ಅಮ್ಮಂದಿರು ನಿದ್ದೆ ಕೆಡಿಸಿಕೊಳ್ಳಬೇಕಾಗುತ್ತಿರಲಿಲ್ಲ. ಆದರೆ ವಸ್ತುಸ್ಥಿತಿ ಹಾಗಿಲ್ಲವಲ್ಲ! ಅಂದರೆ ಮಾನವನ ''ಸ್ವಭಾವ'' ನಿಶ್ಚಯವಾದ್ದು. ಮಗುವು ಇನ್ನೂ ಪಾಲನೆಯಲ್ಲಿರುವಾಗ ಆಗಲೇ ಬೇರೊಂದು ಮಗುವಿನ ಪಾಲನೆಯ ಜವಾಬ್ದಾರಿ ಹೊರಲು ಹೊರಟುಬಿಡುತ್ತದೆ. ''ಅಯ್ಯೋ, ಅಲ್ಲಿ ಕಚ್ಚೆ ಇದೆ, ಈಕಡೆ ಬಾರೋ'' ಎಂದು ಹೇಳಲು ಹತ್ತು ವರ್ಷದವರೆಗೆ ಕಾಯುವುದಿಲ್ಲ ಚರಿತ್ರಾ ಎಂಬ ಮಗು. ಅಂದರೆ, ಸ್ವಭಾವವನ್ನು ಅವಳು ರೂಢಿಸಿಕೊಳ್ಳುತ್ತಿರುತ್ತಾಳೆ. ದೊಡ್ಡವಳಾದಾಗ ತನ್ನ ಸುತ್ತಮುತ್ತ ಎಷ್ಟು ಘೋರ ಅನ್ಯಾಯವಿದೆಯೆಂಬುದನ್ನು ಗುರುತಿಸುವ ಸ್ವಭಾವವನ್ನೂ ಅವಳು ಬೆಳೆಸಿಕೊಳ್ಳಲು ಸಾಧ್ಯ. ಮೊದಲು ಪಾಲನೆಯಲ್ಲಿದ್ದ ಮಗು ಆಮೇಲೆ ರಾಜಕೀಯಕ್ಕೆ ಜಿಗಿದುಬಿಟ್ಟಿತಲ್ಲವೆ ? ನಮ್ಮ ಇರವು ಮತ್ತು ಕ್ಷೇಮ ಎಂದರೆ ಏನೇನಿರಬಹುದು ? ಆಹಾರ, ಬೆಚ್ಚನೆಯ ಮನೆ, ಇತರರೊಡನೆ ಸಹವಾಸ, ಬೇರೆಯವರ ಅಧೀನದಲ್ಲಿದ್ದು ಬೈಗುಳ ಮತ್ತು ಒದೆತ ತಿನ್ನದಿರುವುದು, ಇತ್ಯಾದಿ. ರಾಜಕೀಯ ವಿಮರ್ಶೆಗೆ ಇವು ಮೂಲ ಸಾಮಗ್ರಿ



ಯಾಗಲು ಸಾಧ್ಯ. ಅವನ್ನು ಒದಗಿಸದ ಸಮಾಜದಲ್ಲಿ ಏನೋ ಐಬುಗಳಿವೆ. ಅಂತಹ ಸಮಾಜದ ಬಗ್ಗೆ ಬೇರೆ ಸ್ಥಳೀಯ ಮತ್ತು ಸಾಂಸ್ಕೃತಿಕ ಟೀಕೆಗಳೂ ಇರಬಲ್ಲವು; ಆದರೆ ಮೂಲಭೂತ ಐಬುಗಳು ಹೆಚ್ಚು ತೀವ್ರವಾದುವು. ಆದ್ದರಿಂದ 'ಮಾನವ ಸ್ವಭಾವ' ಎಂದು ಹೇಳುತ್ತಾ ಯಥಾಸ್ಥಿತಿಯನ್ನು ಪುರಸ್ಕರಿಸುವುದು ಬೇಡ, ಅದು ಬದಲಾವಣೆಗೆ ಪ್ರಬಲ ಅಸ್ತ್ರವೂ ಆಗಬಲ್ಲದು.

೧೮೪೪ರಷ್ಟು ಹಿಂದೆಯೇ ಮಾರ್ಕ್ಸ್ ತನ್ನ ಮೊದಲ ಬರಹಗಳಲ್ಲಿ ಒಂದು ಮಾತು ಹೇಳಿದ್ದ: ನಾವಿಂದು ಭೌತಿಕ ಪ್ರಾಣಿಗಳಾಗಿ ಹೇಗೆ ಜೀವಿಸುತ್ತಿದ್ದೇವೆಂಬುದು ನಾಳೆ ನಾವು ಹೇಗೆ ಜೀವಿಸಬೇಕೆಂಬುದಕ್ಕೆ ಸೂಚನೆ, ಎಂದು. ಮಾನವ ಶರೀರದಿಂದ ಸ್ವಲ್ಪ ಮುಂದೆ ಹೋಗಿ ನೈತಿಕತೆ, ರಾಜಕೀಯ, ಸಂಸ್ಕೃತಿ, ಮುಂತಾದುವನ್ನೂ ಪರಿಶೀಲಿಸಿಕೊಳ್ಳಬಹುದು. ತನ್ನ ಅಗತ್ಯಗಳನ್ನು ಕೇವಲ ವೈಯ್ಯಕ್ತಿಕ ನೆಲೆಯಲ್ಲಿ ಪೂರೈಸಿಕೊಳ್ಳಲು ಮಾನವನಿಗೆ ಸಾಧ್ಯವಿಲ್ಲ, ಏಕೆಂದರೆ ಅವನು ಸಮಾಜಜೀವಿ. ನಿರಂತರವಾಗಿ ಅವನು ಬೇರೆಯವರೊಡನೆ ಗುದ್ದಾಡುತ್ತಲೇ ಇರುವುದಾಗದು. ''ಮುಕ್ತ ಸಮಾಜ'' ಎನ್ನುವುದರ ಫಜೀತಿ ಇದೇ. ಅಲ್ಲಿ ವ್ಯಕ್ತಿಗಳು ಸ್ವತಂತ್ರರು. ಏನು ಮಾಡಲು ? ಇತರರ ಕುತ್ತಿಗೆ ಪಟ್ಟಿ ಹಿಡಿಯಲು ಎಂದೆ ? ಸಾಮಾಜಿಕ ಜೀವನವನ್ನು ತನ್ನ ಮತ್ತು ಇತರರ ಆಶಯಗಳ ಪೂರೈಕೆಗಾಗಿ ಸಂಘಟಿಸಿಕೊಳ್ಳುವುದು ಸಾಮ್ಯವಾದ. ಅದರಲ್ಲಿ ತನ್ನ ಪಾಲಿದೆ, ಆದರೆ ಇತರರ ಮುಖಾಂತರವೂ ನಡೆಯಬೇಕಾದ್ದು ಎಷ್ಟೋ ಇದೆ. ಅದನ್ನೇ ಕಮ್ಯುನಿಸ್ಟ್ ಪ್ರಣಾಲಿಕೆ ಹೇಳಿದ್ದು: ''ಪ್ರತಿಯೊಬ್ಬರ ಸ್ವತಂತ್ರ ಏಳಿಗೆಯು ಎಲ್ಲರ ಸ್ವತಂತ್ರ ಏಳಿಗೆಗೆ ಒಂದು ಷರತ್ತು.'' ಅಂದರೆ, ಎಲ್ಲರ ಏಳಿಗೆಯೂ ಜೊತೆಜೊತೆಯಲ್ಲಿ ಆಗಿಬರುವಂಥದು. ''ನನ್ನದು ಆಗಲಿ ತಾಳು, ಆಮೇಲೆ ನಿನ್ನದು ನೋಡೋಣವಂತೆ'' ಎಂಬುದು ಸಮಾಜವಾದವಲ್ಲ. ಸಮಾಜವಾದವು ಮುಕ್ತ ಸಮಾಜವನ್ನು ತಿರಸ್ಕರಿಸುವುದಿಲ್ಲ, ಏಕೆಂದರೆ ಅದಕ್ಕೆ ವ್ಯಕ್ತಿಯಲ್ಲಿ ಬದ್ಧತೆ ಇದೆ. ಆದರೆ ಮುಕ್ತ ಆಶಯದ ಪೂರೈಕೆಗೆ ಮುಕ್ತತೆಯಲ್ಲಿನ ವೈರುಧ್ಯಗಳನ್ನು ನಿವಾರಿಸಬೇಕು. ಇಲ್ಲದಿದ್ದರೆ ಇತರರ ಸ್ವಾತಂತ್ರ್ಯಹರಣ ಮಾಡಿ ನಾನು ಏಳಿಗೆ ಹೊಂದುವ ಮುಕ್ತತೆ ಅದಾಗಿಬಿಡುತ್ತದೆ. ಆದ್ದರಿಂದ ವ್ಯಕ್ತಿ ಸ್ವಾತಂತ್ರ್ಯವನ್ನು ಶ್ರೀಮಂತಗೊಳಿಸುವ ಪ್ರಮೇಯ ಇದು. ಅದಕ್ಕಿಂತಲೂ ಉನ್ನತ ನೈತಿಕತೆ ಬೇಕೆ ? ವ್ಯಕ್ತಿಗತ ನೆಲೆಯಲ್ಲಿ ಅದನ್ನೇ ಅಲ್ಲವೆ 'ಪ್ರೇಮ' ಎನ್ನುವುದು ?

ಮಾರ್ಕ್ಸ್‌ವಾದವೆಂದರೆ ಸುಮ್ಮನೆ ಅಜ್ಞಾತ ಸಮುದಾಯದ ಬಗ್ಗೆ ಕಾಳಜಿ ತೋರುವುದಲ್ಲ. ಮಾರ್ಕ್ಸ್‌ನ ರಾಜಕೀಯದ ಮೂಲೋದ್ದೇಶವು ವ್ಯಕ್ತಿಗಳು ಪ್ರವರ್ಧಮಾನಕ್ಕೆ ಬರಬೇಕೆಂಬುದೇ ಆಗಿದೆ. ''ತನ್ನ ವ್ಯಕ್ತಿತ್ವವನ್ನು ಸಾಧಿಸಿಕೊಳ್ಳುವುದು ಇರವಿನ ಅತಿ ಸಾರವತ್ತಾದ ಅಭಿವ್ಯಕ್ತಿ'' ಎಂದು ಒಂದೆಡೆ ಅವನು ಹೇಳಿದ್ದಾನೆ. ಮೊದಲಿಂದ ಕೊನೆಯವರೆಗೆ ಇದೇ ಅವನು ಪ್ರತಿಪಾದಿಸುವ ನೈತಿಕತೆ. ಸಮಾಜ ಮತ್ತು ವ್ಯಕ್ತಿಯ ನಡುವಣ ಸಂಬಂಧದಲ್ಲಿ ಸಂಪೂರ್ಣ ಸಾಮರಸ್ಯ ಸಾಧ್ಯವೇ ಇಲ್ಲವೇನೊ, ಆದರೆ ಅವುಗಳ ಸಾವಯವ ಐಕ್ಯತೆಯೇ ಭವ್ಯ ಕನಸು. ಭಿನ್ನ ವ್ಯಕ್ತಿಗಳ ಆಶಯಗಳ ಪೂರೈಕೆಯಲ್ಲಿ ತಿಕ್ಕಾಟ ಅನಿವಾರ್ಯ. ನಾಗರಿಕನಾಗಿ ನನ್ನ ಜವಾಬ್ದಾರಿಯು, ನಾನು ''ಮುಕ್ತವಾಗಿ'' ಮಾಡಬೇಕೆನಿಸುವುದಕ್ಕೆ ಅಡ್ಡಿಯುಂಟು ಮಾಡಬಹುದು. ದುರಂತ ನಾಟಕಗಳಿಗೆ ಇದು ಪ್ರಶಸ್ತ ವಸ್ತು. ಮಾರ್ಕ್ಸ್‌ವಾದವು ಆ ವೈರುಧ್ಯವನ್ನು ಕೊನೆಗಾಣಿಸಲಾರದು. ಸ್ಮಶಾನಕ್ಕೆ ಮಾತ್ರವೇ ಆ ಸಾಮರ್ಥ್ಯವಿದ್ದೀತು! ಆದ್ದರಿಂದ ಕಮ್ಯುನಿಸ್ಟ್ ಪ್ರಣಾಲಿಕೆಯ ಮಾತು ಆಶಯವಾಗಿಯೇ ಉಳಿದುಬಿಡುತ್ತದೇನೊ, ಆದರೆ ಬೇರೆಲ್ಲ ಆದರ್ಶಗಳಂತೆ ಇದೂ ಬೆನ್ನಹತ್ತಿ ಹೋಗಲು ಯೋಗ್ಯವಾದ್ದು. ಅದು ಗುರಿ, ಹಾದಿ ತೋರಿಸುವ ಆದರ್ಶ. ಸಮಾಜವಾದದ ಬಗ್ಗೆ ಲಘುವಾಗಿ ಮಾತನಾಡುವವರು ಮೊದಲಿಗೆ ಮುಕ್ತ ಮಾರುಕಟ್ಟೆ ಎಂಬುದು ಎಷ್ಟು ಮುಕ್ತವೆಂದು ಪರೀಕ್ಷಿಸಿಕೊಳ್ಳಬಾರದೇಕೆ ? ಅದು ಪೂರ್ತಿ ಮುಕ್ತವಲ್ಲದಿದ್ದರೂ ಅದರ ಬೆನ್ನತ್ತುವುದೇಕೆ ? ಹೋಗಲಿ, ಸಂಪೂರ್ಣಾರ್ಥದಲ್ಲಿ ಪ್ರಜಾಪ್ರಭುತ್ವ ಸಾಧ್ಯವಿಲ್ಲವೆಂದು ನಿರಂಕುಶ ಪ್ರಭುತ್ವವನ್ನು ಆಯ್ದುಕೊಳ್ಳುತ್ತೇವೆಯೆ ? ಹಸಿದವರಿಗೆ ರೊಟ್ಟಿ ಕೊಡುವ ಮುನ್ನವೇ ಅವರು ತೀರಿಕೊಂಡುಬಿಡುತ್ತಾರೇನೋ ಎಂದು ಶಂಕಿಸಿ ರೊಟ್ಟಿ ಕೊಡುವ ಕೆಲಸವನ್ನು ಪೂರ್ತಿ ಕೈಬಿಡುವುದುಂಟೆ ? ಸಮಾಜವಾದವು ಪ್ರಯೋಗ ಯೋಗ್ಯವಲ್ಲವೆಂದು ಹೇಳುವವರು ಬಡತನ ನಿರ್ಮೂಲನ ಮಾಡುತ್ತೇವೆಂದು ಘೋಷಿಸುತ್ತಾರೆ, ವಿಶ್ವದ ವಾಯುಗುಣವು ಶಾಖದ ಗರಿಷ್ಠ ಮಟ್ಟ ಮುಟ್ಟದಂತೆ ಮಾಡುತ್ತೇವೆ ಎನ್ನುತ್ತಾರೆ, ಲಿಬಿಯಾದಲ್ಲಿ ಪ್ರಜಾಪ್ರಭುತ್ವ ಸ್ಥಾಪಿಸುತ್ತೇವೆ ಎನ್ನುತ್ತಾರೆ, ವಿಶ್ವಸಂಸ್ಥೆಯ ನಿರ್ಣಯಗಳಿಂದ ವಿಶ್ವ ಶಾಂತಿಯನ್ನು ನೆಲೆಗೊಳಿಸುತ್ತೇವೆನ್ನುತ್ತಾರೆ. ಇದಾವುದೂ ಸಾಧ್ಯತೆಗೆ ಹೊರತಲ್ಲ, ಆದರೆ ಸಮಾಜವಾದ ಮಾತ್ರವೇ ಏಕೆ ಸಾಧ್ಯತೆಗೆ ಹೊರತಾಗಬೇಕು ?




ಎಲ್ಲರೂ ನೀತಿವಂತರಾದರೆ ಸಮಾಜವು ಸುಂದರವಾಗಿರುತ್ತದೆಯೆಂದು ಕೂತು ಮಾರ್ಕ್ಸ್‌ನ ಗುರಿಯನ್ನು ಮುಟ್ಟಲಾಗುವುದಿಲ್ಲ. ಸಮಾಜವಾದಕ್ಕೆ ಅಗತ್ಯವಾದ್ದು ಅಂತಹ ಅಮೋಘ ಸದ್ಗುಣಗಳಲ್ಲ, ಅಥವಾ ಸದಾ ಒಬ್ಬರನ್ನೊಬ್ಬರು ಬಿಟ್ಟಿರದಂತಹ ಸಮುದಾಯದ ಜನರೂ ಅಲ್ಲ. ಏಕೆಂದರೆ, ಸಮಾಜವಾದದ ರಚನೆಯು ಸಾಮಾಜಿಕ ಸಂಸ್ಥೆಗಳ ಮೂಲಕ ನಡೆಯುವುದೇ ವಿನಾ ಯಾರೋ ಕೆಲವರ ಸದ್ಭಾವಗಳಿಂದಲ್ಲ. ಸ್ವಯಮಾಡಳಿತವಿರುವ ಒಂದು ಸಹಕಾರಿ ಸಂಘದ ಉದಾಹರಣೆ ನೋಡಿ: ಮಾರ್ಕ್ಸ್ ಪ್ರಕಾರ ಸಮಾಜವಾದಿ ಭವಿಷ್ಯದಲ್ಲಿ ಅಂಥವು ಮುಖ್ಯ ಉತ್ಪಾದನಾ ಘಟಕಗಳು. ಅಂತಹ ಸಂಘಗಳಲ್ಲಿ ಒಬ್ಬ ವ್ಯಕ್ತಿಯ ಕೊಡುಗೆಯು ತನ್ನ ಮತ್ತು ಇತರರ ಕಲ್ಯಾಣಕ್ಕೆ ಸಾಧನ. ಅದು ಸಾಧ್ಯವಾಗುವುದು ಯಾರೊಬ್ಬರ ಒಳ್ಳೆಯತನದಿಂದಲೂ ಅಲ್ಲ, ಅದನ್ನು ಸಂಘಟಿಸಲಾಗುವ ರೀತಿಯಲ್ಲಿ ಅದರ ಯಶಸ್ಸಿದೆ. ಸದಾ ಜೊತೆಯವನ ಬಗ್ಗೆ 'ಅಯ್ಯೋ, ಎಂಥ ಒಳ್ಳೆಯವನು' ಎಂಬ ಉದ್ಗಾರ ಬೇಕಿಲ್ಲ ಅಥವಾ ಗಂಟೆಗೊಮ್ಮೆ ಮೈಪರಚಿಕೊಳ್ಳುವ ಉದ್ರೇಕವೂ ಬೇಕಿಲ್ಲ. ಒಬ್ಬ ವ್ಯಕ್ತಿಯ ಸ್ವಯಂ ಸಿದ್ಧಿಯು ಇತರರ ಸಿದ್ಧಿಯ ಹೆಚ್ಚಳಕ್ಕೆ ಕಾರಣವಾಗುತ್ತದೆ, ಏಕೆಂದರೆ ಅಲ್ಲಿ ಸಹಕಾರ, ಲಾಭ ಹಂಚಿಕೆ, ಸಮಾನತೆ ಮತ್ತು ಸಾಮೂಹಿಕ ಆಡಳಿತ ಇದೆ. ಅದು ಸಂಘಟನೆಯ ಸ್ವರೂಪದ ವಿಚಾರ, ವೈಯ್ಯಕ್ತಿಕ ಒಳ್ಳೆಯತನದ್ದಲ್ಲ. ಕೆಲವು ಸಮಾಜವಾದಿ ಉದ್ದೇಶಗಳ ಪೂರೈಕೆಗೆ ಒಬ್ಬ ವ್ಯಕ್ತಿಯ ಕುಯುಕ್ತಿಯು ಅಷ್ಟು ಮುಖ್ಯಾಂಶವಲ್ಲ; ಅಂತೆಯೇ ಯಾರೋ ಒಬ್ಬನು ಖಾಸಗಿ ಕಂಪನಿಯಲ್ಲಿ ಸಂಶೋಧನೆ ಮಾಡುತ್ತಾ ಅದರಿಂದಲೇ ಮಾನವ ಕಲ್ಯಾಣ ಆಗುತ್ತದೆಂದು ಭಾವಿಸಿಕೊಂಡರೂ ಬಾಧಕವಿಲ್ಲ. ಪಾಪ, ಈ ಸಂಶೋಧಕನು ತಯಾರಿಸುವ ಮಾತ್ರೆಗೆ ಮಾಲೀಕ ಮೊಸಳೆ ರೋಗಿಯಿಂದ ಇಪ್ಪತ್ತು ರೂಪಾಯಿ ಸುಲಿಯಬಹುದೆಂಬುದು ಅವನಿಗೆ ತಿಳಿಯದೆ ? ಅವನ ಮಾನವ ಅನುಕಂಪದ ಪ್ರಯೋಜನವೇನು ? ಅವನ ಕೆಲಸದ ಫಲ ತೀರ್ಮಾನವಾಗುವುದು ಅವನೆಂತಹ ಸಾಂಸ್ಥಿಕ ಸಂರಚನೆಯಲ್ಲಿ ದುಡಿಯುತ್ತಿದ್ದಾನೆ ಎಂಬುದರಿಂದ.

ಸಮಾಜವಾದಿ ಸಾಂಸ್ಥಿಕ ರಚನೆಯಲ್ಲಿ ಸ್ವಾರ್ಥಿಗಳು, ಕೆಲಸ ಕದಿಯುವವರು, ದಬಾವಣೆಯಿಂದ ಮುಂದೆ ಬರುವವರು, ಮೋಸಗಾರರು ಸರ್ವಥಾ ಇಲ್ಲದಿರುವಂತೆ ಮಾಡುತ್ತೇವೇನು ? ಹೌದೆಂದು ಮಾರ್ಕ್ಸ್ ನಿಖರವಾಗಿ ಎಲ್ಲೂ ಹೇಳಿಲ್ಲ. ಬೂಸಿ ಬಿಡುವುದು ಮಾರ್ಕ್ಸ್‌ವಾದವಲ್ಲ ನೋಡಿ, ಅದಕ್ಕೆ. ಕಮ್ಯುನಿಸ್ಟ್ ವ್ಯವಸ್ಥೆಯಲ್ಲಿ ಸಮಸ್ತ ಜನ ಭಾಗವಹಿಸಿಯೇ ಸಾಮಾಜಿಕ ಜೀವನ ಸಾಗಿಸುತ್ತಾರಲ್ಲವೆ ? ಆದ್ದರಿಂದ ಘರ್ಷಣೆಗಳು ಇನ್ನೂ ಹೆಚ್ಚುವ ಸಂಭವವಿದ್ದರೆ ಅಚ್ಚರಿಯೇನು ? ಅಂದರೆ, ಮಾನವನ ವಿವಾದಗಳು ಕಮ್ಯುನಿಸ್ಟ್ ಸಮಾಜದಲ್ಲಿ ಸೊನ್ನೆ ಎಂಬ ಮಾತು ಸರಿಯಲ್ಲ. ಪ್ರಾಗಿತಿಹಾಸದಿಂದ ಮಾನವನು ಇತಿಹಾಸದ ಹಂತಕ್ಕೆ ಕಾಲಿರಿಸುತ್ತಿದ್ದಂತೆಯೇ ಅದು ಆಗಿಬಿಡುತ್ತದೆಂಬುದು ಭ್ರಮೆ. ಆರಂಭವಾದ ಇತಿಹಾಸವು ಅಂತಿಮ ಹಂತ ತಲುಪುವವರೆಗೆ ನಾವದಕ್ಕೆ ಕಾಯುವ ಸಹನೆ ಬೇಕು. ಆಗಲೂ ದ್ವೇಷಾಸೂಯೆಗಳು, ಸ್ಪರ್ಧೆ, ಪ್ರಾಬಲ್ಯ, ಇವೆಲ್ಲಾ ಮಾಯವಾಗಿಬಿಡುವುದಿಲ್ಲ. ಇಷ್ಟು ಮಾತ್ರ ಹೇಳಬಹುದು: ಬಂಡವಾಳಶಾಹಿಯಡಿ ಅವುಗಳ ಸ್ವರೂಪ ಮತ್ತು ಪ್ರಭಾವ ಎಷ್ಟು ಗಾಢ ಮತ್ತು ಕ್ರೂರವಾಗಿವೆಯೋ ಆ ಮಟ್ಟದಲ್ಲಂತೂ ಅವು ಕಮ್ಯುನಿಸ್ಟ್ ಸಮಾಜದಲ್ಲಿ ಇರಲಾರವು. ಅದಕ್ಕೆ ಮಾನವನ ಉನ್ನತ ಮೌಲ್ಯಪ್ರಜ್ಞೆಗಿಂತಲೂ ಸಾಂಸ್ಥಿಕ ಸಂರಚನೆಯಲ್ಲಿನ ಬದಲಾವಣೆಯು ಕಾರಣ.

ಕಮ್ಯುನಿಸ್ಟ್ ಸಮಾಜದ ಕೆಡಕುಗಳಲ್ಲಿ ಮಕ್ಕಳನ್ನು ಘೋರ ದುಡಿಮೆಗೆ ನೂಕುವುದು, ವಸಾಹತುಶಾಹಿಯ ಹಿಂಸೆ, ಅಸಹ್ಯವಾದ ಸಾಮಾಜಿಕ ಅಸಮಾನತೆಗಳು, ಕುತ್ತಿಗೆ ಕುಯ್ಯುವಂತಹ ಆರ್ಥಿಕ ಸ್ಪರ್ಧೆ, ಮಹಿಳೆಯ ಮೇಲಿನ ದೌರ್ಜನ್ಯ ಮತ್ತು ಅಂತಹವು ಇರುವುದಿಲ್ಲ. ಅವು ಬೇರೆ ರೂಪ ಧರಿಸಬಹುದು. ನೋಡಿ, ಬುಡಕಟ್ಟು ಸಮಾಜಗಳಲ್ಲಿ ಹಿಂಸೆ, ಹೊಟ್ಟೆಕಿಚ್ಚು, ಅಧಿಕಾರದ ಲಾಲಸೆ, ಎಲ್ಲವೂ ಇದ್ದವು, ನಿಜ; ಆದರೆ ಅವಾವುವೂ ಸಾಮ್ರಾಜ್ಯಶಾಹಿಯ ಯುದ್ಧದಾಹ, ಮುಕ್ತ ಮಾರುಕಟ್ಟೆಯ ಸ್ಪರ್ಧೆ, ಅಪಾರ ನಿರುದ್ಯೋಗ, ಇವುಗಳಿಗೆ ಸಮನಲ್ಲ.

ಏಕೆಂದರೆ, ಅಂದಿನ ಸಾಂಸ್ಥಿಕ ಸಂರಚನೆಯಲ್ಲಿ ಅವು ಸಾಧ್ಯವಿರಲಿಲ್ಲ. ಧೂರ್ತರು ಎಲ್ಲೆಡೆ ಇದ್ದಾರು, ಆದರೆ ಆ ಅನೈತಿಕ ಕಿರಾತಕರಿಗೆಲ್ಲರಿಗೂ ದಾಂಧಲೆ ನಡೆಸಿ ಪಿಂಚಣಿದಾರರ ಉಳಿತಾಯಗಳನ್ನು ಲೂಟಿಮಾಡುವ ಅವಕಾಶ ಇರುವುದಿಲ್ಲ ಅಥವಾ ಮಾಧ್ಯಮಗಳ ಖದೀಮ ಮಾಲಿಕರಾಗಿ ಸುಳ್ಳುಪಳ್ಳು ಪ್ರಚಾರ ಮಾಡಲು ಬರುವುದಿಲ್ಲ. ಹೆಚ್ಚೆಂದರೆ, ಲೂಟಿಮಾಡಲು ಯಾರನ್ನೋ ನೇಣೆತ್ತಬಹುದು. ಸಮಾಜವಾದಿ ವ್ಯವಸ್ಥೆಯ ಸಾಂಸ್ಥಿಕ ಸಂರಚನೆಯಲ್ಲಿ ಇವು ಸಾಧ್ಯವಾಗವು, ಏಕೆಂದರೆ ಪಿಂಚಣಿದಾರರ ಹಣ ಖಾಸಗಿಯವರ ಕೈಯ್ಯಲ್ಲಿರುವುದಿಲ್ಲ, ಖಾಸಗಿ ಮಾಧ್ಯಮಗಳಿರುವುದಿಲ್ಲ. ಶೇಕ್ಸ್‌ಪಿಯರ್‌ನ ಕೇಡಿಗರು ಪ್ಯಾಲಿಸ್ಟೈನ್ ನಿರಾಶ್ರಿತರ ಮೇಲೆ ಬಾಂಬುಗಳನ್ನು ಒಗೆಯಲು ಅಸಮರ್ಥರಿದ್ದರಲ್ಲವೆ? ಗುಡಗಾಂವ್‌ನಲ್ಲಿ ಮಾರುತಿ ಸುಝುಕಿ ಕಂಪನಿಯು ಇಂದಿನ ಸ್ವರೂಪದಲ್ಲಿರುವಾಗ ನಡೆಯುವ ಹಿಂಸೆಯು ಸಾಂಸ್ಥಿಕವಾಗಿ ಭಿನ್ನವಾಗಿರುವಾಗ ನಡೆಯಲಾರದಲ್ಲ, ಹಾಗೆ. ಗುಲಾಮರ ಮೇಲೆ ಪ್ರಾಚೀನ ರೋಮಿನ ಮಾಲಿಕರು ಎಸಗುತ್ತಿದ್ದ ಕ್ರೌರ್ಯವನ್ನು ಇಂದಿನ ರೋಮಿನ ಪೋಪ್ ಎಸಗಲಾರ! ಯಾವ ಸಾಂಸ್ಥಿಕ ಸಂರಚನೆಯ ಲಕ್ಷಣ ಏನೆಂಬುದು ಮೂಲಭೂತ ಅಂಶ.

ಅಷ್ಟೇಕೆ, ಪ್ರಜಾಪ್ರಭುತ್ವವು ಆಚರಣೆಯಲ್ಲಿರುವುದನ್ನು ಗಮನಿಸೋಣ. ನವಿರು ಚಾಣಾಕ್ಷತನದಿಂದ ಮೆರೆಯುವ ದುರಹಂಕಾರಿ ಇತರರನ್ನು ಮೆಟ್ಟಿ ನಿಲ್ಲಬಲ್ಲ, ಅಂತೆಯೇ ಒಳ್ಳೆಯ ಮಾತನಾಡುತ್ತಲೇ ಪರಮಭ್ರಷ್ಟನಾಗಿ ಅಧಿಕಾರ ಕಸಿದುಕೊಳ್ಳಬಲ್ಲ, ವ್ಯಕ್ತಿಗಳಿಗೆ ಕೊರತೆಯಿಲ್ಲ. ಆದರೆ ನೈಜ ಪ್ರಜಾಪ್ರಭುತ್ವದಲ್ಲಿ ಅದನ್ನು ತಡೆಯಬಲ್ಲ ಸಾಂಸ್ಥಿಕ ಸಂರಚನೆ ಉಂಟು. ಆ ಸಂರಚನೆಯನ್ನು ಬಳಸದಿದ್ದರೆ ಅಥವಾ ಬುಡಮೇಲು ಮಾಡಿದರೆ ಸನ್ನಿವೇಶವೇ ಬೇರೆ. ಪೀಡಕರನ್ನು ನಿಗ್ರಹಿಸಬಲ್ಲ ವ್ಯವಸ್ಥೆಯಂತೂ ಇದೆಯಲ್ಲ; ಮತದಾನ, ಸಮಿತಿಗಳು, ಸಂವಿಧಾನ ಮತ್ತದರ ತಿದ್ದುಪಡಿಗಳು, ಉತ್ತರದಾಯಿತ್ವ, ನಿರ್ದಿಷ್ಟ ವ್ಯವಹಾರ ಕ್ರಮ, ಬಹುಮತವುಳ್ಳವರ ಅಧಿಕಾರ, ಇತ್ಯಾದಿ. ಇವನ್ನೆಲ್ಲಾ ತಲೆಕೆಳಗು ಮಾಡಿ ಪಟಿಂಗರಾಗಲು ಅಸಾಧ್ಯವೇನಲ್ಲ, ಆದರೆ ಪ್ರಜಾಪ್ರಭುತ್ವವಾದಿ ಒಮ್ಮತದ ಆಸರೆಯಲ್ಲಿ ಅದನ್ನು ತಡೆಗಟ್ಟಲು ಅವಕಾಶವಿದೆ. ಇಲ್ಲಿ ಒಳ್ಳೆಯತನವು ವ್ಯಕ್ತಿಗತವಾದ್ದರಿಂದ ಹಾಗಿರುತ್ತದೆನ್ನುವುದು ಢೋಂಗಿ; ಸಾಂಸ್ಥಿಕ ಸಂರಚನೆಯಲ್ಲಿ ಅದು ಮೇಳೈಸಿದೆ. ಪ್ರಪಂಚದಲ್ಲಿ ಎಲ್ಲರನ್ನೂ ಕುರುಡ-ಕುಂಟರನ್ನಾಗಿ ಮಾಡಿದರೆ ಯುದ್ಧವನ್ನು ತಡೆಗಟ್ಟಬಹುದು ಎಂದು ಪ್ರಲಪಿಸುವುದಕ್ಕಿಂತ ನಿಶ್ಶಸ್ತ್ರೀಕರಣ, ಪರಸ್ಪರ ಸಂಧಾನಗಳು, ಶಾಂತಿ ಕೌಲುಗಳು, ಅವನ್ನು ಕಾರ್ಯಗತಗೊಳಿಸುವ ಯಂತ್ರ, ಇವು ಯುದ್ಧದ ನಿವಾರಣೆಗೆ ಉತ್ತಮ ವಿಧಾನಗಳಲ್ಲವೆ?

ಸಾರಾಂಶವಿಷ್ಟೆ: ಮಾರ್ಕ್ಸ್‌ವಾದವು ಮಾನವನನ್ನು ಪರಮಶ್ರೇಷ್ಠನನ್ನಾಗಿಸುವ ಪೊಳ್ಳು ಭರವಸೆ ನೀಡುವುದಿಲ್ಲ. ಕಷ್ಟಪಟ್ಟು ದುಡಿಯುವುದನ್ನು ಸಹ ಅದು ದೂರಮಾಡಲಾರದು. ಎಷ್ಟೇ ವಿಪುಲ ಉತ್ಪನ್ನ ಸಾಧ್ಯವಾದರೂ ಕೆಲವು ರೀತಿಯ ಕೆಲಸಗಳು ಅರುಚಿಕರವಾಗಿಯೇ ಉಳಿದಿರಲು ಸಾಧ್ಯ. ಹಾಗಿದ್ದರೆ ಮಾರ್ಕ್ಸ್‌ವಾದ ಮಾಡುವುದೇನು? ಇಂದಿನ ವ್ಯವಸ್ಥೆಯಲ್ಲಿ ಹಲವು ಬಗೆಯ ವೈರುಧ್ಯಗಳಿವೆ, ಇತಿಹಾಸವು ಸಕ್ರಮವಾಗಿ ಜರುಗಲು ಅವು ಅಡ್ಡಿಯಾಗಿವೆ, ಆದರಿಂದಾಗಿ ಸ್ವಾತಂತ್ರ್ಯ ಮತ್ತು ವೈವಿಧ್ಯತೆ ಎಷ್ಟು ಅರಳಬಹುದೋ ಅಷ್ಟು ಅರಳಲು ಸಾಧ್ಯವಾಗುತ್ತಿಲ್ಲ. ಅಂತಹ ವೈರುಧ್ಯಗಳ ನಿವಾರಣೆಯನ್ನು ಮಾರ್ಕ್ಸ್‌ವಾದವು ಮಾಡಲೆಳಸುತ್ತದೆ. ಆದರ ಗುರಿಯನ್ನು ಕೇವಲ ಭೌತಿಕ ನೆಲೆಗೆ ಸೀಮಿತಗೊಳಿಸಬಾರದು. ಏಕೆಂದರೆ, ಇಂದು ದುರ್ಲಭವಾದ್ದು ನಾಳೆ ವಿಪುಲವಾಗಿ ಲಭ್ಯವಾಗುವಂತಾದಾಗ, ತುಳಿತಕ್ಕೊಳಗಾಗಿ ದುಡಿಮೆ ಮಾಡುವ ಪ್ರಸಂಗವಿಲ್ಲದಾದಾಗ, ಮಾನವನಿಗೆ ಹಿಂದೆಂದೂ ಇಲ್ಲದಷ್ಟು ಸ್ವಾತಂತ್ರ್ಯ ಮತ್ತು ವಿರಾಮ ದೊರಕುತ್ತದೆ. ಅದು ವ್ಯಕ್ತಿಯ ಮಾನಸಿಕ (ಬೇಕಾದರೆ ಅದನ್ನು ಅಧ್ಯಾತ್ಮವೆಂದು ಕರೆಯಿರಿ) ಹೊಮ್ಮುವಿಕೆಗೆ ಅದ್ಭುತ ಊರುಗೋಲು. ಭೌತಿಕ ಮತ್ತು ಮಾನಸಿಕ ವಿಕಾಸಗಳು ಯಾವಾಗಲೂ ಸರಿಸಮನಾಗಿಯೇ ಹೋಗುತ್ತಿರುವುದಿಲ್ಲ. ಅಂಬಾನಿ ಯಂತಹ ಶ್ರೀಮಂತನು ಶಾಕುಂತಲ ನಾಟಕವನ್ನು ಸವಿಯಲು ಸಮರ್ಥನಾಗುತ್ತಾನೆ ಅಥವಾ ಆಶಯವಿರಿಸಿಕೊಳ್ಳುತ್ತಾನೆ ಎಂಬುದು ಖಾತ್ರಿಯಲ್ಲ. ಎಷ್ಟೋ ಮಠಗಳ ಜಗದ್ಗುರುಗಳ ಅಧ್ಯಾತ್ಮ ಜೀವನ ಎಷ್ಟು ಬರಡಾಗಿದೆಯೆಂಬುದು ಯಾರಿಗಾದರೂ ತಿಳಿದೀತು. ಅವರ ಭೌತಿಕ ಸಂಪತ್ತಿಗೇನು ಕಡಿಮೆ ಇದೆ? ಆದರೂ ಒಂದಂಶ ನಿಜ: ಹಸಿವಿನಿಂದ ನರಳುತ್ತಿರುವಾಗ, ದಮನಕ್ಕೆ ಸಿಲುಕಿರುವಾಗ, ನೈತಿಕ ಬೆಳವಣಿಗೆ ಕುಂಠಿತವಾಗಿರುವಾಗ, ನಾವಾಗಬೇಕೆಂದು ಆಶಿಸುವುದನ್ನು ಪೂರೈಸಿಕೊಳ್ಳಲು ಸ್ವಾತಂತ್ರ್ಯವಿದೆ ಎಂಬುದು ಕುಹಕ. ಭೌತವಾದಿಗಳು ಅಧ್ಯಾತ್ಮ ಚಿಂತನೆಯ ವಿರೋಧಿಗಳಲ್ಲ, ಆದರೆ ಅಧ್ಯಾತ್ಮವೆಂದರೆ ನೀರಸ ಜೀವನ, ಪಾರಲೌಕಿಕತೆ, ಢೋಂಗಿ ಸ್ವಾಮಿಗಳ ಉಪದೇಶ, ಇವನ್ನೆಲ್ಲಾ ಮಾನ್ಯಮಾಡಲು ಭೌತವಾದವು ಸಿದ್ಧವಿಲ್ಲ. ವಿಶ್ವದ ವಿಸ್ಮಯವನ್ನು ತನ್ಮಯವಾಗಿಸಿಕೊಳ್ಳುವ ಮತ್ತು ಮಾನಸಿಕ ತುಮುಲವನ್ನು ದೂರಮಾಡಿ ಶಾಂತಿಯ ಸೊಬಗನ್ನು ಅನುಭವಿಸುವ ಅಧ್ಯಾತ್ಮ ಭೌತವಾದಕ್ಕೆ ಆಪ್ತವಾದ್ದು. ಆದರೆ ಅದಕ್ಕೆ ಒಂದು ಸೂಕ್ತ, ನಿರ್ದಿಷ್ಟ, ಭೌತಿಕ ಸನ್ನಿವೇಶವು ಅಗತ್ಯವೆಂಬುದನ್ನು ಭೌತವಾದವು ಒತ್ತಿಹೇಳುತ್ತದೆ. ದುರ್ಭಿಕ್ಷದ ಸಂದರ್ಭವು ಮಾನವನ ಪರಮ ಸಾಧ್ಯತೆಗಳ ಹೊಮ್ಮುವಿಕೆಗೆ ಸೂಕ್ತ ವಾತಾವರಣ ಹೇಗಾದೀತು? ಅದು ಹಿಂಸೆ, ಆತಂಕ, ಹೆಚ್ಚು ಹೆಚ್ಚು ಗಳಿಸಿ ತುಂಬಿಕೊಳ್ಳುವ ಪ್ರವೃತ್ತಿ, ಹೊಟ್ಟೆಕಿಚ್ಚು, ದ್ವೇಷ, ಮುಂತಾದುವನ್ನು ಪ್ರಚೋದಿಸಲು ಶಕ್ತವಾಗಿರುತ್ತದೆ, ಅಷ್ಟೆ. ಇಂಥವುಗಳಿಂದ ಮುಕ್ತವಾದಾಗ ಮಾನವ ಇಂದಿಗಿಂತಲೂ ಉತ್ಕೃಷ್ಟಮಟ್ಟದಲ್ಲಿ ನೈತಿಕ ಜೀವಿಯಾಗಿಯೇ ತೀರುತ್ತಾನೆ. ಆದರೆ ಮಾನವ ಸಮಾಜಕ್ಕೆ ಅಂತಹ ಸನ್ನಿವೇಶ ಈವರೆಗೆ ದೊರೆತಿಲ್ಲವಾದ್ದರಿಂದ, ಅದು ದೊರೆತಾಗ ಅವನು ಹೇಗಿರುತ್ತಾನೆಂದು ಹೇಳುವುದು ಸಹ ಪ್ರಶ್ನಾರ್ಹವೆನಿಸಬಹುದು. ಕಮ್ಯುನಿಸ್ಟ್ ಪ್ರಣಾಳಿಕೆಯ ಮೊದಲ ವಾಕ್ಯದ ಅರ್ಥ ಅದೇ: ''ಈವರೆಗಿನ ಮಾನವ ಚರಿತ್ರೆಯು ವರ್ಗ ಹೋರಾಟದ ಚರಿತ್ರೆಯಾಗಿದೆ.'' ವರ್ಗ ಹೋರಾಟದ ಬದಲು ವಿಪುಲತೆಯ ಸನ್ನಿವೇಶವಿದ್ದರೆ ಮಾನವ ಬೇರಿನ್ನಾವ ಆತಂಕಗಳಿಗೆ ನೆಲೆಯಾಗುತ್ತಾನೋ! ಆದರೆ ನಮ್ಮ ನೈತಿಕ ಕೊರತೆಗಳಿಗಿರುವ ಕೆಲವು ಮೂಲ ಕಾರಣಗಳಂತೂ ನಿವಾರಣೆಯಾಗಿರುತ್ತವೆ. ಆದ್ದರಿಂದ ಸುಂದರ ಸ್ವಭಾವದ ಮಾನವರ ವಿಕಾಸದ ಸಾಧ್ಯತೆ ಅಪಾರವಾಗಿರುತ್ತದೆ. ಆ ಮಧ್ಯೆಯೂ ಅವನಲ್ಲಿ ಕೊಂಕುಬುದ್ಧಿ ಇದ್ದೀತೋ ಏನೋ!

ನೈತಿಕವಾಗಿ ಅಂತಹ ದೊಡ್ಡ ಬೆಳವಣಿಗೆಗಳು ಸಾಧ್ಯವಿಲ್ಲವೆಂದು ಭಾವಿಸುವ ಸಿನಿಕರು ಒಂದು ಚಿಕ್ಕ ವ್ಯತ್ಯಾಸವನ್ನು ಗುರುತಿಸಿಕೊಳ್ಳಲಿ ಸಾಕು: ಒಂದು ಕಾಲದಲ್ಲಿ ಮಹಿಳೆಯರನ್ನು ಮಾಟಗಾರ್ತಿಯರೆಂದು ದೂರಿ ಜೀವಂತ ಸುಡುತ್ತಿದ್ದುದು ಗೊತ್ತು ತಾನೆ; ಈಗಿನ ಮಹಿಳೆ ಪುರುಷನೊಡನೆ ಸಮಾನವೇತನಕ್ಕಾಗಿ ಹೋರಾಟ ಮಾಡುವ ಸಂದರ್ಭವಿದೆ. ಅಂದರೆ, ಮಧ್ಯಕಾಲೀನ ಯುಗದ ಮಾನವನಿಗಿಂತ ಇಂದಿನ ಮಾನವ ಹೆಚ್ಚು ಸಂವೇದನಾಶೀಲನೆಂದೆ? ಹಾಗಿದ್ದರೆ ಹಿಂದಿನ ಕಾಲದ ಬಿಲ್ಲು-ಬಾಣಗಳ ಜಾಗದಲ್ಲಿ ಪರಮಾಣು ಬಾಂಬುಗಳನ್ನು ದೂರದ ದೇಶದ ಮೇಲೆ ಒಗೆಯಲು ಕ್ಷಿಪಣಿ ವಾಹಕಗಳನ್ನೇಕೆ ಇಟ್ಟುಕೊಂಡಿದ್ದೇವೆ? ಇತಿಹಾಸವು ನೈತಿಕವಾಗಿ ಬಹಳ ಸುಧಾರಿಸಿದೆ ಎಂಬ ಘನತೆ ದೊರೆತಿಲ್ಲ, ಆದರೆ ಅಲ್ಲಲ್ಲಿ ಪ್ರಗತಿಯನ್ನು ಖಂಡಿತ ಸಾಧಿಸಿಕೊಂಡಿದ್ದೇವೆ. ಇನ್ನೊಂದು ಮಾಪಕದಲ್ಲಿ ನೋಡಿದರೆ ಶ್ರೀಮಂತರ ಸಂಪತ್ತನ್ನು ಕಿತ್ತುಕೊಂಡು ಬಡವರಿಗೆ ಹಂಚುವ ರಾಬಿನ್ ಹುಡ್‌ಗಳು ಕಡಿಮೆಯೂ ಆಗಿದ್ದಾರೆ. ಮಹಾನ್ ಪ್ರಗತಿಯಾಗಿಲ್ಲ ಎಂದೇ ಒಪ್ಪೋಣ, ಆದರೆ ಸಮುದ್ರ ಗಾತ್ರದ ಅವನತಿಯಾಗಿದೆಯೆಂದು ಖಿನ್ನರಾಗುವ ಪ್ರಮೇಯವೂ ಇಲ್ಲವಷ್ಟೆ. ಒಂದು ಆಟದ ಸಾಮಾನನ್ನು 'ನನ್ನದು' ಎಂದು ಒಂದು ಮಗು ಇನ್ನೊಂದು ಮಗುವಿನಿಂದ ಕಸಿಯಲು ಅಬ್ಬರ ಮಾಡುತ್ತದೆ. ವೈರುಧ್ಯ ಮತ್ತು ಗಳಿಕೆ ಅಲ್ಲಿಂದಲೇ ಪ್ರಾರಂಭವಾಗಿವೆ. ಅದು ಬೆಳೆದು ಸಾಂಸ್ಕೃತಿಕವಾಗಿ, ಮಾನಸಿಕವಾಗಿ, ಕೆಲವು ಅಭ್ಯಾಸಗಳು ನಮ್ಮಲ್ಲಿ ವಿಕಾಸಗೊಂಡಿವೆ. ಕೇವಲ ಸಾಂಸ್ಥಿಕ ಬದಲಾವಣೆಯು ಅದನ್ನು ಇಲ್ಲವಾಗಿಸುವುದಿಲ್ಲ. ಸಾಮಾಜಿಕ ಬದಲಾವಣೆಯು ರಾತ್ರೋರಾತ್ರಿ ನಮ್ಮಲ್ಲಿ ಮನೋಭಾವಗಳ ಕ್ರಾಂತಿಕಾರಿ ಬದಲಾವಣೆ ತರುವುದಿಲ್ಲ, ಆದರೆ ಎಂದೂ ತರುವುದಿಲ್ಲ ಎಂಬುದನ್ನು ಸಮಾಜದ ಇತಿಹಾಸದ ನೂರಾರು ಘಟನೆಗಳು ಸುಳ್ಳಾಗಿಸುತ್ತವೆ. ನಮ್ಮ ದೇಶದ ಛಪ್ಪನ್ನಾರು ರಾಜ್ಯಗಳ ಚರಿತ್ರೆಯನ್ನು ನೋಡಿ. ಅದೆಷ್ಟು ಕಾದಾಟ, ಚಿಕ್ಕ ಮತ್ತು ದೊಡ್ಡ ಯುದ್ಧಗಳು, ವೈಮನಸ್ಯ, ಅಪಹರಣ, ಎಲ್ಲಾ ಆಗಿಹೋಗಿವೆ! ಅಂಗ-ವಂಗ-ಕಳಿಂಗ-ದ್ರಾವಿಡ-ವಿದರ್ಭ-ಗೂರ್ಜರ-ರಜಪೂತ-ಗಾಂಧಾರ, ಹೀಗೆ ಈಗಲೂ ಇದ್ದೇವೆ. ಹಿಂದಿನಂತೆಯೇ ಇಲ್ಲ, ಎಲ್ಲ ಆಪ್ಯಾಯಮಾನವೆನ್ನುವಷ್ಟು ಸಮರ್ಪಕವಾಗಿಯೂ ಇಲ್ಲ. ದ್ವೇಷಾಸೂಯೆಗಳೆಲ್ಲ ನಾಶವಾಗಿಲ್ಲ, ಆದರೆ ಅವುಗಳ ಅಭಿವ್ಯಕ್ತಿಯು ಅದೇ ಸ್ವರೂಪದಲ್ಲೂ ಇಲ್ಲ. ಒಡಕು ಪ್ರಜ್ಞೆಯು ನಶಿಸಿಹೋಗಲು ಅದೆಷ್ಟು ಕಾಲ ಬೇಕೆಂಬುದು ಬಹುಶಃ ಭೂಗರ್ಭಶಾಸ್ತ್ರದ ಅಧ್ಯಯನದಲ್ಲಿ ಕಾಣಬರುವ ಕಾಲಪ್ರಮಾಣದಿಂದ ತಿಳಿಯಬಹುದು. ಒಂದು ಪದರದಿಂದ ಇನ್ನೊಂದಕ್ಕೆ ಕ್ರಮಿಸಲು ಅಲ್ಲಿ ಸಹಸ್ರಾರು ವರ್ಷಗಳು ಬೇಕಾಗಿವೆ. ಮಾನಸಿಕ ಪದರಗಳು ಒಂದು ಗಳಿಗೆಯಲ್ಲಿ ಪೂರ್ತಿ ಹರಿದುಹೋಗುವಷ್ಟು ಸೂಕ್ಷ್ಮವಾದುವಲ್ಲ. ಕಾಶ್ಮೀರದ ಸಮಸ್ಯೆ ಆರಂಭವಾಗಿ ೬೫ ವರ್ಷಗಳಾಗಿವೆ, ಚರ್ಚೆ ಮತ್ತು ಸನ್ನಡತೆಗಳಿಂದ ಅದರ ಪರಿಹಾರ ಅಸಾಧ್ಯವೇನಲ್ಲ.

ಸಾಂಸ್ಥಿಕ ಬದಲಾವಣೆಗಳು ದೀರ್ಘಕಾಲಿಕ ಅವಧಿಯಲ್ಲಿ ಮಾನವನ ಪ್ರವೃತ್ತಿಗಳ ಮೇಲೆ ಪ್ರಭಾವ ಬೀರುತ್ತವೆ. ನಮ್ಮ ಸಂವಿಧಾನಕ್ಕೆ ೬೫ರ ಹರೆಯ. ಅಸ್ಪೃಶ್ಯತೆ ನೀಗಿಲ್ಲದಿದ್ದರೂ ಅದರ ಬಗೆಗಿನ ಪ್ರವೃತ್ತಿಯಲ್ಲಿ ಗಮನಾರ್ಹ ಬದಲಾವಣೆಯಾಗಿದೆ. ಕ್ರೂರ ಸತಿ ಪದ್ಧತಿಯ ಆರಾಧಕರು ನಮ್ಮಲ್ಲಿನ್ನೂ ಇದ್ದಾರೆ, ಆದರೆ ಅದನ್ನು ಖಂಡಿಸಿ ನಿವಾರಿಸುವ ಪದ್ಧತಿ ಊರ್ಜಿತವಾಗಿದೆ. ಸಾಮಾಜಿಕ ಆಚರಣೆಗಳಲ್ಲಿನ ವಿಚಾರಗಳು ನಮ್ಮನ್ನು ಬದಲಾಯಿಸುತ್ತವೆಯೇ ವಿನಾ ಕೇವಲ ವಿಚಾರಗಳು ಅದನ್ನು ಮಾಡಲಾರವು. ಆದ್ದರಿಂದ ಆಚರಣೆಗಳನ್ನು ಬದಲಾಯಿಸುತ್ತಾ ಸಮಾಜವನ್ನು ನಾವು ಪರಿಭಾವಿಸಿಕೊಳ್ಳುವ

ವಿಧಾನವನ್ನು ಬದಲಿಸಿಕೊಳ್ಳಬೇಕು. ಹಾದಿಬದಿಯಲ್ಲಿ ಮೂತ್ರ ವಿಸರ್ಜನೆ ಮಾಡಬಾರದು. ಹಾಗೆಂದು ಕಾನೂನಿದೆ ಮತ್ತು ಸಾಮಾಜಿಕ ಕಟ್ಟಳೆ ಇದೆ. ರಾತ್ರಿಯ ವೇಳೆ ಮದ್ಯಪಾನ ಮಾಡಿಬಂದವರು ಅದನ್ನು ಉಲ್ಲಂಘಿಸುವಷ್ಟು ಬೇರೆಯವರು ಮಾಡುವುದಿಲ್ಲ. ಸಾಂಸ್ಥಿಕ ಸಂರಚನೆಯು ನಮ್ಮ ಅಂತರಾಳದ ಅನುಭವಗಳನ್ನು ಸಹ ಕ್ರಮೇಣ ಬದಲಾಯಿಸಿಬಿಡುತ್ತದೆ. ಊಳಿಗಮಾನ್ಯ ವ್ಯವಸ್ಥೆಯಿಂದಾಗಿ ಬೇರುಬಿಟ್ಟಿದ್ದ ಎಷ್ಟೋ ಭಾವನೆಗಳನ್ನು ಕಿತ್ತುಹಾಕಲು ಬಂಡವಾಳಶಾಹಿಗೆ ಸಾಕಷ್ಟು ಕಾಲ ಬೇಕಾಯಿತು. ನಮ್ಮಲ್ಲಿ ಅಂತಹ ಭಾವನೆಗಳು ಇನ್ನೂ ಹೇರಳವಾಗಿಯೇ ಇವೆ. ಮಕ್ಕಳು ಇತಿಹಾಸದ ಪುಸ್ತಕಗಳನ್ನು ಓದುತ್ತಾರೆ. ಹಿಂದೊಂದು ಕಾಲದಲ್ಲಿ ಸಾವಿರಾರು ಹಸಿದ ಮಕ್ಕಳಿಗೆ ಒಂದು ಮುದ್ದೆ ಸಿಗದಂತಿದ್ದಾಗ ಸಾಹುಕಾರರ ಮನೆಯ ನಾಯಿಮರಿಗೆ ಮೀನಿನ ಮಾಂಸ ಸಿಗುತ್ತಿತ್ತು (ಆದರೆ ಪರಿಸ್ಥಿತಿ ಈಗ ಹಾಗಿಲ್ಲ) ಎಂದು ಮಕ್ಕಳಿಗೆ ಭಾವನೆ ಬರಲು ಇನ್ನೆಷ್ಟು ಕಾಲ ಬೇಕು ? ಅದಿರಲಿ, ಇಂದಿನ ಮಕ್ಕಳು ನೂರು ವರ್ಷದ ಹಿಂದಿನ ಮಕ್ಕಳಿಗಿಂತ ಪರಿಸರದ ಬಗ್ಗೆ ಹೆಚ್ಚು ಕಾಳಜಿ ಹೊಂದಿದ್ದಾರೆ. ನಾನು ಪಟಾಕಿ ಮುಟ್ಟುವುದೇ ಇಲ್ಲವೆಂದು ಮೈತ್ರಿ ಐದು ವರ್ಷದವಳಿದ್ದಾಗಲೇ ಹೇಳುತ್ತಿದ್ದಳು. ಅದು ಔಪಚಾರಿಕ ಶಿಕ್ಷಣದ ಪರಿಣಾಮವಲ್ಲ, ಅವಳ ಪರಿಸರದಲ್ಲಿದ್ದ ಭಾವನೆಗಳು ಮತ್ತು ಸಾಮಾಜಿಕ ಆಚರಣೆ ಅದಕ್ಕೆ ಕಾರಣ. ಅವಳಿಂದ ಪರಿಸರದ ರಕ್ಷಣೆ ಆಗಿಹೋಗಲಿಲ್ಲ, ನಿಜ; ಆದರೆ ಶಿಕ್ಷಣವು ಪ್ರವೃತ್ತಿಗಳನ್ನು ಬದಲಾಯಿಸಬಲ್ಲದೆಂಬುದಂತೂ ಸಿದ್ಧವಾದಂತಾಯಿತು.

ಇದನ್ನು ರಾಜಕೀಯ ಶಿಕ್ಷಣಕ್ಕೆ ವಿಸ್ತರಿಸಿ ನೋಡಿ. ಒಂದು ಸಭೆಯಲ್ಲಿ ಯಾರೋ ಹೇಳುತ್ತಾನೆ: ''ನಮಗೆಲ್ಲಾ ಮನೆಗೆಲಸ ಇಲ್ಲ, ಅಷ್ಟು ವಿರಾಮ ದೊರೆತಿದೆ. ಔದ್ಯಮೀಕರಣದ ಫಲ ಅದು.'' ಒಬ್ಬ ಹುಡುಗಿ ಎದ್ದುನಿಂತು ಅದೆಲ್ಲಾ ಸುಳ್ಳು ಎನ್ನುತ್ತಾಳೆ. ಐವತ್ತು ವರ್ಷಗಳ ಹಿಂದೆ ಆಗಿದ್ದರೆ ಅಂತಹ ಹುಡುಗಿ ಸಭೆಯಲ್ಲಿರುತ್ತಿರಲಿಲ್ಲ. ನೂರು ವರ್ಷಗಳ ಹಿಂದೆ ದುರಾಸೆಯನ್ನು ಬಿಡಬೇಕೆಂದು ಆಗ್ರಹಿಸುತ್ತಿದ್ದ ಜನ ಈಗ ಸ್ಟಾಕ್ ಮಾರ್ಕೆಟ್ಟಿಗೆ ಹೋಗಿ ''ದುರಾಸೆಯೇ ಏಳಿಗೆಗೆ ದಾರಿ'' ಎನ್ನುವಂತಾಗಿದೆ. ಅದನ್ನು ಶಾಲೆಯಲ್ಲಿ ಕಲಿತಿದ್ದಲ್ಲ; ನಮ್ಮ ಭೌತಿಕ ಜೀವನದಲ್ಲಿ ಉಂಟಾಗಿರುವ ಬದಲಾವಣೆಯ ಪರಿಣಾಮ ಅದು. ಶೂದ್ರರು ಸಾಮಾಜಿಕವಾಗಿ ಕನಿಷ್ಠರೆಂದು ಭಾವಿಸಿದ್ದ ಕೆಲವು ಭಾರತೀಯ ತತ್ತ್ವಶಾಸ್ತ್ರಗಳು ಅಪರಿಗ್ರಹವನ್ನು ಒಂದು ಮೌಲ್ಯವೆಂದು ಸಾರಿದವು. ಅಂದರೆ, ಸಂಪತ್ತನ್ನು ನಿರಂತರವಾಗಿ ಸಂಗ್ರಹಿಸುತ್ತಾ ಹೋಗಬಾರದೆಂದು ಅವುಗಳ ಬೋಧನೆ. ಮಾರ್ಕ್ಸ್ ''ವಿನಿಮಯ ಮೌಲ್ಯ''ದ ವಿಷಯ ಹೇಳುವಾಗ ಅದು ನಿರಂತರವೆಂದು ಗಮನಿಸಿದ್ದಾನೆ. ಕೋಳಿ ಮಾರಿ ಕುರಿ ಕೊಳ್ಳಿ, ಅದನ್ನು ಮಾರಿ ಹಸು ಕೊಳ್ಳಿ, ಅದನ್ನು ಮಾರಿ ಇನ್ನೇನೋ ಕೊಳ್ಳಿ, ಹೀಗೆ. ಎಲ್ಲಿಗೆ ಪಾರ ಎನಿಸಿರಬೇಕು ನಮ್ಮ ತತ್ತ್ವಶಾಸ್ತ್ರಜ್ಞರಿಗೆ. ಆದರೆ ಊಳಿಗಮಾನ್ಯ ವ್ಯವಸ್ಥೆಯು ನಿಗದಿಗೊಳಿಸಿದ ಶ್ರೇಣೀಕೃತ ಸಮಾಜವು ಅವರಿಗೆ ಬಾಧೆ ಎನಿಸಲಿಲ್ಲ, ಏಕೆಂದರೆ ಅವರ ಪ್ರಕಾರ ಅದು ಮಾನವ ಸಹಜವಾದ್ದು; ಅದರ ಜಾಗದಲ್ಲಿ ಇಂದು ಮುಕ್ತ ಮಾರುಕಟ್ಟೆಯು ಮಾನವ ಸಹಜವಾದುದೆಂದು ಹೇಳುವ ಮನಮೋಹನ ಸಿಂಗ್ ಇದ್ದಾರೆ! ಯೋಚಿಸಿ ನೋಡಿದರೆ ಈ ''ಮುಕ್ತ ಮಾರುಕಟ್ಟೆ'' ಎಷ್ಟು ಈಚಿನದೆಂದು ತಿಳಿಯುತ್ತದಲ್ಲವೆ ? ಹಾಗಿದ್ದರೆ ಸಮಾಜವಾದವು ಮಾನವನಿಗೆ ಅಸಹಜವೆಂದು ಒರಲುವವರಿದ್ದಾರಲ್ಲ ಏಕೆ ? ಏಕೆಂದರೆ ಅವರಿಗೆ ಬಂಡವಾಳಶಾಹಿ ಸಹಜವೆನಿಸಿಬಿಟ್ಟಿದೆ, ಅದಕ್ಕೆ. ಸ್ಟಾಕ್ ಮಾರ್ಕೆಟ್ಟಿಗೆ ನುಗ್ಗಿ ತಾವೂ ಏಕೆ ಒಬ್ಬ ಅಂಬಾನಿ ಅಥವಾ ಮಿತ್ತಲ್ ಆಗಬಾರದೆಂಬ ಆಸೆ ಅವರಿಗೆ. ಪಾಪ, ಸ್ಟಾಕ್ ಮಾರ್ಕೆಟ್ಟಿನ ಸ್ವರೂಪ ಅವರಿಗೆ ತಿಳಿಯದು. ಮಾಗಡಿ ಕೆಂಪೇಗೌಡ ಸ್ಟಾಕ್ ಮಾರ್ಕೆಟ್ಟಿಗೆ ಹೋಗಲಾಗುತ್ತಿರಲಿಲ್ಲ, ಅಂತೆಯೇ ಇಂದಿನ ಸೈಕಲ್ ಶಾಪ್ ಕೂಲಿ ಹುಡುಗನೂ ಹೋಗಲಾರ. ಬೇರೆ ರೀತಿಗಳಲ್ಲಿ ಅವರೂ ಧನದಾಹಿಗಳಿರಬಹುದು, ಆದರೆ ಬಂಡವಾಳಶಾಹಿಗೆ ವಿಶಿಷ್ಟವಾದ್ದು ಅವರಿಗೆ ಎಟಕುವುದಿಲ್ಲ. ಸುಶ್ರುತನು ಮಿದುಳಿನ ಶಸ್ತ್ರಕ್ರಿಯೆ ಮಾಡಲಾಗುತ್ತಿರಲಿಲ್ಲವಲ್ಲ, ಹಾಗೆ. (ಇಲ್ಲ, ಅವನು ಅದನ್ನು ಮಾಡುತ್ತಿದ್ದ, ಎಂದು ಭ್ರಮಿಸುವುದು ರಂಜನೆ ನೀಡಿದರೆ ಯಾರಾದರೂ ಹಾಗೆ ಹೇಳಿಕೊಳ್ಳಲಿ, ಬಿಡಿ.)

ಮಾರ್ಕ್ಸ್‌ಗೆ ಭೂತಕಾಲದ ಬಗ್ಗೆ ಅಪಾರ ನಿರಾಶೆ, ಆದರೆ ಭವಿಷ್ಯದ ಬಗ್ಗೆ ಅದಮ್ಯ ಉತ್ಸಾಹ. ಭೂತಕಾಲದಲ್ಲಿ ಒಂದಾದನಂತರ ಮತ್ತೊಂದು, ಹೀಗೆ ಪಾತಕದ, ದಮನಗಳ ಸರಣಿ. ಥಿಯೋಡರ್ ಅಡೋರ್ನೊ ಒಮ್ಮೆ ಹೇಳಿದ್ದ, ನಿರಾಶೆಯ ಚಿಂತಕರು ಉತ್ಸಾಹದವರಿಗಿಂತ ಮಾನವ ಜನಾಂಗದ ವಿಮುಕ್ತಿಗಾಗಿ ಆತುರರಾಗಿರುತ್ತಾರೆ, ಎಂದು. ಅವರು ಅನ್ಯಾಯವನ್ನು ಕಂಡಿದ್ದಾರೆ, ಅದನ್ನು ಪರಿಹರಿಸಬೇಕೆಂದಿದ್ದಾರೆ; ಅದನ್ನವರು ಮರೆತು ನಿಶ್ಚಿಂತೆಯಿಂದ ಇರಲಾರರು. ಮಾದಕ ದ್ರವ್ಯ ಸೇವಿಸಿ ಅದನ್ನೆಲ್ಲಾ ಮರೆತುಬಿಡಬೇಕೆಂದು ಇತರರಿಂದಲೂ ಅವರು ನಿರೀಕ್ಷಿಸುವುದಿಲ್ಲ. ಇತಿಹಾಸವು ರಕ್ತಸಿಕ್ತವಾಗಿದೆ, ನಿಜ; ಅದಕ್ಕೆ ನಾವು ಜವಾಬ್ದಾರರಲ್ಲ, ಮಾನವ ಕೇಡುಗನಾದ್ದರಿಂದಲ್ಲ ಅದು ಹಾಗಿರುವುದು; ಭೌತಿಕ ಒತ್ತಡಗಳು ಮಾನವರನ್ನು ಹಾಗೆ ಮಾಡಿತು. ''ಮಾನವ ಹೃದಯದ ಕತ್ತಲೆ'' ಎಂಬುದು ಮಾರ್ಕ್ಸ್ ಅಂಗೀಕರಿಸದ ಅಂಶ. ಆದ್ದರಿಂದಲೇ ಭವಿಷ್ಯದಲ್ಲಿ ಅವನಿಗೆ ಬೆಳಕು ಕಾಣುತ್ತದೆ. ಭೌತವಾದವು ಅವನಿಗೆ ಉತ್ಸಾಹ ತುಂಬುವಂಥದು. ಮಾನವನ ನೈತಿಕ ಅಧಃಪತನದಿಂದ ಹಿಂದೆಲ್ಲಾ ಯುದ್ಧ, ಹಿಂಸೆ, ದೌರ್ಜನ್ಯ, ನಡೆದಿದೆ ಎನ್ನುವುದಾದರೆ ಅವುಗಳಿಂದ ಎಂದೂ ಮುಕ್ತಿ ಇಲ್ಲ; ಆದರೆ ಅವು ಸಾಮಾಜಿಕ ವ್ಯವಸ್ಥೆಗಳ ಅನ್ಯಾಯದಿಂದ ಜರುಗಿದ್ದರೆ ಬದಲಿ ವ್ಯವಸ್ಥೆಯಿಂದ ಅವನ್ನು ನೀಗಿಕೊಳ್ಳಬಹುದು, ಜಗತ್ತನ್ನು ಉತ್ತಮಗೊಳಿಸಬಹುದು. ಪರಿಪೂರ್ಣತೆ ಎಂಬ ಜಿಗಣಿಯು ಮೂರ್ಖರನ್ನು ಬೇಕಾದರೆ ಬಾಧಿಸಲಿ, ಅಡ್ಡಿಯಿಲ್ಲ.

ಹಾಗಿದ್ದರೆ ವರ್ಗ ಸಮಾಜದ ಪುರುಷ-ಮಹಿಳೆಯರು ಸರ್ವಥಾ ಅಪವಾದ ವಿಮುಕ್ತರೆ ? ವೈಯ್ಯಕ್ತಿಕ ನೀತಿಹೀನತೆಯಿಂದ ಕೆಡುಕುಗಳೇನೂ ಸಂಭವಿಸಿಯೇ ಇಲ್ಲವೆ ? ಸಾವಿರಾರು ಗುಲಾಮರನ್ನು ಹಿಂಸಿಸಿದ ಜನ ನಿಂದನೆಗೆ ಪಾತ್ರರಲ್ಲವೆ ಅಥವಾ ಇಂದು ಶಕ್ತ ತೋಳುಗಳಿಗೆ ಉದ್ಯೋಗ ದೊರಕದಂತೆ ಮಾಡುವ ಕಂಪನಿಗಳು ದೂಷಣೆಗೆ ಅರ್ಹವಲ್ಲವೆ ? ಒಂದಂತೂ ನಿಜ, ಅದೆಲ್ಲಾ ನಡೆದದ್ದು ಮತ್ತು ನಡೆಯುತ್ತಿರುವುದು ದ್ವೇಷ ಅಥವಾ ಹೊಟ್ಟೆಕಿಚ್ಚಿನಿಂದಲ್ಲ. ತನ್ನ ಲಾಭ ಕುಸಿಯದಿರಲು ಬಂಡವಾಳಶಾಹಿಯು ನಿರುದ್ಯೋಗ ಸೃಷ್ಟಿಸುತ್ತದೆ, ಇಲ್ಲದಿದ್ದರೆ ಸ್ಪರ್ಧೆಯಲ್ಲಿ ಬಂಡವಳಿಗರು ಸೋಲುತ್ತಾರೆ. ಹಿಟ್ಲರನು ಲಕ್ಷಗಟ್ಟಲೆ ಮಕ್ಕಳನ್ನು ಜೀವಂತ ಸುಟ್ಟಾಗ ಅವನಲ್ಲಿ ವಿಕೃತ ಕ್ರೌರ್ಯ ಖಂಡಿತ ಇದ್ದಿತು. ಅವನು ಕ್ರೂರನಲ್ಲವಾದರೆ ಕ್ರೌರ್ಯವೆಂಬುದಕ್ಕೆ ಅರ್ಥವೇ ಇರುವುದಿಲ್ಲ. ಆದರೆ ಅವನ ಕೇಡುಗತನವು ಒಂದು ರಾಜಕೀಯ ವ್ಯವಸ್ಥೆಯ ನೊಗಕ್ಕೆ ಕಟ್ಟಿದ್ದ ಎತ್ತುಗಳು. ಜಲಿಯನ್‌ವಾಲಾಬಾಗಿನ ಹಂತಕ ಡಯರನನ್ನು ಯುದ್ಧ ಕೈದಿಗಳ ತಾಣದ ಉಸ್ತುವಾರಿಗೆ ಬಿಟ್ಟರೆ ಹೇಗಿರುತ್ತದೆ, ಊಹಿಸಿಕೊಳ್ಳಿ. ಇಂದಿನ ''ಆಧುನಿಕೋತ್ತರ'' ಚಿಂತಕರು 'ಮಾನವ ಸ್ವಭಾವ' ಎಂಬುದೇನೂ ಇಲ್ಲವೆನ್ನಬಹುದು, ಆದರೆ ಅದಿದ್ದರೆ ಸಂತೋಷದ ಸಂಗತಿ. ಏಕೆಂದರೆ ಅದು ಸತತವಾಗಿ ಅನ್ಯಾಯಕ್ಕೆ ಪ್ರತಿರೋಧ ಒಡ್ಡುತ್ತಾ ಬಂದಿದೆ. ರಾಜಕೀಯ ದಮನದ ಸನ್ನಿವೇಶಗಳೆಲ್ಲಾ ಚರಿತ್ರೆಯಲ್ಲಿ ಜನರನ್ನು ದಂಗೆಗೆ ದೂಡಿವೆ. ಜನ ಗೆದ್ದರೋ ಸೋತರೋ ಅದು ಬೇರೆ ಪ್ರಶ್ನೆ. ಅಧಿಕಾರದ ದುರಹಂಕಾರಕ್ಕೆ ಮಣಿಯದಿರುವುದು ಮಾನವ ಜನಾಂಗದ ಲಕ್ಷಣವಾಗಿದೆ. ಅಧಿಕಾರ ಗೆದ್ದಿರುವುದು ಕೆಲವು ಕೀಳು ಆಳುಗಳ ಜೊತೆ ಕೈಗೂಡಿಸಿದಾಗ. ಹಿಟ್ಲರ್‌ಗೆ ಗೋರಿಂಗ್, ಗೋಬಲ್ಸ್, ಎಲ್ಲಾ ಬೇಕು. ಒಬಾಮ ಭಾರತದಲ್ಲಿ ಪರಮಾಧಿಕಾರ ಸಾರಲು ಮನಮೋಹನ ಸಿಂಗ್ ಬೇಕು. ಆಳುವ ವರ್ಗಗಳಿಗೆ ಇತಿಹಾಸದಲ್ಲಿ ಪರಮ ಗೌರವ ಇದ್ದುದುಂಟೆ ? ಅವನ್ನು ಸಹಿಸಿರಬಹುದು, ಗೌರವಿಸಿಲ್ಲ. ರಾಜಕೀಯ ಆಳ್ವಿಕೆಗಳು ಮಾನವನನ್ನು ತಮ್ಮಿಷ್ಟದಂತೆ ಬದಲಾಯಿಸಿಕೊಂಡು ಅಧೀನ ಮಾಡಿಕೊಳ್ಳಲು ಸೋಲುತ್ತಲೇ ಬಂದಿವೆ; ಯಾವ ಘನ ಸಂಸ್ಕೃತಿಯೂ ಮಾನವನ ಪ್ರತಿರೋಧ ಸತ್ವವನ್ನು ಹೊಸಕಿಹಾಕಲು ಸಮರ್ಥವಾಗಿಲ್ಲ.

ಹೀಗಿರುವಾಗ ಮಾರ್ಕ್ಸ್ ಹೇಗೆ ತಾನೆ ವೃಥಾ ಕನಸು ಕಟ್ಟಿಕೊಳ್ಳುವ ಚಿಂತಕ ಮತ್ತು ಸಂಘಟಕ ಆಗಬಲ್ಲ! ವರ್ತಮಾನಕ್ಕಿಂತಲೂ ಉತ್ತಮವಾದ ಭವಿಷ್ಯವನ್ನು ಅವನು ಎದುರು ನೋಡಿದ ಎಂಬರ್ಥದಲ್ಲಿ ಅವನು ಕನಸುಗಾರ. ಭೌತಿಕ ಕೊರತೆಯ ಅಂತ್ಯ, ಉತ್ಪಾದನಾ ಸಾಧನೆಗಳು ಖಾಸಗಿ ಮಾಲೀಕತ್ವದಲ್ಲಿರುವುದರ ಅಂತ್ಯ, ಶೋಷಣೆಯ ಹಾಗೂ ಸಾಮಾಜಿಕ ವರ್ಗಗಳ ಅಂತ್ಯ, ಅಷ್ಟೇ ಏಕೆ ಪ್ರಭುತ್ವ ಅಂತ್ಯ, ಇವನ್ನು ಅವನು ನಿರೀಕ್ಷಿಸಿದ ಎಂದಾಗ ಪ್ರಸ್ತುತ ಅವು ಇರುವ ಸಂದರ್ಭಕ್ಕೆ ಪರ್ಯಾಯವಾಗಿ ನಿರೀಕ್ಷಿಸಿದ. ಇಂದಿನ ತಂತ್ರಜ್ಞಾನ, ನೈಸರ್ಗಿಕ ಮತ್ತು ಮಾನವ ಸಂಪನ್ಮೂಲಗಳನ್ನು ಸಮಕಾಲೀನ ರಾಜಕೀಯದಿಂದ ಭಿನ್ನೈಸಿ ಸಮುದಾಯದ ಪರವಾಗಿಸಿದಾಗ ಭೌತಿಕ ಕೊರತೆ ನೀಗಲು ಸಾಧ್ಯವಿಲ್ಲ ಎಂದು ಹೇಳಲಾದೀತೆ ? ಮಾರ್ಕ್ಸ್ ಹೇಳಿದಂತೆ ಅದಕ್ಕೆ ಮಾನವನ ಅಂತರಾಳದ ಸಂಪತ್ತು ಮೊದಲು ವಿಮುಕ್ತಿ ಹೊಂದಬೇಕು. ಅಂದರೆ ಪರಿಪೂರ್ಣತೆಯ ಮಜಲನ್ನು ಮುಟ್ಟುತ್ತೇವೆಂದಲ್ಲ. ಸ್ವಾತಂತ್ರ್ಯವನ್ನು ಚಲಾಯಿಸುವ ಸನ್ನಿವೇಶ ಇದ್ದಾಗ ಅದರ ದುರುಪಯೋಗವೂ ಸಾಧ್ಯ. ಅದನ್ನು ಸರ್ವಥಾ ಇಲ್ಲವಾಗಿಸಲು ಸಾಧ್ಯವಿಲ್ಲವೇನೊ ! ಆದ್ದರಿಂದ ಕಮ್ಯುನಿಸ್ಟ್ ಸಮಾಜದಲ್ಲಿ ಯಾವನೋ ದುರುಳ ಒಂದು ಮಗುವನ್ನು ಕೊಲ್ಲಬಹುದು, ರಸ್ತೆ ಅಪಘಾತಗಳಿರಬಹುದು, ಕೆಟ್ಟ ಕವನಗಳು ಇರಬಹುದು, ಹೊಟ್ಟೆಕಿಚ್ಚು ಉರಿಯಬಹುದು, ಅಸಹ್ಯವಾದ ಉಡುಪು ಧರಿಸುವವರಿರಬಹುದು. ಕಕ್ಕಸ್ಸು ತೊಳೆಯುವ ಕೆಲಸವೂ ಇರುತ್ತದೆ. ಕಮ್ಯುನಿಸ್ಟ್ ಸಮಾಜವೆಂದರೆ ಎಲ್ಲರ ಅಗತ್ಯಗಳ ಪೂರೈಕೆ ಹೌದು, ಆದರೆ ಅಲ್ಲೂ ಕೆಲವು ನಿರ್ಬಂಧಗಳಿರುತ್ತವೆ. ಒಬ್ಬನಿಗೆ ಕಾರು, ಇನ್ನೊಬ್ಬನಿಗೆ ವೀಣೆ ಬೇಕಾದರೆ ಅದನ್ನು ಬಗೆಹರಿಸಬಹುದು, ಆದರೆ ಯಾವನಿಗೋ ಅಡ್ಡಾಡಿಕೊಂಡಿರಲು ಒಂದು ಇಡೀ ಪ್ರಾಂತ್ಯ ಬೇಕೆನಿಸಿದರೆ ಅಂಥವನ ''ಅಗತ್ಯ'' ಪೂರೈಸುವುದಿಲ್ಲ.

**ಡಾ॥ ಜಿ. ರಾಮಕೃಷ್ಣ**
೨-ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್, ೨೨/೧, ೪ನೇ ಕ್ರಾಸ್, ಕಾವೇರಿನಗರ
ಬನಶಂಕರಿ ೩ನೇ ಹಂತ, ಬೆಂಗಳೂರು - ೫೬೦ ೦೮೫



# ಅಮೇರಿಕದ ಅಧ್ಯಕ್ಷೀಯ ಚುನಾವಣೆ – ಕ್ಷೀಣಿಸುತ್ತಿರುವ ಆಸಕ್ತಿ

ಒಂದು ಉಗ್ರ ಬಲಪಂಥೀಯ ಪಾರ್ಟಿ, ಇನ್ನೊಂದು ಬಲಪಂಥೀಯ ಪಾರ್ಟಿ, ಎರಡರ ಮಧ್ಯೆ ವ್ಯತ್ಯಾಸ ಕಡಿಮೆ. ಆಯ್ಕೆಯೂ ಸೀಮಿತ. ಹಾಗಾಗಿ ಮತದಾರರಲ್ಲಿ ಚುನಾವಣೆಗಳಲ್ಲಿ ಆಸಕ್ತಿ ಕುಂದುತ್ತಿರುವುದು ಸಹಜ. ಇದು ಪ್ರಪಂಚದ ಅತ್ಯಂತ ಹಳೆಯ ಪ್ರಜಾಪ್ರಭುತ್ವ ಎಂದು ಕರೆದುಕೊಳ್ಳುವ ಅಮೇರಿಕದ ಪರಿಸ್ಥಿತಿ. ಪ್ರತಿ ನಾಲ್ಕು ವರ್ಷಗಳಿಗೊಮ್ಮೆ ನಡೆಯುತ್ತಿರುವ ಅಮೇರಿಕ ಅಧ್ಯಕ್ಷೀಯ ಚುನಾವಣೆಗಳಲ್ಲಿ ಮತದಾನ ಮಾಡುವವರ ಸಂಖ್ಯೆ ವರ್ಷದಿಂದ ವರ್ಷಕ್ಕೆ ಕಡಿಮೆಯಾಗುತ್ತಿದ್ದು ಶೇಕಡ ೪೭ಕ್ಕೆ ಇಳಿದಿದೆ. ಈ ವರ್ಷ ನವೆಂಬರ್‌ನಲ್ಲಿ ಜರುಗುವ ಚುನಾವಣೆಗಳಲ್ಲಿ ಇನ್ನೂ ಕಡಿಮೆಯಾಗುವ ನಿರೀಕ್ಷೆ ಇದೆ. ಪ್ರಪಂಚದ ಅತ್ಯಂತ ಬಲಾಢ್ಯ, ಶ್ರೀಮಂತ ರಾಷ್ಟ್ರ ಅಮೇರಿಕದಲ್ಲಿ ಚುನಾವಣೆಯ ವೆಚ್ಚವೂ ಕೂಡ ದುಬಾರಿ. ಈ ವರ್ಷ ರಾಜಕೀಯ ಪಕ್ಷಗಳು ಸುಮಾರು ಆರು ಬಿಲಿಯನ್ ಡಾಲರುಗಳನ್ನು ಖರ್ಚುಮಾಡಲಿವೆ ಎಂದು ಅಂದಾಜು ಮಾಡಲಾಗಿದೆ. ಹಿಂದೆಲ್ಲ ಅಮೇರಿಕದ ಅಧ್ಯಕ್ಷೀಯ ಚುನಾವಣೆಗಳು ಭಾರೀ ಕುತೂಹಲ ಕೆರಳಿಸುತ್ತಿದ್ದುವು. ಕಳೆದ ಚುನಾವಣೆಗಳಲ್ಲಿ ಮೊದಲ ಬಾರಿಗೆ ಆಫ್ರಿಕನ್ ಅಮೇರಿಕನ್ ವ್ಯಕ್ತಿಯೊಬ್ಬ ಅಭ್ಯರ್ಥಿಯಾಗಿದ್ದುದರಿಂದ ಆಸಕ್ತಿ ಸ್ವಲ್ಪ ಹೆಚ್ಚಾಗಿತ್ತು. ಈ ಸಲದ ಚುನಾವಣೆಗಳು ಕಳೆಗುಂದಿವೆ.

ಕಳೆದ ಚುನಾವಣೆಗಳಲ್ಲಿ ಡೆಮಾಕ್ರಟಿಕ್ ಪಕ್ಷದ ಅಭ್ಯರ್ಥಿಯಾಗಿ ಬರಾಕ್ ಒಬಾಮಾ ಅಧ್ಯಕ್ಷ ಪದವಿಗೇರಿದಾಗ ಹಲವು ನಿರೀಕ್ಷೆಗಳಿದ್ದುವು. ರಿಪಬ್ಲಿಕನ್ ಜಾರ್ಜ್ ಬುಷ್ ದುರಾಕ್ರಮಣಕಾರಿ ನೀತಿ ಅಂತ್ಯಗೊಂಡು, ಆಂತರಿಕವಾಗಿ ಸುಧಾರಣೆಗಳಾಗುವ, ಆರ್ಥಿಕ ಸುಭದ್ರತೆ ಆಗುವುದೆಂಬ ಭರವಸೆ ಮೂಡಿತ್ತು. ಒಬಾಮಾ ಕೂಡ ಅಂಥ ಭರವಸೆಗಳನ್ನು ನೀಡಿದ್ದರು ಚುನಾವಣಾ ಪ್ರಚಾರದ ಸಮಯದಲ್ಲಿ. ಆದರೆ ದಿನಕಳೆದಂತೆ ರಿಪಬ್ಲಿಕನ್ನರ ನೀತಿಗಳಿಗೂ ಡೆಮಾಕ್ರಾಟರ ನೀತಿಗೂ ಹೆಚ್ಚು ವ್ಯತ್ಯಾಸವೇನಿಲ್ಲ ಎನ್ನುವುದು ಸ್ಪಷ್ಟವಾಯಿತು. ಅಫ್ಘಾನಿಸ್ತಾನ, ಇರಾಕ್‌ಗಳಲ್ಲಿ ಯಥಾಸ್ಥಿತಿ ಮುಂದುವರಿದುದರ ಜೊತೆಗೆ ಲಿಬಿಯಾದ ಆಂತರಿಕ ಪರಿಸ್ಥಿತಿಯನ್ನು ಬಳಸಿಕೊಂಡು ಹಸ್ತಕ್ಷೇಪ ಮಾಡಿದ್ದು ಒಬಾಮಾನ ದಾಖಲೆ. ಸಿರಿಯಾದ ಅಂತರ್ಯುದ್ಧದಲ್ಲಿ ಮಧ್ಯೆ ಪ್ರವೇಶಿಸಲು ಅಮೇರಿಕ ತುದಿಗಾಲಲ್ಲಿ ನಿಂತಿದೆ. ಹಾಗೆಯೇ ಇರಾನಿನ ವಿರುದ್ಧ ಕತ್ತಿಮಸೆತ ನಡೆಯುತ್ತಲೇ ಇದೆ. ಈ ವಿಷಯದಲ್ಲಿ ಬರಾಕ್ ಒಬಾಮಾ ಜಾರ್ಜ್ ಬುಷ್‌ಗಿಂತ ಒಂದು ಹೆಜ್ಜೆ ಮುಂದಿದ್ದಾರೆ ಎನ್ನಬೇಕು. ಬಹು ನಿರೀಕ್ಷಿತ ಸಾರ್ವಜನಿಕ ಆರೋಗ್ಯ ಸುಧಾರಣೆ, ವಿಮಾ ಸಂಸ್ಥೆಗಳ ನಿಯಂತ್ರಣ ಎಲ್ಲ ಹುಸಿಯಾಯಿತು. ಕಾರ್ಪೊರೇಟ್ ವಲಯದ ತೀವ್ರ ವಿರೋಧದ ಎದುರಿನಲ್ಲಿ ಕುಸಿಯುತ್ತಿರುವ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸಲು ಕ್ರಮಗಳನ್ನು ಕೈಗೊಳ್ಳುವುದರಲ್ಲಿ ಒಬಾಮಾ ವಿಫಲರಾಗಿದ್ದಾರೆ. ನಾಲ್ಕು ವರ್ಷಗಳ ಅವಧಿಯಲ್ಲಿ ಅಧ್ಯಕ್ಷ ಸ್ಥಾನ ಬದಲಾದರೂ ಮೂಲನೀತಿಗಳಲ್ಲಿ ಏನೂ ಬದಲಾವಣೆ ಆಗದು ಎಂಬುದು ರುಜುವಾತಾಗಿದೆ. ಹಾಗಾಗಿ ಒಬಾಮಾನೋ, ರೋಮ್ನಿಯೋ ಯಾರು ಬಂದರೂ ಒಂದೇ. ಇದರಿಂದಾಗಿಯೇ ಅಮೇರಿಕದ ನಾಗರಿಕರು ಚುನಾವಣೆಗಳಲ್ಲಿ ಆಸಕ್ತಿ ಕಳೆದುಕೊಂಡಿದ್ದಾರೆ.




ಆರ್ಥಿಕ ಹಿಂಜರಿತ, ಬೆಳೆಯುತ್ತಿರುವ ನಿರುದ್ಯೋಗ, ಹೆಚ್ಚುತ್ತಿರುವ ಸಾಲದ ಹೊರೆಯ ಹಿನ್ನೆಲೆಯಲ್ಲಿ ಈ ಬಾರಿ ಚುನಾವಣೆಗಳು ನಡೆಯುತ್ತಿವೆ. ಎರಡನೇ ಅವಧಿಗಾಗಿ ಡೆಮಾಕ್ರಟಿಕ್ ಪಕ್ಷದ ಅಭ್ಯರ್ಥಿಯಾಗಿ ಬರಾಕ್ ಒಬಾಮಾ, ಅವರಿಗೆ ಎದುರಾಗಿ ರಿಪಬ್ಲಿಕನ್ ಪಕ್ಷದ ಅಭ್ಯರ್ಥಿ ಮಿಟ್ ರೋಮ್ನಿ ಸ್ಪರ್ಧಿಗಳು. ಎರಡೂ ಪಕ್ಷಗಳ ಚುನಾವಣಾ ವೆಚ್ಚವನ್ನು ಭರಿಸುವವರು ಕೈಗಾರಿಕೋದ್ಯಮ ಸಂಸ್ಥೆಗಳು. ಯಾರೇ ಆರಿಸಿಬಂದರೂ ಸರಿ, ಲಾಭ ಅವುಗಳಿಗೆ. ಅಮೇರಿಕದ ಅಧ್ಯಕ್ಷೀಯ ಚುನಾವಣೆಗಳು ಅತ್ಯಂತ ಸಂಕೀರ್ಣವಾದುವು. ಅಮಿತವಾದ ಅಧಿಕಾರವನ್ನು ಹೊಂದಿರುವ ಅಮೇರಿಕದ ಅಧ್ಯಕ್ಷರ ಆಯ್ಕೆ ನೇರ ಮತದಾನದಿಂದ ಆದರೂ, ಅಂತಿಮವಾದ ಆಯ್ಕೆ ಅಸ್ತಿತ್ವಕ್ಕೆ ಬರುವ ಎಲೆಕ್ಟೊರಲ್ ಕಾಲೇಜಿನ ಮತಗಳಿಂದ. ಚುನಾವಣೆಗೆ ನಿಧಿಸಂಗ್ರಹಣೆಯೂ ಕೂಡ ವಿಚಿತ್ರ. ನೇರವಾಗಿ ಕಾರ್ಪೊರೇಟ್ ಸಂಸ್ಥೆಗಳು ನೀಡುವ ದೇಣಿಗೆ ಒಂದು ಕಡೆಯಾದರೆ, ಇದು ಒಟ್ಟು ವೆಚ್ಚದ ಶೇಕಡ ೭೭ರಷ್ಟಾಗುತ್ತದೆ, ಉಳಿದದ್ದು 'ಸಾರ್ವಜನಿಕ'ರಿಂದ ವಸೂಲಿಯಾಗುತ್ತದೆ. ಇದರಲ್ಲೂ ಹೆಚ್ಚಿನ ಪಾಲು ಶ್ರೀಮಂತರಿಂದ ಬರುವುದೇ ಆಗಿರುತ್ತದೆ. ಅಮೇರಿಕದ ಪ್ರತಿಷ್ಠಿತ ಹೋಟೆಲುಗಳಲ್ಲಿ ನಿಧಿಸಂಗ್ರಹಣೆಗಾಗಿ ಔತಣಕೂಟಗಳನ್ನು ಏರ್ಪಡಿಸಲಾಗುತ್ತದೆ. ದುಬಾರಿಯಾದ ಬೆಲೆ ತೆತ್ತು ಅಮೇರಿಕನ್ನರು ಇದರಲ್ಲಿ ಭಾಗವಹಿಸುತ್ತಾರೆ: ಈ ಭೋಜನ ಕೂಟಗಳಲ್ಲಿ ಸಂಬಂಧಪಟ್ಟ ಪಕ್ಷದ ಅಭ್ಯರ್ಥಿ ಭಾಗವಹಿಸುತ್ತಾರೆ. ಇದೊಂದು ವಿಧಾನ. ಇತ್ತೀಚೆಗೆ ರಿಪಬ್ಲಿಕನ್ ಪಕ್ಷದ ಅಭ್ಯರ್ಥಿ ರೋಮ್ನಿ ಫ್ಲಾರಿಡಾಗೆ ಚುನಾವಣಾ ಪ್ರಚಾರಕ್ಕಾಗಿ ಹೋಗಿದ್ದಾಗ ಅಲ್ಲಿನ ಹೋಟೆಲೊಂದರಲ್ಲಿ ಭೋಜನಕೂಟ ಏರ್ಪಡಿಸಲಾಗಿತ್ತು ಚುನಾವಣಾನಿಧಿ ಸಂಗ್ರಹಕ್ಕೆ. ಊಟಕ್ಕೆ ಎಷ್ಟು ಗೊತ್ತೆ? ಒಂದು ಪ್ಲೇಟಿಗೆ ೫೦ ಸಾವಿರ ಡಾಲರುಗಳು! ಇಷ್ಟು ದುಬಾರಿಯಾದ ಬೆಲೆ ತೆತ್ತು ಬರುವವರು ಸಾಮಾನ್ಯ ಜನರಂತೂ ಅಲ್ಲ. ಕಂಪೆನಿಗಳ ಶ್ರೀಮಂತರಿಗೆ ಮಾತ್ರ ಅದು ಸಾಧ್ಯ. ಈ ಔತಣಕೂಟವನ್ನು ಏರ್ಪಡಿಸಿದ್ದುದು ಕೂಡ ಒಂದು ಉದ್ಯಮ ಸಂಸ್ಥೆ. ಅದು ಆಗಲೇ ರೋಮ್ನಿ ಚುನಾವಣಾ ನಿಧಿಗೆ ೩,೧೨,೬೦೦ ಡಾಲರುಗಳನ್ನು ನೀಡಿತ್ತು. ಇದೂ ಕೂಡ ಒಂದು ರೀತಿಯ ಬಂಡವಾಳ ಹೂಡಿಕೆಯೆ. ಏಕೆಂದರೆ ಅಧಿಕಾರಕ್ಕೆ ಬರುವವರಿಂದ ತೆರಿಗೆ ರಿಯಾಯಿತಿ ಇದ್ದೇ ಇರುತ್ತದೆ. ಉದಾಹರಣೆಗೆ, ೧೯೬೩ರಲ್ಲಿ ಆದಾಯ ತೆರಿಗೆಯಿಂದ ಅಮೇರಿಕದ ಫೆಡರಲ್ ಸರಕಾರಕ್ಕೆ ವರಮಾನ ಶೇಕಡ ೯೧ರಷ್ಟಿತ್ತು. ಅದು ಈಗ ಶೇಕಡ ೩೫ಕ್ಕೆ ಇಳಿದಿದೆ. ಉದ್ಯಮಪತಿಗಳಿಗೆ ತೋರಿದ ತೆರಿಗೆ ರಿಯಾಯ್ತಿಗಳೇ ಇದಕ್ಕೆ ಕಾರಣ. ಜನಸಾಮಾನ್ಯರ ಮೇಲೆ ಹೊರಿಸಿರುವ ತೆರಿಗೆ ಪ್ರಮಾಣ ಮಾತ್ರ ಕಡಿಮೆಯಾಗಿಲ್ಲ. ಅದು ಈಗಲೂ ಶೇಕಡ ೩೫ರಷ್ಟೇ ಇದೆ. ೨೦೦೦ದ ವರ್ಷದಲ್ಲಿ ಜಾರ್ಜ್ ಬುಷ್ ಜಾರಿಗೆ ತಂದ ತೆರಿಗೆ ಕಡಿತದ ಸೌಲಭ್ಯ ಪ್ರಯೋಜನವಾದದ್ದು ಶೇಕಡ ೧೦ರಷ್ಟು ಭಾರಿ ಉದ್ಯಮಿಗಳಿಗೆ ಮಾತ್ರ. ಅಂದರೆ ಅಮೇರಿಕದ ಎರಡೂ ಪಕ್ಷಗಳ ಪೋಷಕರು ಅಮೇರಿಕದ ಉದ್ಯಮಿಗಳೆ. ಇದು ಅಮೇರಿಕಾಗಷ್ಟೇ ಸೀಮಿತವಲ್ಲ, ಬಂಡವಾಳಶಾಹಿ ವ್ಯವಸ್ಥೆಯ ಎಲ್ಲ ದೇಶಗಳಲ್ಲೂ ಇದೇ ಪರಿಸ್ಥಿತಿ. ನಮ್ಮ ದೇಶದಲ್ಲೂ ಈಗ ಎರಡು ಪಾಳೆಯ ಸೃಷ್ಟಿಯಾಗಿವೆ. ಒಂದು ಹಿಂದುತ್ವ ಪರ ಇರುವ ಎನ್‌ಡಿಎ, ಇನ್ನೊಂದು ಜಾತ್ಯತೀತ ಎಂದು ಕರೆದುಕೊಳ್ಳುವ ಯುಪಿಎ. ಈ ಎರಡೂ ಗುಂಪುಗಳ ನೀತಿಗಳಲ್ಲಿ ಅಂಥ ವ್ಯತ್ಯಾಸವೇನಿಲ್ಲ. ಜನಸಾಮಾನ್ಯರಿಗೆ ಆಯ್ಕೆ ಸೀಮಿತವಾದಾಗ ಮತಗಟ್ಟೆಗೆ ಹೋಗಲು ಅನಾದರಣೆ. ಅಮೇರಿಕದಲ್ಲಿ ಆಗುತ್ತಿರುವುದೂ ಅದೇ.

**ಸೀಯಾರ್ಕೆ**

## ಅಫ್ಘಾನಿಸ್ತಾನ ಇನ್ನೂ ಮುಗಿಯದ ದುರಾಕ್ರಮಣ

ಅಫ್ಘಾನಿಸ್ತಾನವನ್ನು ಅಮೆರಿಕ ಆಕ್ರಮಿಸಿಕೊಂಡು ಹತ್ತು ವರ್ಷಗಳ ಮೇಲಾಯಿತು. ಮೂವತ್ತು ವರ್ಷಗಳ ಹಿಂದೆ ಅಂತರ್ಯುದ್ಧ, ಸೋವಿಯೆತ್ ಒಕ್ಕೂಟದ ಹಸ್ತಕ್ಷೇಪ, ಇಸ್ಲಾಮಿಕ್ ಉಗ್ರಗಾಮಿ ತಾಲಿಬಾನ್‌ಗಳ ಉಪಟಳಗಳನ್ನು ಅನುಭವಿಸಿದ ದೇಶ. ಇನ್ನೂ ಹಿಂದೆ ನೋಡಿದರೆ ಸುಮಾರು ಅರ್ಧ ಶತಮಾನದಿಂದ ಅದು ಅತಂತ್ರ ಸ್ಥಿತಿಯಲ್ಲೇ ಇದೆ. ೧೯೭೮ರಿಂದ ೨೦೧೧ರ ಅವಧಿಯಲ್ಲಿ ಹತ್ತು ಲಕ್ಷಕ್ಕೂ ಹೆಚ್ಚು ಮಂದಿ ಹತರಾಗಿದ್ದಾರೆ ಮತ್ತು ಹದಿಮೂರು ಲಕ್ಷ ಮಂದಿ ವಿಕಲಾಂಗರಾಗಿದ್ದಾರೆ ಎಂದು ಅಂದಾಜು ಮಾಡಲಾಗಿದೆ ಎಂದು ಇತ್ತೀಚಿನ ವರದಿಯೊಂದು ತಿಳಿಸಿದೆ. ಈ ವರದಿಯನ್ನು ತಯಾರಿಸಿದ್ದು ಅಫ್ಘಾನಿಸ್ತಾನದ ಸ್ವತಂತ್ರ ಮಾನವ ಹಕ್ಕುಗಳ ಆಯೋಗ. ಕಾಬೂಲಿನಲ್ಲಿರುವ ಅಮೆರಿಕದ ರಾಯಭಾರಿ ಕಚೇರಿಯು ಆಯೋಗದ ವರದಿಯನ್ನು ತಡೆಹಿಡಿಯಲು ಪ್ರಯತ್ನಿಸಿತ್ತು. ಹಳೆಯದನ್ನು ಕೆದಕುವ ಅಗತ್ಯವಿಲ್ಲ ಎನ್ನುವುದೇ ಅದರ ಮುಖ್ಯ ಆಕ್ಷೇಪ. ಅಫ್ಘಾನಿಸ್ತಾನದ ಅಂತಃಕಲಹದಲ್ಲಿ ಅಮೆರಿಕ ಒಂದಲ್ಲ ಒಂದು ರೀತಿಯಲ್ಲಿ ಭಾಗಿಯಾಗಿದೆ. ಈಗ ಒಂದು ದಶಕಕ್ಕೂ ಹೆಚ್ಚು ಕಾಲದಿಂದ ದೇಶ ಸಂಪೂರ್ಣವಾಗಿ ಅಮೆರಿಕದ ಆಕ್ರಮಣದಲ್ಲಿದೆ. ಸುಮಾರು ೪೦,೦೦೦ ಅಮೆರಿಕನ್ ಯೋಧರು ಮತ್ತು ನ್ಯಾಟೋ ಪಡೆಗಳು ಅಫ್ಘಾನಿಸ್ತಾನದಲ್ಲಿ ನೆಲೆಯೂರಿವೆ. ಅಧ್ಯಕ್ಷ ಬರಾಕ್ ಒಬಾಮಾ ೨೦೧೪ರಲ್ಲಿ ಅಮೆರಿಕ ತನ್ನ ಎಲ್ಲ ಸೇನೆಯನ್ನು ಹಿಂದಕ್ಕೆ ಕರೆಸಿಕೊಳ್ಳುವುದಾಗಿ ಹೇಳಿದ್ದಾರೆ. ಆ ದಿನ ಬರುವುದನ್ನು ಎದುರು ನೋಡಬೇಕು.

ಅಫ್ಘಾನಿಸ್ತಾನದಲ್ಲಿ ಪರಿಸ್ಥಿತಿ ಈಗ ಹೇಗಿದೆ ಎಂದರೆ ಅಮೆರಿಕದಿಂದ ಸ್ಥಾಪಿತವಾಗಿರುವ ಅಮೀರ್ ಕರ್ಜಾಯ್ ಸರಕಾರ ರಾಜಧಾನಿ ಕಾಬೂಲಿನಿಂದ ಹೊರಗೆ ಕಾಲಿರಿಸುವಂತೆಯೇ ಇಲ್ಲ. ಈ ಕೈಗೊಂಬೆ ಸರಕಾರಕ್ಕೆ ಅಫ್ಘಾನಿಸ್ತಾನದ ಪ್ರಜೆಗಳ ಬೆಂಬಲವಂತೂ ಇಲ್ಲ. ಇನ್ನೂ ಅಮೆರಿಕದ ಯಜಮಾನರುಗಳಿಗೆ ಸರಕಾರದಲ್ಲಿ ನಂಬಿಕೆ ಇಲ್ಲ. ಇದರ ಮೇಲೆ ಇಸ್ಲಾಮಿಕ್ ಉಗ್ರಗಾಮಿ ತಾಲಿಬಾನ್‌ಗಳ ದಾಳಿ ದಿನೇ ದಿನೇ ಪ್ರಬಲವಾಗುತ್ತಿದೆ. ಅಮೆರಿಕ ಈಗ ಸುಮಾರು ೩,೦೦,೦೦೦ ಅಫ್ಘನ್ ಯೋಧರಿಗೆ ತರಬೇತಿ ನೀಡಿದೆ, ಶಸ್ತ್ರಾಸ್ತ್ರಗಳನ್ನು ಒದಗಿಸಿದೆ. ಈಗ ಆ ಯೋಧರೇ ವಿದೇಶೀ ಸೈನ್ಯದ ವಿರುದ್ಧ ತಿರುಗಿಬಿದ್ದಿದ್ದಾರೆ. ಇದರಿಂದ ಆತಂಕಗೊಂಡ ಅಮೆರಿಕ ತರಬೇತಿ ನೀಡಿಕೆಯನ್ನು ಈಗ ಸ್ಥಗಿತಗೊಳಿಸಿದೆ. ಇತ್ತೀಚೆಗೆ ಐದು ಮಂದಿ ಅಮೆರಿಕನ್ ಸೇನಾಧಿಕಾರಿಗಳು ಕೊಲೆಯಾದರು. ಈ ವರ್ಷದ (೨೦೧೨) ಮೊದಲ ಆರು ತಿಂಗಳಲ್ಲಿ ಸಂಭವಿಸಿದ ೨೧ ಪ್ರಕರಣಗಳಲ್ಲಿ ೩೦ ಮಂದಿ ಅಮೆರಿಕನ್ ಮತ್ತು ಯೂರೋಪಿಯನ್ ಯೋಧರು ಹತರಾಗಿದ್ದಾರೆ. ೨೦೦೧ರಲ್ಲಿ ಅಮೆರಿಕ ಮತ್ತು ನ್ಯಾಟೋ ಪಡೆಗಳ ಪ್ರವೇಶದ ನಂತರ ಇದುವರೆಗೆ ಸುಮಾರು ೨೦೦೦ ಮಂದಿ ಅಮೆರಿಕನ್ ಯೋಧರೂ, ೧೦೦೦ ಮಂದಿ ಯೂರೋಪಿಯನ್ ಯೋಧರೂ ಮರಣಹೊಂದಿದ್ದಾರೆ. ಅಮಾಯಕ ಅಫ್ಘನ್ ನಾಗರಿಕರು ಈ ಅತಂತ್ರ ಸ್ಥಿತಿಯಲ್ಲಿ ಪ್ರತಿನಿತ್ಯ ಅಸುನೀಗುತ್ತಿದ್ದಾರೆ. ಇದಕ್ಕೆ ಕೊನೆಯೇ ಇಲ್ಲವೇನೊ ಎನಿಸುತ್ತಿದೆ.

ಸೀಯಾರ್ಕೆ
'ಚೌಬೀನ', ನಂ. ೮೪೪, ೬ನೇ ಕ್ರಾಸ್ ಬನಶಂಕರಿ ३ನೇ ಹಂತ, ३ನೇ ಬ್ಲಾಕ್ ಕತ್ರಿಗುಪ್ಪೆ
ಬೆಂಗಳೂರು-೫೬೦ ೦೮೫

# ಪ್ರತಿಭಟನೆಯ ಪಾಠಗಳು



೧

ದಳದಳದಳ ತೊತ್ತಳದುಳಿವ ಬಿಸಿಲು
ಮೈ ಮೈಯೆಲ್ಲ ಬಿರಿತು ನಿಂತಿದೆ ಮಾವು
ಯಾವ ಜೀವಸೆಲೆ ಮೀಟು ?
ನವಿರು ಒಗರು ಅಂಟು ಜಿಗುಟಿನ
ನೂರು ನೂರು ಹೂ ಹೆತ್ತು ಬಿಮ್ಮನಸಿಯಾಗಿದೆ

೨

ಬಂಡೆ ಬಿಸಿಲ ಕಾವಲಿ
ಅದರ ನೆರಳೆಂಬೋ ಧಗೆಯಲ್ಲಿ
ಎರಡೇ ಎರಡು ಎಸಳು ಬಿಟ್ಟು ಕಣ್ಣೆತ್ತುತ್ತಿದೆ
ಎಂಥದೋ ಹೇಲುಗಲಸಿ ಬಿದ್ದ ಬೀಜ
ಜೀವಯಾನದ ಆದಿಮಾಯೆಯ ರೂಹು

೩

ತಬ್ಬಿದ್ದು ಬಲೆ
ನೀರಿಂದೆತ್ತುವ ಹೊತ್ತು ಮರಿಮೀನು ಮಿಡುಕಿತು
ಆ ಬಾಗು ಆ ಬಳುಕು ಆ ಮಣಿತ
ಕಡೆಯ ಹೆಜ್ಜೆಗೆ ಮಾತ್ರ
ಸೂರ್ಯ ಲಾಂದ್ರಗಂಬದ ಹಾಗೆ
ಹಿಣಜು ಹಿಣಜನ್ನೂ ವಜ್ರದಂತೆ ಬೆಳಗಿಸಿದ
ಬಲೆಗಾರನ ಕಣ್ಣು ಸೌಂದರ್ಯಕೆ ನಮಿಸಿತು
ಆರೆ, ಒಂದು ಕ್ಷಣವಾದರೂ ಸರಿ
ಸಂಬಂಧವಿಲ್ಲಿ ಬದಲಾಯಿತು

೪

ಹಾಳು ಮುಳ್ಳು ಕಂಟಿ ಪೊದೆ
ಮಧ್ಯ ಹೇಗೋ ಉಳಿದಿದೆ ಜೇಟಿಗೆ
ಈಗ, ಅದರ ನವಿಲ ರಂಗಿನ ಹೂಗಳನ್ನ
ಮುಳ್ಳುಪೊದೆ ಕಾಯುತ್ತಿದೆ

೫

ಕಡಿದು ಉರುಳಿಸಿ ಕಚಕಚ ಕೊಚ್ಚಿದ ಮರದ ತುಂಡು
ಹಸಿರ ಚಿಮ್ಮಿ ಚಿಗುರಿ ತೊನೆಯುತ್ತಿದೆ
ಬಿದ್ದ ಕೊರಡಿನಂಥ ಮೈ ಗೆದ್ದಲಿಗೆ ಮುದ್ದೆಯಾಗುವಾಗೆಲ್ಲ
ಆ ಎಳಸು ಎಲೆ ಕನಸಾಗಿ ಕಾಡುತ್ತಿದೆ
ಮನಸ್ಸು ಪಲಕುತ್ತಿದೆ

೬

ನೀರವ ರಾತ್ರಿ, ನಾಯಿ ಊಳಿಡುತ್ತಿದೆ
ಕೊರಳ ನರನರವೂ ಉಬ್ಬಿ
ತಿಳಿಯುತ್ತಿದೆ ನನಗೂ
ಬಟ್ಟಲು ನೀರು, ರೊಟ್ಟಿ, ಗೋಣಿತಟ್ಟು
ಇಷ್ಟಕ್ಕೇ ಬಿಮ್ಮಗಿರಬೇಕೆಂದರೆ...

ಡಾ॥ ವಿನಯಾ
'ನೆಮ್ಮದಿ', ನಂ. ೧೨೪, ಸಿ.ಐ.ಟಿ.ಬಿ. ಕಾಲೋನಿ, ಶ್ರೀನಗರ
ಧಾರವಾಡ - ೫೮೦ ೦೦३

ಎಸ್. ಸುರೇಂದ್ರ

# ನಮ್ಮನ್ನಗಲಿದ ವಿನಯಶೀಲ ನಟ ಎ. ಕೆ. ಹಂಗಲ್

ಹಲವಾರು ಹಿರಿಯ ತಲೆಮಾರಿನ ಸಿನಿಮಾಸಕ್ತರಿಗೆ ಹಿಂದಿ ಸಿನಿಮಾದ ಅತಿ ಹಿರಿಯ ನಟ ಮತ್ತು ಸಹಜ ನಟನೆಗೆ ಹೆಸರಾಗಿದ್ದ ಅವತಾರ್ ಕಿಷನ್ ಹಂಗಲ್ ಇತ್ತೀಚೆಗೆ ನಿಧನರಾದುದು ಆಘಾತಕಾರಿ ಸಂಗತಿಯಾಗಿದೆ. ಹಿಂದಿಚಿತ್ರರಂಗದಲ್ಲಿ ಪೋಷಕ ನಟನೇ ಆಗಿದ್ದರೂ ಹಂಗಲ್ ತಮ್ಮದೇ ಛಾಪು ಮೂಡಿಸಿದ್ದರು. ಅವರು ನಟಿಸುತ್ತಿದ್ದ ಪಾತ್ರಗಳು ಪ್ರೇಕ್ಷಕರ ನೆನಪಿನಾಳದಲ್ಲಿ ಉಳಿದು ಅವರ ಚಿಂತನೆಯನ್ನು ಸದಾ ಆವರಿಸಿಕೊಂಡು ಬಿಡುತ್ತಿದ್ದವು ಎಂದರೆ ಉತ್ಪ್ರೇಕ್ಷೆಯಲ್ಲ. ಭಾರತೀಯ ಸಿನಿಮಾ ಕ್ಷೇತ್ರದಲ್ಲಿ ಮೈಲುಗಲ್ಲು ಚಿತ್ರಗಳೆಂದು ಖ್ಯಾತಿ ಪಡೆದಿರುವ ಶೋಲೆ, ನಮಕ್ ಹರಾಮ್ ಮತ್ತು ಲಗಾನ್ ನಂತಹ ಚಿತ್ರಗಳೇ ಆಗಲಿ ಅಥವಾ ಆಫ್‌ಬೀಟ್ ಚಿತ್ರಗಳಾದ ಶಾಗಿರ್ದ್ ಮತ್ತು ಶರಾರತ್ ಆಗಲಿ ರಹೀಮ್ ಚಾಚಾ, ಮಾಸ್ತರ್‌ಜಿ ಅಥವಾ ಇಮಾಮ್ ಸಾಹಬ್‌ನಂತಹ ಪಾತ್ರಗಳಲ್ಲಿ ಹಂಗಲ್ ಮೂಡಿಸುತ್ತಿದ್ದ ಛಾಪು ತನ್ನ ವಿಶಿಷ್ಟತೆಯಿಂದಾಗಿ ಬಹುಕಾಲ ಉಳಿಯುವಂತಹದು. ಪ್ರತಿಯೊಂದು ಪಾತ್ರವೂ ಪ್ರೀತಿ, ಶ್ರದ್ಧೆ, ವಿನಯಶೀಲತೆ, ಘನತೆ ಮುಂತಾದ ಮಾನವೀಯ ಮೌಲ್ಯಗಳನ್ನು ಪ್ರತಿಪಾದಿಸುವಂತಹದು. ಒಂದರ್ಥದಲ್ಲಿ ಅಂತಹ ಹಲವಾರು ಪಾತ್ರಗಳು ಹಂಗಲ್ ತಮ್ಮ ನಿಜಜೀವನದಲ್ಲಿ ಅನುಭವಿಸುತ್ತಿದ್ದ ಏಳುಬೀಳುಗಳಿಗೆ ಕನ್ನಡಿ ಹಿಡಿಯುವಂತಿದ್ದವು. ಬಹುಶಃ ಅವರ ನಟನೆ ಅದೆಷ್ಟು ಸಹಜವಾಗಿದೆ ಎನ್ನಿಸುತ್ತಿದ್ದುದು ಆ ಕಾರಣಕ್ಕೋ ಏನೋ. ವೈಯಕ್ತಿಕ ಜೀವನದಲ್ಲಿ ಹಂಗಲ್ ಎಂದಿಗೂ ಸುಖ ಕಂಡವರಲ್ಲ. ಅನಾರೋಗ್ಯ ಅವರನ್ನು ಸದಾ ಪೀಡಿಸುತ್ತಿತ್ತು. ಅಂತೆಯೇ, ಹಣದ ಕೊರತೆಯೂ ಕೂಡ. ಹಣದ ತೀವ್ರ ಮುಗ್ಗಟ್ಟಿನಲ್ಲಿದ್ದ ಹಂಗಲ್‌ರ ಮಗ ವಿಜಯ್ ಮಾಡಿಕೊಂಡ ಮನವಿಗೆ ಪ್ರತಿಕ್ರಿಯಿಸುತ್ತ ಹಂಗಲ್‌ರ ಒಟ್ಟಿಗೆ ಬಾವರ್ಚಿ, ಗುಡ್ಡಿ ಮತ್ತು ಶೋಲೆ ಚಿತ್ರಗಳಲ್ಲಿ ನಟಿಸಿದ್ದ ಜಯಾ ಬಚ್ಚನ್ ಅವರ ಚಿಕಿತ್ಸೆಯ ವೆಚ್ಚವನ್ನು ಭರಿಸಲು ಮುಂದೆ ಬರುತ್ತಾರೆ. ಹಂಗಲ್ ರಾಜೇಶ್ ಖನ್ನಾ ಹಾಗೂ ಅಮಿತಾಭ್ ಮತ್ತು ಜಯಾ ಬಚ್ಚನ್ ಅವರೊಂದಿಗೂ ಹಲವಾರು ಚಿತ್ರಗಳಲ್ಲಿ ನಟಿಸಿದ್ದರು. ಒಮ್ಮೆ ಪತ್ರಕರ್ತನೊಬ್ಬ ಅವರು ನಟಿಸಿದ್ದ ಬಗೆ ಬಗೆಯ ಚಿತ್ರಗಳ ಬಗ್ಗೆ ನೆನಪಿಸಿದಾಗ, ಹಂಗಲ್ ಅಷ್ಟೇನೂ ಆಸಕ್ತಿ ತೋರಿಸದೆ, ''ಹಾಂ... ಹಾಂ... ಸುಮಾರು ಪಾತ್ರಗಳಲ್ಲಿ ನಟಿಸಿದ್ದೀನಪ್ಪಾ, ನಿಜ. (ಅವರು ನಟಿಸಿದ ಚಿತ್ರಗಳ ಒಟ್ಟು ಸಂಖ್ಯೆ ೨೨೫) ಆದರೆ ನಾನು ನೋಡಿರೋದು ೫೦ ಮಾತ್ರ'' ಎಂದಿದ್ದರಂತೆ. ಆದರೆ 'ಶೋಲೆ' ಚಿತ್ರದ ಬಗ್ಗೆ ವಿಶೇಷವಾಗಿ ನೆನಪಿಸಿಕೊಳ್ಳುತ್ತ, ''ಆ ಚಿತ್ರದ ನನ್ನ ಪಾತ್ರದ ಬಗ್ಗೆ ದೀರ್ಘವಾದ ಸಂಶೋಧನೆ ಮಾಡಿಬಿಟ್ಟಿದ್ದೆ. ಇಸ್ಲಾಮಿನ ಸ್ತೋತ್ರಗಳನ್ನು ಕಲಿತೆ. ಅಷ್ಟೇ ಅಲ್ಲ, ಆ ಚಿತ್ರದಲ್ಲಿ ಇಮಾಮನ ಪಾತ್ರಕ್ಕೆ ತಕ್ಕಂತೆ ಇರಬೇಕಾದ ಹಾವಭಾವಗಳು, ಕೈ, ಕಣ್ಣು, ಕಾಲುಗಳ ಚಲನವಲನಗಳನ್ನು ಯಾವುದೇ ಕುಂದು ಕೊರತೆಗಳಿಲ್ಲದಂತೆ ಅನುಕರಿಸಲು ಪಟ್ಟ ಪಾಡು ಅದೆಷ್ಟು!'' ಎಂದು ಉದ್ಗರಿಸಿದ್ದರಂತೆ.

ಹಂಗಲ್ ತಮ್ಮ ಸುದೀರ್ಘ ಪಯಣವನ್ನು ಆರಂಭಿಸಿದ್ದು ಈಗ ಪಾಕಿಸ್ತಾನದಲ್ಲಿರುವ ಪೇಷಾವರ್ ನಿಂದ. ಅಂದಿನ ದಿನಗಳಲ್ಲಿ ಪೇಷಾವರ್ ಹಿಂದು-ಮುಸ್ಲಿಂ-ಕೋಮುಸೌಹಾರ್ದತೆಗೆ ಹೆಸರಾಗಿದ್ದ ನಗರ. ಈತ ಜನಿಸಿದ್ದು ೧೯೧೭ ಪಾಕಿಸ್ತಾನದ ಸಿಯಾಲ್‌ಕೋಟ್‌ನಲ್ಲಿ. ಹಂಗಲ್‌ರ ನೆನಪಿನಾಳದಲ್ಲಿದ್ದ ಮರೆಯಲಾಗದ ಅನುಭವವೆಂದರೆ ಅದೊಂದು ದಿನ ಪಠಾನ್ ಕೃಷಿ ಕೂಲಿಕಾರರು ಸಂಘಟಿಸಿದ್ದ ಬೃಹತ್ ಮೋರ್ಚಾ. ಅವರೆಲ್ಲರೂ ಕೆಂಪು ಅಂಗಿಗಳನ್ನು ಧರಿಸಿದ್ದರು. ಬಹು ಎತ್ತರದ ಪಠಾನನೊಬ್ಬ ಆ ಮೋರ್ಚಾದ ನಾಯಕತ್ವ ವಹಿಸಿದ್ದನು. ಆತನೇ ಖಾನ್ ಅಬ್ದುಲ್ ಗಫ಼ಾರ್ ಖಾನ್. ಆತನ ಅನುಯಾಯಿಗಳ ಹೆಸರು 'ಖುದಾಯ್ ಖಿದ್‌ಮತ್‌ಗಾರ್' (ದೇವರ ಸೇವಕರು). ಮಹಾತ್ಮ ಗಾಂಧಿಯವರ ಅಹಿಂಸಾ ತತ್ವದ ಪರಿಪಾಲಕರು. ಪಠಾನರು ಆಕ್ರಮಣಶೀಲರು. ಇತಿಹಾಸವೇ ಅದಕ್ಕೆ ಸಾಕ್ಷಿ. ಅಂತಹ ಜನರನ್ನು ಅಹಿಂಸಾ ಚಳುವಳಿಗೆ ಒಲವು ತೋರಿಸಲು ಕಾರಣರಾದ ಖಾನ್ ಅಬ್ದುಲ್ ಗಫ಼ಾರ್ ಖಾನ್ 'ಸರಹದ್ದಿನ ಗಾಂಧಿ' ಎಂದೇ ಖ್ಯಾತನಾಮರು.

ಅದೇ ವರ್ಷ ಹುತಾತ್ಮರಾದ ಭಗತ್ ಸಿಂಗ್, ರಾಜ್‌ಗುರು ಮತ್ತು ಸುಖ್‌ದೇವ್ ಅವರನ್ನು ಬಂಧಿಸಿ ಮರಣದಂಡನೆಗೆ ಗುರಿಪಡಿಸಲಾಗಿತ್ತು. ಅವರನ್ನು ಬಿಡುಗಡೆ ಮಾಡಬೇಕೆಂದು ಒತ್ತಾಯಿಸಿ ಲಕ್ಷಾಂತರ ಜನರು ವೈಸ್‌ರಾಯ್‌ಗೆ ಮನವಿ ಸಲ್ಲಿಸಿದ್ದ ದಿನಗಳು ಅವು. ಇದಾವುದನ್ನೂ ಲೆಕ್ಕಿಸದ ಬ್ರಿಟಿಷ್ ಸಾಮ್ರಾಜ್ಯಶಾಹಿಗಳು ಮೂವರೂ ಕ್ರಾಂತಿಕಾರಿಗಳನ್ನು ನೇಣುಗಂಬಕ್ಕೇರಿಸಿಯೇ ಬಿಟ್ಟರು. ಅವರ ಮೃತದೇಹಗಳನ್ನು ಜೈಲಿನ ಹಿಂದಿನ ಗೇಟಿನ ಮೂಲಕ ಲಾರಿಯೊಂದರಲ್ಲಿ ಪಂಜಾಬಿನ ದೂರದ ಹಳ್ಳಿಯೊಂದಕ್ಕೆ ಸಾಗಿಸಿ ಪೆಟ್ರೋಲ್ ಸುರಿದು ಸುಟ್ಟು ಹಾಕಿದರು.

ಮಾರ್ಚ್ ೨೩, ೧೯೩೧ರಂದು ಪೇಷಾವರ್‌ನ ಶಾಹಿಬಾಗ್‌ನಲ್ಲಿ ಈ ಮೂವರು ಹುತಾತ್ಮರಿಗೂ ಗೌರವ ಸೂಚಿಸಲು ಸಹಸ್ರಾರು ಜನರು ಸೇರಿದ್ದರು. ಅಂದಿನ ವಾತಾವರಣದ ಅನುಭವವನ್ನು ಹಂಗಲ್ ತಮ್ಮ ಕಡೆಯ ದಿನಗಳವರೆಗೂ ಮರೆಯಲಿಲ್ಲ.

ಇನ್ನೂ ಹುಡುಗನಾಗಿದ್ದಾಗ ಖ್ವಾನಿ ಬಜ಼ಾರ್‌ನಲ್ಲಾದ ಇನ್ನೊಂದು ಆಘಾತಕಾರಿ ಘಟನೆ ಹಂಗಲ್‌ರನ್ನು ತೀವ್ರ ತಲ್ಲಣಕ್ಕೀಡುಮಾಡಿತಂತೆ. ಕಾಬುಲಿ ಗೇಟ್ ಬಳಿ ಬಹಿರಂಗ ಸಭೆಯೊಂದು ಜರುಗುವುದಿತ್ತು. ನೂರಾರು ಶಾಲಾ ವಿದ್ಯಾರ್ಥಿಗಳು ಅಲ್ಲಿ ಜಮಾಯಿಸಿದ್ದರು. ಅದೊಂದು

**ಹಿಂದಿ ಚಿತ್ರರಂಗದ ಅಪರೂಪದ ಕಲಾವಿದ ಎ. ಕೆ. ಹಂಗಲ್. ಪೋಷಕ ಪಾತ್ರಗಳಲ್ಲಿಯೇ ಕಾಣಿಸಿಕೊಂಡರೂ ಪ್ರೇಕ್ಷಕರ ನೆನಪಿನಲ್ಲಿ ಉಳಿಯುತ್ತಿದ್ದ ಅಪ್ರತಿಮ ಕಲಾವಿದ. ನೂರಾರು ಚಿತ್ರಗಳಲ್ಲಿ ಪಾತ್ರ ವಹಿಸಿದ್ದರೂ ಸ್ವಂತಿಕೆಯನ್ನು ಉಳಿಸಿಕೊಂಡಿದ್ದ ಹಂಗಲ್ ಜನಪ್ರಿಯತೆ ಗಳಿಸಿದ್ದರು. ಪ್ರಗತಿಪರ ಚಿಂತಕರಾಗಿದ್ದ ಅವರು ಎಡಪಕ್ಷಗಳೊಂದಿಗೆ ನಿಕಟ ಸಂಪರ್ಕ ಹೊಂದಿದ್ದರು. ಇಂಡಿಯನ್ ಪೀಪಲ್ಸ್ ಥಿಯೇಟರ್ ಅಸೋಸಿಯೇಷನ್ (ಇಪ್ಟಾ)ದ ಕ್ರಿಯಾಶೀಲ ಕಾರ್ಯಕರ್ತರಾಗಿದ್ದರು. ಇತ್ತೀಚೆಗೆ ನಿಧನರಾದ ಹಂಗಲ್ ಅವರಿಗೆ 'ಹೊಸತು' ಗೌರವಪೂರ್ವಕ ನಮನ ಸಲ್ಲಿಸುತ್ತದೆ.**



ಬೃಹತ್ ಪ್ರತಿಭಟನಾ ಸಭೆ. 'ಸಾಮ್ರಾಜ್ಯಶಾಹಿಗೆ ಧಿಕ್ಕಾರ' ಎಂಬಂತಹ ಘೋಷಣೆಗಳು ಮೂಲೆಮೂಲೆಗಳಲ್ಲಿ ಮೊಳಗುತ್ತಿದ್ದವು. ಕಾಬುಲಿ ಗೇಟ್ ಮೈದಾನವನ್ನು ಪೊಲೀಸರು ಸುತ್ತುವರಿದರು. ಆ ಪ್ರದರ್ಶನವನ್ನು ಬಗ್ಗುಬಡೆಯಲು ಬ್ರಿಟಿಷ್ ಆಡಳಿತ ಎಲ್ಲ ಸಿದ್ಧತೆಗಳನ್ನೂ ನಡೆಸಿತ್ತು. ಶಸ್ತ್ರಾಸ್ತ್ರಗಳು, ಬಂದೂಕುಗಳನ್ನು ತುಂಬಿಕೊಂಡಿದ್ದ ಸೇನೆಯ ಲಾರಿಗಳು ಇಡೀ ಜನಸ್ತೋಮದತ್ತ ಧಾವಿಸಿ ಬಂದವು. ಎಲ್ಲೆಡೆ ಸಾವಿನ ಛಾಯೆ ಆವರಿಸಿಕೊಂಡಿದ್ದ ವಾತಾವರಣ. ಮುಂಚೂಣಿಯಲ್ಲಿ ಭಾರತೀಯ ಸೈನಿಕರನ್ನು ತುಂಬಿಕೊಂಡಿದ್ದ ಲಾರಿಗಳು. ನೆರೆದಿದ್ದ ಪ್ರತಿಭಟನಾಕಾರರ ಮೇಲೆ ಗುಂಡಿನ ಸುರಿಮಳೆಗೈಯಲು ಆಜ್ಞೆ ಮಾಡಿದ ಸೇನಾಪಡೆಯ ಕಪ್ತಾನ. ಯಾರೊಬ್ಬರೂ ಇದ್ದ ಜಾಗದಿಂದ ಕದಲಲಿಲ್ಲ, ಗುಂಡಿನ ದಾಳಿಯನ್ನು ಎದುರಿಸಲು ಸಿದ್ಧರಾಗಿ ನಿಂತಿದ್ದರು ಜನ. ಅವರ ದೇಶಪ್ರೇಮ ಆ ಮಟ್ಟದ್ದು! ನಿರಾಯುಧರಾದ ತಮ್ಮದೇ

# ಧಾರವಾಡಕ್ಕೂ ಬಂದಿದ್ದರು ಹಂಗಲ್ ಚಾಚಾ



ಅಬಿದ್‌ರಿಝ್ವಿ, ಎ. ಕೆ. ಹಂಗಲ್, ಡಾ|| ಸಿದ್ದನಗೌಡ ಪಾಟೀಲ

ದೇಶ ಕಂಡ ಮಹಾನ್ ಕಲಾವಿದರಲ್ಲೊಬ್ಬರಾದ ಎ. ಕೆ. ಹಂಗಲ್ ಧಾರವಾಡಕ್ಕೆ ಬಂದಿದ್ದರು. ೧೯೯೫ರ ಮೇ ತಿಂಗಳ ೨೭ರಿಂದ ೨೯ರವರೆಗೆ ಮೂರು ದಿನಗಳ ಕಾಲ ಧಾರವಾಡದಲ್ಲಿ ಭಾರತೀಯ ಜನಕಲಾ ಸಮಿತಿ (ಇಪ್ಟಾ)ದ ಸುವರ್ಣ ಮಹೋತ್ಸವ ಕಾರ್ಯಕ್ರಮವನ್ನು ಏರ್ಪಡಿಸಲಾಗಿತ್ತು. ಕಾರ್ಯಕ್ರಮದ ಉದ್ಘಾಟನೆಗಾಗಿ ಎ. ಕೆ. ಹಂಗಲ್‌ರನ್ನು ವಿನಂತಿಸಿಕೊಂಡಿದ್ದೆವು. ಅವರಿಗೆ ಆಗ ಅನಾರೋಗ್ಯವಿದ್ದರೂ ನಾವು ದೂರವಾಣಿಯಲ್ಲಿ ವಿನಂತಿಸಿಕೊಂಡಾಗ ಬರಲು ಒಪ್ಪಿದರು. ಮುಂಬೈಯಿಂದ ಮಿರಜ್‌ವರೆಗೆ ರೈಲಿನಲ್ಲಿ ಇನ್ನೊಬ್ಬ ಹಿರಿಯ ಕಲಾವಿದ ಅಬಿದ್ ರಿಝ್ವಿ ಜೊತೆ ಹಂಗಲ್ ಚಾಚಾ ಬಂದರು. ಒಂದು ಸಾಧಾರಣ ಕಾರು, ಮುಂದೆ ಒಂದು ಸೀಟು, ಹಿಂದೆ ಕ್ಯಾರಿಯರ್ ಇರುವ ಕಾರು ತೆಗೆದುಕೊಂಡು ಮಾನ್ಯ ಎಂ. ಬಿ. ದಿಲ್‌ಶಾದ್ ಅವರು ಕರೆಯಲು ಹೋಗಿದ್ದರು. ನಮ್ಮಲ್ಲಿ ಅವರನ್ನು ಕರೆತರಲು ಒಳ್ಳೆಯ ಕಾರು ಇರಲಿಲ್ಲ. ಬೆಳಗಿನ ಜಾವ ಬಂದ ಹಂಗಲ್ ರೈಲು ನಿಲ್ದಾಣದ ಮುಂದಿನ ಬೀದಿಯಲ್ಲಿಯೇ ನಿಂತು ಚಹಾ ಕುಡಿದು ಕಾರು ಹತ್ತಿದ್ದರು. ಧಾರವಾಡಕ್ಕೆ ಬರುವಷ್ಟರಲ್ಲಿ ಮಧ್ಯಾಹ್ನ ೨ ಗಂಟೆ ಆಗಿತ್ತು. ೪ ಗಂಟೆಗೆ ಸಾಂಸ್ಕೃತಿಕ ನಡಿಗೆ ಕಾರ್ಯಕ್ರಮ. ರಾಜ್ಯದ ಎಲ್ಲೆಡೆಯಿಂದ ಬಂದ ಸಾವಿರಾರು ಕಲಾವಿದರನ್ನು ಕಂಡ ಹಂಗಲ್ ಅವರು, ''ಚಲೋ ಝುಲುಸ್ ಮೆ ಜಾಯೇಂಗೆ'' ಎಂದರು. ನಾವು, ''ಬೇಗ ಸ್ನಾನ ಮಾಡಿ ಬಹಿರಂಗ ಸಭೆಗೆ ಬನ್ನಿ'' ಎಂದೆವು. ಅಜ್ಜ ಕೇಳಲಿಲ್ಲ, ಹೋದವರೆ ಮುಖ ತೊಳೆದುಕೊಂಡು ಬಂದರು. ಧಾರವಾಡದ ಬೀದಿಗಳಲ್ಲಿ ಮೆರವಣಿಗೆಯಲ್ಲಿ ನಡೆಯುತ್ತ ಕಲಾವಿದರನ್ನು ಪ್ರೋತ್ಸಾಹಿಸಿದರು. ಧಾರವಾಡದ ಜನರಿಗೆ ತಮ್ಮ ಪ್ರೀತಿಯ ನಟ ತಮ್ಮೂರ ಬೀದಿಯಲ್ಲಿ ನಡೆಯುತ್ತಿರುವುದನ್ನು ಅಚ್ಚರಿ, ಖುಷಿಯಿಂದ ನೋಡಿದರು, ಕೈಕುಲುಕಿದರು. ಕಾಯಿಪಲ್ಲೆ ಮಾರುವ ಹುಡುಗಿಯೊಬ್ಬಳು ಓಡಿಬಂದು ಅವರ ಮುಂದೆ ನಿಂತಳು. ಅವರ ಕೈ ಕುಲುಕುವ ಆಸೆ ಅವಳಿಗೆ. ಆದರೆ ಧೈರ್ಯ ಸಾಲದು. ಅದನ್ನು ನೋಡಿದ ಹಂಗಲ್ ಅಜ್ಜ, ''ಆ... ಬೇಟಾ'' ಎಂದು ಅವಳನ್ನು ಅಪ್ಪಿಕೊಂಡೇ ಬಿಟ್ಟರು. ಬೀದಿ ಅಂಗಡಿಯವನೊಬ್ಬ ಓಡಿಬಂದು ಅಜ್ಜನ ಕಾಲಿಗೆ ಬಿದ್ದ, ಅವನನ್ನು ಎಬ್ಬಿಸಿ ಅದೇ ಪ್ರೀತಿಯ ಅಪ್ಪುಗೆ ಕೊಟ್ಟರು. ಹೀಗೆ ದಾರಿಯುದ್ದಕ್ಕೂ ಹಂಗಲ್ ಅವರು ಜನರೊಂದಿಗೆ ಬೆರೆಯುತ್ತಲೇ ತಮ್ಮ ಪ್ರಯಾಣದ ದಣಿವು ಮರೆತರು. ತಮ್ಮ ಉದ್ಘಾಟನಾ ಭಾಷಣದಲ್ಲಿ, ''ಇಪ್ಟಾದ ಧ್ವಜವನ್ನು ಇಲ್ಲಿಯವರೆಗೆ ಹೊತ್ತಿದ್ದೇವೆ. ಈಗ ನಿಮ್ಮಂಥ ಸಾವಿರಾರು ಜನ ಯುವಕಲಾವಿದರು ಬಂದಿದ್ದೀರಿ, ನಾನು ನೆಮ್ಮದಿಯಿಂದ ಸಾಯುತ್ತೇನೆ'' ಎಂದು ತಮ್ಮದೇ ಶೈಲಿಯಲ್ಲಿ ಹೇಳಿದರು ಹಂಗಲ್ ಅಜ್ಜ. ಕಲಾವಿದರ ಜೊತೆ ಅವರು ಬೆರೆತ ರೀತಿ ಇನ್ನೂ ಕಣ್ಣ ಮುಂದಿದೆ. ಧಾರವಾಡದ ಯುವ ನೃತ್ಯ ಕಲಾವಿದ ಶರದ ಯಾದವಾಡ (ಈಗ ನಿಧನರಾಗಿದ್ದಾರೆ) ಸಂಯೋಜಿಸಿದ್ದ ಇಪ್ಟಾ ಸಂಕೇತದ ನೃತ್ಯ ಕಂಡು ಥ್ರಿಲ್ ಆದ ಹಂಗಲ್ ಅಜ್ಜ ಪುಟ್ಟ ಪುಟ್ಟ ಮಕ್ಕಳನ್ನೊಳಗೊಂಡ ನೃತ್ಯ ಕಲಾವಿದರ ಜೊತೆ ಅವರಿಗಿಂತಲೂ ಪುಟ್ಟ ಮಗುವಾಗಿ ಫೋಟೋ ತೆಗೆಸಿಕೊಂಡರು. ಅಬಿದ್ ರಿಝ್ವಿಯವರೇ ಬಂದು, ''ಹಂಗಲ್‌ಜೀ, ಆಪ್‌ಕಾ ತಬೀಯತ್ ಠೀಕ್ ನಹೀ ಹೈ, ದವಾ ಲೇನೇಕಾ ವಕ್ತ್ ಹೋಗಯಾ'' ಎಂದು ಒತ್ತಾಯಿಸಿದಾಗಲೇ ಹಂಗಲ್ ಅಜ್ಜ ಧಾರವಾಡದ ಕಲಾಭವನದಿಂದ ಹೊರಟಿದ್ದು.




ಧಾರವಾಡದ ಕಾರ್ಯಕ್ರಮದಲ್ಲಿ ಎ. ಕೆ. ಹಂಗಲ್, ಗಿರೀಶ್ ಕಾರ್ನಾಡ್, ಸಂಪಿಗೆ ತೋಂಟದಾರ್ಯ, ಅಬಿದ್‌ರಿಝ್ವಿ, ಎಂ. ಕೆ. ದೇಶಪಾಂಡೆ, ಡಾ|| ಸಿದ್ದನಗೌಡ ಪಾಟೀಲ

ಮಾರನೆ ದಿನ ಧಾರವಾಡದ ಆಕಾಶವಾಣಿಯಲ್ಲಿ ಹಂಗಲ್ ಅಜ್ಜನ ಸಂದರ್ಶನ. ಆಟೋರಿಕ್ಷಾದಲ್ಲಿಯೇ ಆಕಾಶವಾಣಿಗೆ ಹೋದೆವು. ಸಂದರ್ಶನ ಮುಗಿಸಿ ಹೊರಬಂದಾಗ ಮರಳಿ ಹೋಗಲು ಆಟೋ ಸಿಗಲಿಲ್ಲ. ಅಜ್ಜ ಹೇಳಿದರು, ''ಚಲೋ ಪೈದಲ್, ಸಿಟಿ ಬಸ್ ನಹೀ ಮಿಲೇಗಾ ?'' ಎಂದು ಹೊರಟೇ ಬಿಟ್ಟರು. ನನಗೆ ಸಂಕಟ, ಅಭಿಮಾನ ಒಮ್ಮೆಲೇ ಉಂಟಾಗಿ ಅವರ ಹಿಂದೆ ಹೊರಟೆ. ಕರ್ನಾಟಕ ಕಾಲೇಜ್‌ನ ಬಸ್‌ಸ್ಟಾಪ್‌ಗೆ ಹೋಗುವಷ್ಟರಲ್ಲಿ ಆಟೋ ಬಂದಿತು. ಅಜ್ಜ ಆಟೋ ಹತ್ತಿ ಕುಳಿತರೆ ಡ್ರೈವರ್ ಆಟೋ ಇಳಿದು ನಿಂತ. ಡ್ರೈವರ್‌ಗೆ ಹಂಗಲ್ ಅಜ್ಜ ತನ್ನ ಆಟೋದಲ್ಲಿ ಕುಳಿತದ್ದು ನಂಬಲಾಗುತ್ತಿಲ್ಲ! ಅಜ್ಜ ''ಚಲೋ ಭಾಯಿ'' ಎಂದು ಅದೇ ತಮ್ಮ ಶೈಲಿಯ ನಗು ಬೀರಿದರು. ಡ್ರೈವರ್ ಓಡಿಹೋಗಿ ಒಂದು ಎಳನೀರು ತಂದುಕೊಟ್ಟ. ೨೨೫ಕ್ಕೂ ಹೆಚ್ಚು ಸಿನಿಮಾಗಳಲ್ಲಿ ನಟಿಸಿ ತನ್ನ ಅಭಿನಯದಿಂದ ದೇಶದ ಜನಮನಗೆದ್ದ ಹಂಗಲ್ ಅಜ್ಜನ ಧ್ವನಿ, ರೂಪ, ನಗು, ಕರುಣಾಪೂರಿತ ದೃಷ್ಟಿ, ಮಾನವತಾಭಾವ ಎಲ್ಲವೂ ಬರೀ ತೆರೆಯಮೇಲೆ ಮಾತ್ರವಲ್ಲ, ವಾಸ್ತವ ಬದುಕಿನಲ್ಲೂ ತುಂಬಿದ್ದವು. ಧಾರವಾಡದಲ್ಲಿ ಎರಡು ದಿನ ನಮ್ಮೊಂದಿಗಿದ್ದ ಹಂಗಲ್ ಅಜ್ಜ, ''ಫಿರ್ ಮಿಲೇಂಗೆ ಭಾಯಿ, ಲಾಲ್ ಸಲಾಂ'' ಎಂದು ಮುಷ್ಟಿ ಬಿಗಿದ ಕೈ ಮೇಲೆತ್ತಿ, ಹೋರಾಟದ ಸಂಕೇತ ತೋರಿಹೋದವರು ಮತ್ತೆ ಬರಲಿಲ್ಲ. ಅವರು ತಮ್ಮ ಆಶಯ, ಗುರಿ, ಧ್ಯೇಯಗಳನ್ನು ನಮ್ಮ ಮುಂದಿಟ್ಟು ಹೋಗಿದ್ದಾರೆ.

**ಲಾಲ್ ಸಲಾಂ ಹಂಗಲ್‌ಜಿ.**

**ಡಾ|| ಸಿದ್ದನಗೌಡ ಪಾಟೀಲ**

ದೇಶಬಾಂಧವರತ್ತ ಗುಂಡು ಹಾರಿಸಲು ಆ ಭಾರತೀಯ ಸೈನಿಕರು ನಿರಾಕರಿಸಿದರು. ಅವರೆಲ್ಲರೂ ಗಾಢ್ವಾಲಿ ರೆಜಿಮೆಂಟಿನವರು. ಚಂದ್ರಸಿಂಗ್ ಗದ್ವಾಲಿ ಆ ರೆಜಿಮೆಂಟಿನ ನಾಯಕ. ದಂಗು ಬಡಿದುಹೋದ ಬ್ರಿಟಿಷ್ ಸೇನೆಯ ಅಂದಿನ ಕಾರ್ಯಾಚರಣೆ ಸಂಪೂರ್ಣವಾಗಿ ವಿಫಲಗೊಂಡಿತು. ಆ ರೆಜಿಮೆಂಟಿನ ಭಾರತೀಯ ಮೂಲದ ಸೈನಿಕರನ್ನು ನ್ಯಾಯಾಲಯದಲ್ಲಿ ಹಾಜರುಪಡಿಸಿದ ನಂತರ ಅವರನ್ನು ಅಂಡಮಾನ್ ದ್ವೀಪಕ್ಕೆ ಗಡೀಪಾರು ಮಾಡಿತು ಬ್ರಿಟಿಷ್ ಸರ್ಕಾರ. ಇಂತಹ ಅನೇಕ ಘಟನೆಗಳು ಹಾಗೂ ಬ್ರಿಟಿಷ್ ಆಳ್ವಿಕೆಯ ವಿರುದ್ಧ ಹೋರಾಡಿದ ಅನೇಕ ಕಮ್ಯುನಿಸ್ಟರು, ದೇಶಭಕ್ತರೊಳಗಿನ ಒಡನಾಟ ಹಂಗಲ್‌ರ ವ್ಯಕ್ತಿತ್ವವನ್ನು ರೂಪಿಸಿದ್ದವು. ಎಳೆಯ ವಯಸ್ಸಿನಲ್ಲೇ ಅವರ ಮನಸ್ಸು ಸಂಗೀತ ಮೊದಲಾದ ಸಾಂಸ್ಕೃತಿಕ ಚಟುವಟಿಕೆಗಳಿಗೆ, ತೆರೆದುಕೊಂಡಿತ್ತು. ಯುವಕರಾಗಿದ್ದಾಗಲೇ ಹಂಗಲ್‌ರಿಗೆ 'ಫ್ರೆಂಡ್ಸ್ ಆಫ್ ಸೋವಿಯೆತ್ ಯೂನಿಯನ್' ಸಂಸ್ಥೆಯ ಸಂಪರ್ಕ ಲಭಿಸಿತ್ತು. ೧೯೪೦ರ ಸುಮಾರಿಗಾಗಲೇ ಎ.ಐ.ಟಿ.ಯು.ಸಿ. ಕಾರ್ಮಿಕ ಸಂಘಟನೆಯಲ್ಲಿ ತೊಡಗಿಕೊಂಡಿದ್ದ ಯುವ ಹಂಗಲ್ ಪೇಷಾವರ್‌ನ ಕಾರ್ಖಾನೆಯೊಂದರ ನೌಕರರ ಹಕ್ಕುಗಳಿಗಾಗಿ ಒಂದು ದಿನದ ಮುಷ್ಕರವನ್ನು ಸಂಘಟಿಸಿದ್ದರು.

ಅದು ಭಾರತೀಯ ನೌಕಾದಳ ಬ್ರಿಟಿಷರ ವಿರುದ್ಧ ದಂಗೆಯೆದ್ದಿದ್ದ ಸಂದರ್ಭ. ಕಾಂಗ್ರೆಸ್, ಮುಸ್ಲಿಮ್ ಲೀಗ್ ಮತ್ತು ಕಮ್ಯುನಿಸ್ಟರು ಮುಂಬೈ, ಕಲ್ಕತ್ತ ಮತ್ತು ಕರಾಚಿಯಲ್ಲಿ ಮುಷ್ಕರ ನಡೆಸಲು ಕರೆ ನೀಡಿದ್ದ ಸಂದರ್ಭವೂ ಸಹ. ಬ್ರಿಟಿಷ್ ಸಾಮ್ರಾಜ್ಯಶಾಹಿ ನಡೆಸಿದ ಮಾರಣಹೋಮದಲ್ಲಿ ನೂರಾರು ಜನರು ಸಾವನ್ನಪ್ಪಿದ್ದರು. ಅಂದಿನ ತಲ್ಲಣದ ದಿನಗಳಲ್ಲೇ ಭಾರತ ಕಮ್ಯುನಿಸ್ಟ್ ಪಕ್ಷದ ಕರಾಚಿ ಘಟಕದ ಕಾರ್ಯದರ್ಶಿಯಾಗಿದ್ದ ಹಂಗಲ್ ಖ್ಯಾತ ಮಾರ್ಕ್ಸ್‌ವಾದಿ ವಿದ್ವಾಂಸರಾಗಿದ್ದ ರಜನಿ ಪಾಮೆ ದತ್ತರನ್ನು ಭೇಟಿಯಾಗಿ ಭಾರತದ ಸ್ವಾತಂತ್ರ್ಯ ಹೋರಾಟದ ದಿಕ್ಕುದಿಶೆಗಳ ಕುರಿತು ಮಾತುಕತೆ ನಡೆಸಿದ್ದರು.

ಮಾರ್ಕ್ಸ್‌ವಾದ ಗಂಭೀರ ಅಧ್ಯಯನದಲ್ಲಿ ತೊಡಗಿಕೊಂಡ ದಿನಗಳಿಂದ ಹಂಗಲ್‌ರ ಜೀವನದೃಷ್ಟಿಯ ಆಯಾಮವೇ ಹೊಸ ಸ್ವರೂಪವನ್ನು ಪಡೆಯಿತು. ಆ ಮೊದಲೇ ಸಾಂಸ್ಕೃತಿಕ ಚಟುವಟಿಕೆಗಳ ಬಗ್ಗೆ ತೀವ್ರ ಆಸಕ್ತಿ ಬೆಳೆಸಿಕೊಂಡಿದ್ದ, ೧೯೪೭ರಲ್ಲಿ ಜರುಗಿದ ಭಾರತೀಯ ಜನಕಲಾ ಸಮಿತಿಯ (ಇಂಡಿಯನ್ ಪೀಪಲ್ಸ್ ಥಿಯೇಟರ್ ಮೂವ್‌ಮೆಂಟ್ - ಐಪಿಟಿಎ) ಸಮ್ಮೇಳನದಲ್ಲಿ ಭಾಗವಹಿಸಿದ ಈತನಿಗೆ ಹೊಸ ಪ್ರಪಂಚವೊಂದು ಎದುರಾಗಲು ಕಾರಣವಾಯಿತೆಂದರೆ ತಪ್ಪಾಗಲಾರದು. ಭಾರತೀಯ ಕಲಾ ಜಗತ್ತಿನ ದಿಗ್ಗಜರಾದ, ಎಡಪಂಥೀಯ ಅಗ್ರಮಾನ್ಯ ಸಾಧಕರಾದ ಕೆ. ಎ. ಅಬ್ಬಾಸ್, ಬಲರಾಜ್ ಸಾಹ್ನಿ, ಡಾ॥ ರಾಜಾರಾವ್ ಮತ್ತು ದೀನಾ ಪಾಟಕ್ ಹಂಗಲ್‌ರ ಆತ್ಮೀಯ ಒಡನಾಡಿಗಳಾದದ್ದು, ನಂತರದ ದಿನಗಳಲ್ಲಿ ಭಾರತೀಯ ಸಾಂಸ್ಕೃತಿಕ ಜಗತ್ತು, ಅದರಲ್ಲೂ ಸಿನಿಮಾ ಮತ್ತು ರಂಗಭೂಮಿ ಹೊಸ ದಿಕ್ಕುಗಳನ್ನು ಅರಸುವಲ್ಲಿ, ಹೊಸ ಸ್ವರೂಪ ಪಡೆಯುವುದಕ್ಕೆ ಎಡೆಮಾಡಿಕೊಟ್ಟಿತು.

ತನ್ನೆಲ್ಲ ಮಿತ್ರರು, ಹಿತಚಿಂತಕರ ಒತ್ತಾಯದ ಮೇರೆಗೆ ತನ್ನ ಹುಟ್ಟು ನೆಲದಿಂದ, ಬಾಲ್ಯದಿಂದ ತಾನು ಕಳೆದ ಪರಿಸರದಿಂದ, ತಾನೇ ಕಟ್ಟಿ ಬೆಳೆಸಿದ್ದ ರಂಗಭೂಮಿ ಮತ್ತು ಸಂಗೀತ ಕ್ಷೇತ್ರದಿಂದ ದೂರಸರಿದು ಮುಂಬೈಗೆ ಬಂದು ನೆಲೆಸಿದ ಹಂಗಲ್ ಪಟ್ಟಪಾಡು ಅಷ್ಟಿಷ್ಟಲ್ಲ.



ಬದುಕಿನಲ್ಲಿ ಅದೇನೇ ಏರುಪೇರುಗಳಿರಲಿ, ಇಪ್ಟಾ ಸಂಘಟನೆಯಿಂದ ಸಂಗಾತಿ ಹಂಗಲ್ ದೂರವಿರಲು ಹೇಗೆ ತಾನೇ ಸಾಧ್ಯ? ೧೯೩೬ರಲ್ಲಿ ಕೆಲವು ಹೆಸರಾಂತ ಲೇಖಕರು, ಕವಿಗಳು 'ಭಾರತೀಯ ಪ್ರಗತಿಪರ ಲೇಖಕರ



ಸಂಘ' ಎಂಬ ಸಂಘಟನೆಯನ್ನು ಮುನ್ಷಿ ಪ್ರೇಮ್ ಚಂದ್ ಅವರ ಅಧ್ಯಕ್ಷತೆಯಲ್ಲಿ ಲಖ್ನೌದಲ್ಲಿ ರಚಿಸಿದ್ದರು. ೧೯೪೨ರಲ್ಲಿ ಇಪ್ಟಾ ತಂಡದವರು **ಇಂಡಿಯಾ ಇಮ್ಮಾರ್ಟಲ್** ಎಂಬ ಶ್ರೇಷ್ಠ ನೃತ್ಯರೂಪಕವೊಂದನ್ನು ಪ್ರದರ್ಶಿಸಿದರು. ಭಾರತದ ಎರಡು ಸಾವಿರ ವರ್ಷಗಳ ಪರಂಪರೆಯನ್ನು ನಿರೂಪಿಸಿದ ಆ ಸಾಹಸಗಾಥೆ ಜವಾಹರಲಾಲ್ ನೆಹರು, ಸರೋಜಿನಿ ನಾಯಿಡು ಮತ್ತಿತರ ಗಣ್ಯರ ಪ್ರಶಂಸೆಗೆ ಪಾತ್ರವಾಯಿತು. ದೇಶದ ಹಲವಾರು ರಾಜ್ಯಗಳಲ್ಲಿ ಇಪ್ಟಾ ತನ್ನ ನೆಲೆ ಕಂಡುಕೊಂಡು ಜನಪ್ರಿಯವಾಗತೊಡಗಿತು.

ವೈಯಕ್ತಿಕ ಮತ್ತು ರಾಜಕೀಯ ಕಾರಣಗಳಿಗಾಗಿ ಇಪ್ಟಾದ ಮುಂಚೂಣಿಯಲ್ಲಿದ್ದ ಕಲಾವಿದರಲ್ಲಿ ವೈಮನಸ್ಯಗಳು ತಲೆದೋರಿದರೂ ಅವರಲ್ಲಿ ಹಲವಾರು ಗಣ್ಯರನ್ನು ಮತ್ತೆ ಒಗ್ಗೂಡಿಸುವಲ್ಲಿ ಯಶಸ್ವಿಯಾದರು ಹಂಗಲ್. ೧೯೫೮ರಲ್ಲಿ ಇಪ್ಟಾ ಪ್ರದರ್ಶಿಸಿದ ಅಣ್ಣಾಭಾವ್ ಸಾತೆಯವರ 'ಇನಾಂದಾರ್' ನಾಟಕದಲ್ಲಿ ಹಂಗಲ್ ಅವರದೇ ಮುಖ್ಯಪಾತ್ರ.

೯೫ರ ಹರೆಯದ ಹಂಗಲ್ ಅನಾರೋಗ್ಯದಿಂದ ಚೇತರಿಸಿಕೊಳ್ಳುತ್ತಿರುವಾಗಲೇ ಚಿತ್ರೀಕರಣಗೊಂಡ ಧಾರಾವಾಹಿ 'ಮಧುಬಾಲಾ'ದಲ್ಲಿ ಪಾತ್ರವಹಿಸಲು ಮುಂದಾದದ್ದು ಇತಿಹಾಸ. 'ಮಧುಬಾಲಾ' ಭಾರತೀಯ ಚಿತ್ರೋದ್ಯಮದ ನೂರು ವರ್ಷಗಳ ಇತಿಹಾಸವನ್ನು ನಿರೂಪಿಸುವ ನೀಳ್ಗಥೆ.

ಶೋಲೆ ಚಿತ್ರದ ಜನಪ್ರಿಯ 'ರಹೀಮ್ ಚಾಚಾ' ಹಿಂದಿ ಚಿತ್ರರಂಗಕ್ಕೆ ಪಾದಾರ್ಪಣೆ ಮಾಡಿದ್ದು ೧೯೬೬-೬೭ರಲ್ಲಿ, ಆಗ ಅವರ ವಯಸ್ಸು ೫೦. ತೀಸ್ರಿ ಮಂಜ಼ಿಲ್ ಹಾಗೂ ಶಾಗಿರ್ದ್ ಹಂಗಲ್ ನಟಿಸಿದ ಮೊದಲೆರಡು ಚಿತ್ರಗಳು. ನಮಕ್ ಹರಾಮ್, ಬಾವರ್ಚಿ, ಚುಪಾ ರುಸ್ತುಂ, ಅಭಿಮಾನ್ ಹಾಗೂ ಗುಡ್ಡಿ ಚಿತ್ರಗಳಲ್ಲಿ ಅವರ ಅಭಿನಯ ಅವಿಸ್ಮರಣೀಯ.

ಯಾವತ್ತಿಗೂ ಹಣದ ಕೊರತೆಯಲ್ಲೇ ಬದುಕು ಸಾಗಿಸುತ್ತಿದ್ದ ಅವತಾರ್ ಕಿಷನ್ ಹಂಗಲ್ ತತ್ವ, ಸಿದ್ಧಾಂತಗಳಲ್ಲಿ ರಾಜಿಮಾಡಿಕೊಳ್ಳಲಿಲ್ಲ. ಬಲರಾಜ್ ಸಾಹ್ನಿ, ಶೈಲೇಂದ್ರ ಮತ್ತಿತರ ಮಹಾನ್ ಕಲಾವಿದರಂತೆ ಕಡೆಯ ಉಸಿರಿರುವವರೆಗೂ ಭಾರತ ಕಮ್ಯುನಿಸ್ಟ್ ಪಕ್ಷದ ನಿಷ್ಠಾವಂತ ಸದಸ್ಯರೂ, ಕಾರ್ಯಕರ್ತರೂ ಆಗಿದ್ದರು. ಪಕ್ಷದ ಮಹಾಧಿವೇಶನಗಳಲ್ಲಿ ಮೊದಲ ಸಾಲಿನಲ್ಲಿ ಕುಳಿತು ಚರ್ಚೆಗಳಲ್ಲಿ ಭಾಗವಹಿಸುತ್ತಿದ್ದವರಲ್ಲಿ ಎ. ಕೆ. ಹಂಗಲ್, ಕೈಫಿ ಅಜ್ಮಿ ಮತ್ತು ಅಲಿ ಸರ್ದಾರ್ ಜಫ್ರಿ ಪ್ರಮುಖರು.

ಪದ್ಮಭೂಷಣ್ ಮತ್ತಿತರ ಹಲವಾರು ಪ್ರಶಸ್ತಿಗಳಿಗೆ ಭಾಜನರಾಗಿದ್ದ ಹಂಗಲ್ ಪೋಷಕ ನಟನಾಗಿ ಸುಮಾರು ೨೨೫ ಚಿತ್ರಗಳಲ್ಲಿ ನಟಿಸಿದ್ದರೂ ಸಮರ್ಥ ಪೋಷಕ ನಟನೊಬ್ಬ ಇಡೀ ಚಿತ್ರದ ವ್ಯಾಪ್ತಿಯನ್ನೆ ಆವರಿಸಿಕೊಳ್ಳಬಲ್ಲ, ಆ ಪಾತ್ರವನ್ನು ಅವಿಸ್ಮರಣೀಯವಾಗಿಸಬಲ್ಲ ಎಂಬ ಮಾತನ್ನು ನಿಜವಾಗಿಸಿದ ಒಬ್ಬ ಮಹಾನ್ ಜನಪರ ಕಲಾವಿದರಾಗಿ ಚಿತ್ರರಸಿಕರ ನೆನಪಿನಲ್ಲುಳಿಯುತ್ತಾರೆ ಎ. ಕೆ. ಹಂಗಲ್.

**ಎಸ್. ಸುರೇಂದ್ರ**
೨೪, ೧ನೇ ಅಡ್ಡರಸ್ತೆ, ಕೆನರಾ ಬ್ಯಾಂಕ್ ಕಾಲೊನಿ, ೩ನೇ ಬ್ಲಾಕ್ ಪೂರ್ವ, ಜಯನಗರ, ಬೆಂಗಳೂರು - ౧౧




## ಹೊರಳು ದಾರಿ (ವೈಚಾರಿಕ ಲೇಖನಗಳ ಸಂಗ್ರಹ)

*ಪ್ರೊ// ಎನ್. ವಿ. ಅಂಬಾಮಣಿ ಮೂರ್ತಿ*

**ಪುಟ : xvi+೧೮೪+೧೬ = ೨೧೬ ಬೆಲೆ : ರೂ. ೧೨೦**

**ಪ್ರಿಯದರ್ಶಿನಿ ಪ್ರಕಾಶನ,** ನಂ. ೧೩೮, ೭ನೇ 'ಸಿ' ಮುಖ್ಯರಸ್ತೆ, ಹಂಪಿನಗರ, ವಿಜಯನಗರ ೨ನೇ ಹಂತ, ಬೆಂಗಳೂರು - ೫೬೦ ೧೦೪

ಪರಂಪರೆಯ ಮೌಢ್ಯಗಳನ್ನು, ಕಂದಾಚಾರಗಳ ಪಾಲಿಸುವುದರಲ್ಲಿ ಹಾಗೂ ಮುಂದಿನ ಪೀಳಿಗೆಗೆ ರವಾನಿಸುವುದರಲ್ಲಿ ಪುರುಷರಿಗಿಂತ ಸ್ತ್ರೀಯರ ಪಾತ್ರ ಹೆಚ್ಚು. ವೈಚಾರಿಕತೆ, ಹಾಗೂ ಆಧುನಿಕ ಸಮಾಜದ ಬಗ್ಗೆ ಅರಿವಿಲ್ಲದ ಸ್ತ್ರೀಯರು ಬಂಡಾಯ ಮನೋಧರ್ಮದವರಲ್ಲ. ಎಲ್ಲವನ್ನೂ ಸಹಿಸುವ, ಅನುಸರಿಸುವ ಸೌಮ್ಯವಾದಿಗಳೆಂದು ಜರಿಯುವವರಿಗೆ ಅಂಬಾಮಣಿಯವರ ಹೊರಳುದಾರಿ ಕೃತಿಯಲ್ಲಿನ ವೈಚಾರಿಕ ಹಾಗೂ ಚಿಂತನಾಶೀಲ ಬರಹಗಳು ಅಪವಾದವೆಂಬಂತೆ, ಎಲ್ಲಾ ಆರೋಪಗಳನ್ನು ತಿರಸ್ಕರಿಸುವಂತೆ ಮೂಡಿಬಂದಿವೆ. ಸಮಾಜದ ಕಂದಾಚಾರಗಳನ್ನು, ಮೌಢ್ಯ ಆಚರಣೆಗಳನ್ನು, ಧರ್ಮ-ಜಾತಿಯ ಹೆಸರಲ್ಲಿ ನಡೆಯುತ್ತಿರುವ ಅಮಾನವೀಯ ಕೃತ್ಯಗಳನ್ನೂ, ಪ್ರಸ್ತುತ ಪ್ರಭುತ್ವಗಳ ಒಡೆದು ಆಳುವ ನೀತಿಗಳನ್ನು, ಅವುಗಳ ಅಧಿಕಾರದಾಹವನ್ನೂ ಸಮಾಜವನ್ನು ವರ್ಣಾಶ್ರಮದ ಕೂಪದಲ್ಲೇ ಕೂಡಿಹಾಕಲು ಹವಣಿಸುತ್ತಿರುವ ಪುರೋಹಿತಶಾಹಿಯ ಹುನ್ನಾರಗಳನ್ನೂ ಲೇಖಕಿ ಯಾವ ಮುಲಾಜಿಗೂ ಒಳಗಾಗದೆ ಝಾಡಿಸುತ್ತಾರೆ. ಸಂಕಲನದಲ್ಲಿನ ವ್ಯಕ್ತಿಚಿತ್ರಣದ ಲೇಖನಗಳೂ ಸಹ ಯಾವುದೇ ಹಿಡಿತಗಳಿಗೆ ಬಲಿಯಾಗದೆ ತುಂಬಾ ಮುಕ್ತವಾಗಿ ನಿರೂಪಿತವಾಗಿವೆ. ಯಾವುದೇ ವ್ಯಕ್ತಿ, ಪುಸ್ತಕ, ಸಂಗತಿಯ ಬಗ್ಗೆ ಬರೆಯುತ್ತಿದ್ದರೂ ಅದು ಕೇವಲ ಆಯಾ ಸಂಗತಿಗೆ ಮಾತ್ರ ಸೀಮಿತವಾಗುವುದಿಲ್ಲ. ಕೇಂದ್ರದ ಸುತ್ತ ಸುತ್ತಿದರೂ, ಅದರಾಚೆಗೂ ಇರುವ ಸಂಗತಿಗಳನ್ನು ಅನಾವರಣ ಮಾಡುತ್ತದೆ. ಸಮಕಾಲೀನ ಸಂಗತಿಗಳಾದ ಶಾಲೆಗಳಲ್ಲಿ ಭಗವದ್ಗೀತೆ ಬೋಧನೆ, ಪ್ರತಿಮೆಗಳ ಅನಾವರಣದ ಔಚಿತ್ಯವನ್ನು ಪ್ರಶ್ನಿಸುತ್ತಾರೆ.




## ಈಸೋಪನ ಲೋಕನೀತಿ ಕಥೆಗಳು (ನೂರ ಇಪ್ಪತ್ತು ಕಥೆಗಳು)

*ಸಂಗ್ರಹ - ರೂಪಾಂತರ : ಆನಂದ*

**ಪುಟ : ೨೩೨ ಬೆಲೆ : ರೂ. ೧೨೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ ೫೧೯೫, ಬೆಂಗಳೂರು - ೫೬೦ ೦೦೧

ಈ ನೀತಿಕಥೆಗಳಲ್ಲಿ ಮನುಷ್ಯ ಪಾತ್ರಗಳಿಗಿಂತ ಪ್ರಾಣಿ-ಪಕ್ಷಿಗಳ ಪಾತ್ರಗಳಿಗೆ ಹೆಚ್ಚು ಮಹತ್ವವನ್ನು ನೀಡಲಾಗಿದೆ. ಪ್ರಾಣಿ-ಪಕ್ಷಿ-ಮನುಷ್ಯ ಪಾತ್ರಗಳು ಪರಸ್ಪರ ಸಂಭಾಷಿಸುತ್ತವೆ. ಈ ಸಂಭಾಷಣೆಯು ಅಸಹಜವೂ, ಅಲೌಕಿಕವೂ, ಅಸಂಭವವೂ ಆಗಿದ್ದರೂ, ಇದು ಜನಪದರ ನಿಸರ್ಗಪ್ರಿಯತೆಗೆ ಸಾಕ್ಷಿಯಾಗಿದೆ. ಹಾಗೆಯೇ ಮಾನವ-ಮಾನವೇತರ ಜೀವಸಂಕುಲದ ನಡುವೆ ಇರಲೇಬೇಕಾದ ಸಹಬಾಳ್ವೆಯ ಸಂಬಂಧವನ್ನು ಮನಗಾಣಿಸುತ್ತವೆ. ಸುಮಾರು ನೂರಿಪ್ಪತ್ತು ಕಥೆಗಳಿರುವ ಈ ಸಂಕಲನದಲ್ಲಿ ಕಥಾಹಂದರಕ್ಕೆ ಸಂಬಂಧಿಸಿದಂತೆ ಸುಮಾರು ನೂರಾಹತ್ತು ಚಿತ್ರಗಳನ್ನು ನೀಡಲಾಗಿದೆ. ಇದು ಓದುಗರು ಮತ್ತಷ್ಟು ಕುತೂಹಲಿಗಳಾಗಿ ಆಸಕ್ತಿಯನ್ನು ಹೆಚ್ಚಿಸಿಕೊಳ್ಳಲು ಸಹಾಯಕವಾಗಿದೆ. ಕಥಾವಿನ್ಯಾಸ, ನಿರೂಪಣೆಯ ಧಾಟಿ, ಪಾತ್ರಗಳ ಪೋಷಣೆ ಹಾಗೂ ಹೆಸರುಗಳು ಓದುಗರಲ್ಲಿ ಕುತೂಹಲ ಮತ್ತು ಆಸಕ್ತಿಯನ್ನುಂಟು ಮಾಡುತ್ತವೆ. ಗಾದೆ ಮತ್ತು ಒಗಟುಗಳ ವಿವರಣೆಯಂತಿರುವ ಈ ಕಥೆಗಳು ಲೌಕಿಕ ಜ್ಞಾನದ ಜೊತೆಗೆ ಸಾಮಾಜಿಕ ವಿವೇಕವನ್ನು ಬೆಳೆಸುತ್ತವೆ. ಆಧುನಿಕತೆಯ ಭರಾಟೆಯಲ್ಲಿ, ಯಂತ್ರ ನಾಗರಿಕತೆಗೆ ಮನಸೋತು, ಸದಾ ನಿರ್ಜೀವಿ ವಸ್ತುಗಳಂತೆ ಬದುಕುತ್ತಿರುವ ಹಾಗೂ ದಣಿಯುತ್ತಿರುವ, ಈ ಲೋಕದ ಪ್ರತಿಯೊಂದು ಜೀವಿಯನ್ನು ಭೋಗದ ವಸ್ತುವಂತೆ ಕಾಣುತ್ತಿರುವ ಈ ನಾಗರಿಕ ಸಮಾಜಕ್ಕೆ ನಿಸರ್ಗ ಹಾಗೂ ಸಾಮಾಜಿಕ ಜ್ಞಾನವನ್ನು ಈ ನೀತಿ ಕಥೆಗಳು ನೀಡುತ್ತವೆ.




## ಭವಿಷ್ಯದ ಭರವಸೆ ಹಸಿರು ಇಂಧನ

*ಟಿ. ಎಸ್. ಗೋಪಾಲ್*

**ಪುಟ : ೫೬ ಬೆಲೆ : ರೂ. ೫೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ ೫೧೯೫, ಬೆಂಗಳೂರು - ೫೬೦ ೦೦೧

ಭಾರತವೂ ಸೇರಿದಂತೆ ಅನೇಕ ಹಿಂದುಳಿದ ರಾಷ್ಟ್ರಗಳು ಎದುರಿಸುತ್ತಿರುವ ಬಹುದೊಡ್ಡ ಕೊರತೆಯೆಂದರೆ, ಪೆಟ್ರೋಲಿಯಂ ಇಂಧನ. ಈ ಸಮಸ್ಯೆ ಈ ರಾಷ್ಟ್ರಗಳನ್ನು ಯಾವ ಪ್ರಮಾಣದಲ್ಲಿ ಗುಲಾಮಗಿರಿಗೆ ನೂಕಿದೆಯೆಂದರೆ, ರಾಷ್ಟ್ರದ ಸ್ವಾತಂತ್ರ್ಯ ಹಾಗೂ ಸಾರ್ವಭೌಮತೆಯನ್ನು ಅಮೆರಿಕಾದಂತಹ ರಾಷ್ಟ್ರಗಳ ಪಾದದಡಿ ತಂದಿರಿಸಲೇಬೇಕಾದ ಅನಿವಾರ್ಯತೆ ಸೃಷ್ಟಿಯಾಗಿದೆ. ಇದನ್ನೇ ಬಂಡವಾಳವಾಗಿಸಿಕೊಂಡಿರುವ ಧನಿಕ ತೈಲೋತ್ಪನ್ನ ರಾಷ್ಟ್ರಗಳು ಹಿಂದುಳಿದ/ಅವಲಂಬಿತ ರಾಷ್ಟ್ರಗಳನ್ನು ಬಹುವಿಧದಲ್ಲಿ ಬೆದರಿಸಿ ನಿರಂತರವಾಗಿ ಸುಲಿಯುತ್ತಿವೆ. ಹಿಂದುಳಿದ ರಾಷ್ಟ್ರಗಳಲ್ಲಿ ಇಂಧನದ ಬೆಲೆ ದಿನೇ ದಿನೇ ಗಗನಕ್ಕೇರುತ್ತಿರುವುದು, ವಿದೇಶಿ ವಿನಿಮಯದ ಬಹುಪಾಲನ್ನು ಈ ಇಂಧನದ ಆಮದಿಗೆ ವೆಚ್ಚ ಮಾಡಬೇಕಾಗಿರುವುದು ಇದಕ್ಕೆ ಸಾಕ್ಷಿಯಾಗಿದೆ. ಹೀಗಿರುವಾಗ ರಾಷ್ಟ್ರದ ಇನ್ನಿತರ ವಲಯಗಳ ಅಭಿವೃದ್ಧಿ ಹೇಗೆ ಸಾಧ್ಯ? ಈ ಹಿಂದುಳಿದ ರಾಷ್ಟ್ರಗಳ ಮುಂದಿನ ಭವಿಷ್ಯವಂತೂ ಭೀಕರವಾಗುವ ಸಂಭವವೇ ಹೆಚ್ಚು. ಇದಕ್ಕಿರುವ ಒಂದೇ ಒಂದು ಪರ್ಯಾಯವೆಂದರೆ ಜೈವಿಕ ಇಂಧನ ಉತ್ಪಾದನೆ. ಜೈವಿಕ ಇಂಧನ ನಮ್ಮ ಪರಂಪರೆಯ ಕೊಡುಗೆ. ಆಧುನಿಕತೆಯ ಅಮಲಿನಲ್ಲಿ ಸಾಂಪ್ರದಾಯಿಕ ಶಕ್ತಿ ಸಂಪನ್ಮೂಲಗಳನ್ನು ನಿರ್ಲಕ್ಷ್ಯ ಮಾಡಲಾಗಿತ್ತಾದರೂ ಸಮರೋಪಾದಿಯಲ್ಲಿ ಮುನ್ನುಗ್ಗುತ್ತಿರುವ ಸಮಾಜಕ್ಕೆ ಮತ್ತೆ ಹಿಂದಿರುಗಿ ನೋಡಬೇಕಾದ ಅನಿವಾರ್ಯತೆ ಸೃಷ್ಟಿಯಾಗಿರುವುದು, ಕೇಂದ್ರ-ರಾಜ್ಯ ಸರ್ಕಾರಗಳೆರಡೂ ಜೈವಿಕ ಇಂಧನ ಉತ್ಪಾದನೆಗೆ ಒತ್ತು ನೀಡುತ್ತಿರುವುದು ಸಂತಸವೇ ಸರಿ. ಈ ನಿಟ್ಟಿನಲ್ಲಿ ಟಿ. ಎಸ್. ಗೋಪಾಲ್‌ರವರ ಈ ಕೃತಿ ಸ್ವಾಗತಾರ್ಹವಾದುದು. ಜೈವಿಕ ಇಂಧನದ ಇತಿಹಾಸ, ಉತ್ಪಾದನೆ, ಬಳಕೆಯ ವಿಧಾನಗಳು ಹಾಗೂ ಅನಿವಾರ್ಯತೆಯನ್ನು ಕೃತಿ ಮನಗಾಣಿಸುತ್ತದೆ.

## ಭಾಷಾಂತರ : ಒಂದು ಕಲಾತ್ಮಕ ಅಭಿವ್ಯಕ್ತಿ

*ಎಸ್. ಆರ್. ಭಟ್*

**ಪುಟ : ೩೬ ಬೆಲೆ : ರೂ. ೨೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ ೫೧೯೫, ಬೆಂಗಳೂರು - ೫೬೦ ೦೦೧




ಕಳೆದ ಮೂರು ನಾಲ್ಕು ದಶಕಗಳಿಂದ ಭಾಷಾಂತರ ಮೀಮಾಂಸೆ ಹೆಚ್ಚು ಪ್ರಾಮುಖ್ಯತೆಯನ್ನು ಪಡೆದುಕೊಳ್ಳುತ್ತಿದೆ. ಒಂದು ಕಾಲಕ್ಕೆ ಅಂತರ್‌ಶಿಸ್ತೀಯ ಅಧ್ಯಯನ ಮತ್ತು ತೌಲನಿಕ ಸಾಹಿತ್ಯ ಅಧ್ಯಯನಗಳ ಭಾಗವಾಗಿದ್ದ ಭಾಷಾಂತರ ಮೀಮಾಂಸೆಯು ಇತ್ತೀಚಿನ ದಿನಗಳಲ್ಲಿಯಂತೂ ಒಂದು ಪ್ರತ್ಯೇಕ ಜ್ಞಾನಶಿಸ್ತಾಗಿ ರೂಪುಗೊಳ್ಳುತ್ತಿದೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಕೃತಿಯು ಬಹಳ ಮುಖ್ಯವೆನಿಸುತ್ತದೆ. ಈ ಕೃತಿಯು ಗಾತ್ರದಲ್ಲಿ ಪುಟ್ಟದಾಗಿದ್ದರೂ ಭಾಷಾಂತರ ಪ್ರಕ್ರಿಯೆಯನ್ನು ವಿವಿಧ ಆಯಾಮಗಳಿಂದ ನಿರ್ವಚಿಸುವ ಕೆಲಸವನ್ನು ಮಾಡುತ್ತದೆ. ಜಗತ್ತಿನಲ್ಲಿ ಅಸಂಖ್ಯ ಭಾಷೆಗಳು ಸೃಷ್ಟಿಯಾದದ್ದು; ಬೇರೆ ಬೇರೆ ಭಾಷೆಗಳ ಜನ ಪರಸ್ಪರ ಸಂವಹನ ನಡೆಸಲು ತಿಣುಕಾಡಿದ್ದು; ಆನಂತರ ಇದಕ್ಕೆ ಒಂದು ಅದ್ಭುತ ಪರಿಹಾರವೆಂಬಂತೆ ಭಾಷಾಂತರ ಪರಿಕಲ್ಪನೆ ಹುಟ್ಟಿಕೊಂಡಿದ್ದು -ಇದನ್ನೆಲ್ಲ ಕಲಾತ್ಮಕವಾಗಿ ಒಂದು ಪೌರಾಣಿಕ ಕಥೆಯೆಂಬಂತೆ ನಿರೂಪಿಸುವ ಲೇಖಕರು ವಿವಿಧ ಮಾದರಿಯ ಭಾಷಾಂತರಗಳನ್ನು ವಿಶ್ಲೇಷಿಸುತ್ತಾರೆ, ವಿಮರ್ಷಿಸುತ್ತಾರೆ. ಆದರ್ಶ ಭಾಷಾಂತರವು ಹೇಗಿರಬೇಕು ಎಂಬುದರ ಕುರಿತು ಹಲವು ಹೊಳಹುಗಳನ್ನು ನೀಡುತ್ತಾರೆ. ಗ್ರೀಕ್ ಪುರಾಣ ಸಾಹಿತ್ಯ, ಯೂರೋಪಿಯನ್ ಸಾಹಿತ್ಯ, ಭಾರತೀಯ ಪುರಾಣ -ಸಾಹಿತ್ಯ, ಕನ್ನಡ ಸಾಹಿತ್ಯದ ಹಿನ್ನೆಲೆಯಲ್ಲಿ ಚರ್ಚೆಯನ್ನು ಬೆಳೆಸುವ ಮತ್ತು ವಿವಿಧ ಅನುವಾದದ ಮಾದರಿಗಳ ತುಲನೆ/ವಿಶ್ಲೇಷಣೆ ಮಾಡುವ ಎಸ್. ಆರ್. ಭಟ್ ಅವರು ಅನುವಾದದ ಸಂದರ್ಭದಲ್ಲಿ ಅನುವಾದಕನು ವಹಿಸಬೇಕಾದ ಎಚ್ಚರಗಳಾವುವು ಎಂಬುದನ್ನು ತಿಳಿಸುತ್ತಾರೆ. ವಸ್ತು-ವಿಷಯಕ್ಕೆ ಸಂಬಂಧಿಸಿದಂತೆ ಅನುವಾದಕನು ಮೂಲಕ್ಕೆ ನಿಷ್ಠವಾಗಿರಬೇಕು ಎನ್ನುವ ಇವರು, ಭಾಷೆಯ ವಿಷಯದಲ್ಲಿ ಅನುವಾದಕನು ಉದ್ದಿಷ್ಟ ಭಾಷೆಗೆ ನಿಷ್ಠನಾಗಿರಬೇಕು ಎನ್ನುತ್ತಾರೆ.

## ಗಳಿಗೆ ಬಟ್ಟಲು

*ಆರ್. ತಾರಿಣಿ ಶುಭದಾಯಿನಿ*

**ಪುಟ : viii + ೨೦೦** **ಬೆಲೆ : ರೂ. ೧೫೦**

**ಪಲ್ಲವ ಪ್ರಕಾಶನ,** ಚನ್ನಪಟ್ಟಣ ಅಂಚೆ, ವಯಾ ಎಮ್ಮಿಗನೂರು, ಬಳ್ಳಾರಿ-೫೮೩೧೧೩

ಸ್ತ್ರೀನಿಷ್ಠ ದೃಷ್ಟಿಕೋನದ ಮೂಲಕ ಸಾಹಿತ್ಯ ಮತ್ತು ಸಾಹಿತ್ಯಿಕ ಸಿದ್ಧಾಂತಗಳನ್ನು ಚರ್ಚೆಗೆ ಒಳಪಡಿಸಿರುವ ಕೃತಿಯಿದು. ಹದಿನೆಂಟು ಲೇಖನಗಳಿದ್ದು, ಅವುಗಳನ್ನು ಪಾದ ಒಂದು; ಕಾವ್ಯ, ಪಾದ ಎರಡು; ಕಥನ, ಪಾದ ಮೂರು ಸಂಕಥನ ಎಂದು ವಿಭಜಿಸಿಕೊಂಡಿದ್ದು, ಈ ಬಗೆಯ ವರ್ಗೀಕರಣ ಔಚಿತ್ಯವೆನಿಸುತ್ತದೆ. ಕಾವ್ಯ, ಕಥನ ಮತ್ತು ವಿಮರ್ಶೆಯ ವಿಮರ್ಶೆ ಇಲ್ಲಿದ್ದರೂ - ಇಲ್ಲಿನ ಎಲ್ಲ ಲೇಖನಗಳನ್ನು ಬೆಸೆಯುತ್ತಿರುವುದು ಕೃತಿಯ ಲೇಖಕಿಯ ಸಾಮಾಜಿಕ ಬದ್ಧತೆ, ಆಳವಾದ ಸಾಹಿತ್ಯಿಕ ಪ್ರಜ್ಞೆ ಮತ್ತು ಸ್ತ್ರೀನಿಷ್ಠ ದೃಷ್ಟಿಕೋನ. ಒಂದು ರೀತಿಯಲ್ಲಿ ಸಾಹಿತ್ಯ ಮತ್ತು ಸಾಹಿತ್ಯಿಕ ಸಿದ್ಧಾಂತಗಳ ಪುನರ್‌ಪರಿಶೀಲನೆಯಂತೆ, ಪುನರವಲೋಕನದಂತೆ, ಮರುಓದಿನಂತೆ ಇಲ್ಲಿನ ಲೇಖಗಳು ಕಾಣುತ್ತವೆ. ಕೇವಲ ಸ್ತ್ರೀವಾದವಷ್ಟೇ ಅಲ್ಲದೆ ಸಮಾಜವಾದ, ಮಾರ್ಕ್ಸ್‌ವಾದ ಮತ್ತು ಅಂಬೇಡ್ಕರ್ ವಿಚಾರಧಾರೆಯ ಬಗೆಗೆ ಆಳವಾದ ಜ್ಞಾನವನ್ನು ಹೊಂದಿರುವ ತಾರಿಣಿಯವರು, ತಮ್ಮ ಈ ಜ್ಞಾನವನ್ನು ಸಾಹಿತ್ಯಕ್ಕೆ ಅನ್ವಯಿಸುವ ಕ್ರಮ ನಿಜಕ್ಕೂ ಅನುಕರಣೀಯ. ದಾಸಸಾಹಿತ್ಯದ ಬಗೆಗೆ, ರತ್ನಾಕರವರ್ಣಿಯ ಭರತೇಶ ವೈಭವದ ಬಗೆಗೆ ಮೊದಲ ಮೂರು ಲೇಖನಗಳಲ್ಲಿ ಚರ್ಚಿಸಿರುವುದು ಬಿಟ್ಟರೆ, ಉಳಿದೆಲ್ಲವೂ ಆಧುನಿಕ ಸಾಹಿತ್ಯವನ್ನು ಮತ್ತು ಸಾಹಿತ್ಯ ವಿಮರ್ಶಾ ಮಾದರಿಗಳನ್ನು ಕುರಿತ ಲೇಖನಗಳು. ಮಾಸ್ತಿ, ಕೆರೂರು ವಾಸುದೇವಾಚಾರ್ಯ, ಕುವೆಂಪು ಅವರಂತಹ ಹಿರಿಯ ತಲೆಮಾರಿನ ಸಾಹಿತಿಗಳನ್ನೂ; ಅನಂತಮೂರ್ತಿ, ತೇಜಸ್ವಿ, ಎಚ್. ಎಸ್. ಶಿವಪ್ರಕಾಶ್, ಎಸ್. ಜಿ. ಸಿದ್ಧರಾಮಯ್ಯ, ಅಬ್ದುಲ್ ಬಷೀರ್ ಮೊದಲಾದ ನಂತರದ ತಲೆಮಾರಿನವರನ್ನು ಇವರು ಕಂಡರಿಸಿರುವ ರೀತಿ ವಿಶಿಷ್ಟವೆನಿಸುತ್ತದೆ. ಭಕ್ತಿಪಂಥದ ಹಿನ್ನೆಲೆಯಲ್ಲಿ ಲಲ್ಲೇಶ್ವರಿಯ ಕಾವ್ಯ-ತತ್ವವನ್ನು ಮಂಡಿಸಿರುವ ಲೇಖನ ನಿಜಕ್ಕೂ ಅನನ್ಯ.




## ಮಹಿಳಾ ಮೀಸಲಾತಿ ಮತ್ತು ಲಿಂಗ ರಾಜಕಾರಣ




*ಡಾ|| ಎನ್. ಗಾಯತ್ರಿ*

**ಪುಟ : ೧೦೪** **ಬೆಲೆ : ರೂ. ೮೦**

**ಲಡಾಯಿ ಪ್ರಕಾಶನ,** ನಂ. ೨೧, ಪ್ರಸಾದ್ ಹಾಸ್ಟೆಲ್, ಗದಗ - ೫೮೨ ೧೦೧

ಸ್ತ್ರೀನಿಷ್ಠ ದೃಷ್ಟಿಕೋನ ಮತ್ತು ಪ್ರಖರ ರಾಜಕೀಯ ಪ್ರಜ್ಞೆ - ಇವೆರಡರ ಸಂಗಮದಿಂದ ಹುಟ್ಟಿರುವ ಮಹತ್ವದ ಕೃತಿಯಿದು. ಒಟ್ಟು ಹತ್ತು ಲೇಖನಗಳು ಇಲ್ಲಿದ್ದು, ಒಂದು ಮತ್ತೊಂದರ ಮುಂದುವರೆದ ಭಾಗಗಳು ಎಂಬಂತಿವೆ. ಭಾರತದಲ್ಲಿ ವಸಾಹತುಶಾಹಿ ಸಂದರ್ಭದಲ್ಲಿ ಮಹಿಳಾ ಹೋರಾಟಗಳು ಹೇಗೆ ಆರಂಭಗೊಂಡವು ಎಂಬುದನ್ನೂ, ಆ ಸಂದರ್ಭದಲ್ಲಿ ಮಹಿಳೆಯರು ಎದುರಿಸುತ್ತಿದ್ದ ಸಮಸ್ಯೆಗಳು ಯಾವ ಬಗೆಯವು ಎಂಬುದನ್ನೂ ಹೋರಾಟಗಾರ್ತಿಯರು ಆ ಕಾಲಕ್ಕೆ ಪುರುಷ ಪ್ರಧಾನ ಸಮಾಜದ ಮುಂದೆ ಇಟ್ಟ ಬೇಡಿಕೆಗಳು ಯಾವುವು ಎಂಬುದನ್ನೂ, ತಮ್ಮ ಬೇಡಿಕೆಗಳು ಯಾವುದು ಎಂಬುದನ್ನೂ, ತಮ್ಮ ಬೇಡಿಕೆಗಳನ್ನು ಈಡೇರಿಸಿಕೊಳ್ಳಲು ಮಹಿಳೆಯರು ಯಾವ ರೀತಿಯಲ್ಲಿ ಸಾಂಘಿಕ ಹೋರಾಟಗಳನ್ನು ನಡೆಸಬೇಕಾಯಿತು ಎಂಬುದನ್ನೂ ಹಂತ ಹಂತವಾಗಿ ಈ ಕೃತಿಯಲ್ಲಿ ಡಾ|| ಎನ್. ಗಾಯತ್ರಿ ವಿವರಿಸಿದ್ದಾರೆ. ಹೋರಾಟಗಳನ್ನು ದಾಖಲಿಸುವುದು ಮತ್ತು ಆ ಕುರಿತು ಕೇವಲ ಮಾಹಿತಿ ನೀಡುವುದಷ್ಟೇ ಈ ಕೃತಿಯ ಉದ್ದೇಶವಲ್ಲ. ಓದುಗರನ್ನು ಚಿಂತನೆಗೆ ಹಚ್ಚುವ, ಓದುಗರ ಆಲೋಚನಾ ವಿಧಾನವನ್ನು ದಾಖಲಿಸುವ ದಟ್ಟ ರಾಜಕೀಯ ಪ್ರಜ್ಞೆಯನ್ನು ತುಂಬುವ ಕೃತಿಯಿದು. ಭಾರತದಲ್ಲಿ ಪಂಚಾಯತ್ ರಾಜ್ ವ್ಯವಸ್ಥೆ ಜಾರಿಗೆ ಬಂದದ್ದನ್ನು ಗ್ರಾಮಪಂಚಾಯ್ತಿ, ತಾಲ್ಲೂಕು ಪಂಚಾಯ್ತಿ ಮತ್ತು ಜಿಲ್ಲಾ ಪಂಚಾಯ್ತಿ ಚುನಾವಣೆಗಳಲ್ಲಿ ಮಹಿಳೆಯರ ಮೀಸಲಾತಿಯ ಬಗ್ಗೆ ಸುದೀರ್ಘವಾಗಿ ಚರ್ಚಿಸುತ್ತಾರೆ. ಅನಾದಿಕಾಲದಿಂದಲೂ ಪುರುಷ ಪ್ರಧಾನ ಸಮಾಜದಿಂದ ಶೋಷಣೆಗೆ ಒಳಗಾಗಿರುವ ಸ್ತ್ರೀ ಸಮುದಾಯಗಳು ಪ್ರಧಾನವಾಹಿನಿಗೆ ಬರಬೇಕಾದರೆ, ರಾಜಕೀಯ ಮೀಸಲಾತಿಯನ್ನು ಪಡೆದುಕೊಳ್ಳುವುದು ಬಿಟ್ಟು ಬೇರೆ ದಾರಿಯೆ ಇಲ್ಲವೆನ್ನುತ್ತಾರೆ.

**– ರಮೇಶ ಕೋಲಾರ**

*ಪ್ರಥಮ ದರ್ಜೆ ಸಹಾಯಕರು, ಕರ್ನಾಟಕ ಲೋಕಾಯುಕ್ತ, ಕೋಲಾರ - ೫೬೩ ೧೦೧*

## ಸಾದರ ಸ್ವೀಕಾರ

**ಬದುಕು ಬರೆಯುವ ಮುನ್ನ** (ಮುಕ್ತಕಗಳು)
*ಗಣಪತಿ ಹೆಗಡೆ ಕೊಂಡದಕುಳಿ*
**ಪುಟ : ii + xiv + ೩೨ = ೪೮** **ಬೆಲೆ : ರೂ. ೩೦**
**ಸುಮುಖ ಪ್ರಕಾಶನ,** ಸಿದ್ಧನ ಬಾವಿ, ಕುಮಟಾ, ಉ. ಕ.

**ಪರಿಸರದ ಮಹಾಶತ್ರು ಪ್ಲಾಸ್ಟಿಕ್** *ಡಾ|| ಬಿ. ಜಿ. ಚಂದ್ರಶೇಖರ್*
**ಪುಟ : ೭೬** **ಬೆಲೆ : ರೂ. ೪೦**

**ಭಗವದ್ಗೀತೆ ಬೆಳಕು ನೀಡುವುದೇ ?**
*ಎನ್. ಶಂಕರಪ್ಪ ತೋರಣಗಲ್ಲು*
**ಪುಟ : xxxii + ೧೭೪** **ಬೆಲೆ : ರೂ. ೧೦೦**
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಕಾವ್ಯಕಲಾ ಪ್ರಕಾಶನ,** ೧೨೭೩, ೭ನೇ ಕ್ರಾಸ್, ಚಂದ್ರಾ ಬಡಾವಣೆ, ವಿಜಯನಗರ, ಬೆಂಗಳೂರು - ೫೬೦ ೦೪೦

**ನೋವಿನ ಬಣ್ಣಗಳು** (ಗ್ರಾಮೀಣ ಬದುಕಿನ ನುಡಿ ಚಿತ್ರಗಳು)
*ಭೀಮಣ್ಣ ಗಜಾಪುರ*
**ಪುಟ : xx + ೧೬೪** **ಬೆಲೆ : ರೂ. ೧೭೫**

**ವೈದ್ಯ ಸೇವಾ ಜ್ಯೋತಿಗಳು** *ಟಿ. ಕೆ. ಗಂಗಾಧರ ಪತ್ತಾರ*
**ಪುಟ : xxviii + ೧೮೦** **ಬೆಲೆ : ರೂ. ೧೭೫**
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಸಂಸ್ಕೃತಿ ಪ್ರಕಾಶನ,** ಡಾ|| ಸುಭಾಷ್ ಭರಣಿ ಸಾಂಸ್ಕೃತಿಕ ವೇದಿಕೆ, ಆದರ್ಶ ಕಾಲೋನಿ ಕಂಟೋನ್ಮೆಂಟ್, ಬಳ್ಳಾರಿ - ೫೮೩ ೧೦೪

**ಮೌಲ್ಡರ್ ರಾಜಣ್ಣ** (ಎಸ್. ವಿ. ರಾಜು) ಎಲ್. ಶಿವಲಿಂಗಪ್ಪ
**ಪುಟ : viii + ೭೬** **ಬೆಲೆ : ರೂ. ೫೦**
**ಕರ್ನಾಟಕ ಶಿಲ್ಪಕಲಾ ಅಕಾಡೆಮಿ,** ಕನ್ನಡ ಭವನ, ಜೆ. ಸಿ. ರಸ್ತೆ, ಬೆಂಗಳೂರು - ೫೬೦ ೦೦೧

**ವಿಜ್ಞಾನ ಮತ್ತು ತಂತ್ರಜ್ಞಾನ** ಪ್ರೊ|| ಎಂ. ಕೆ. ಶ್ರೀಧರ್
**ಪುಟ : x + ೧೩೪ + ೪** **ಬೆಲೆ : ರೂ. ೬೦**

**ಭಾರತರತ್ನ ಸರ್ ಮೋಕ್ಷಗುಂಡಂ ವಿಶ್ವೇಶ್ವರಯ್ಯ** (ಸಂಕ್ಷಿಪ್ತ ಪರಿಚಯ) *ಡಾ|| ಸಿ. ಸೀತಾರಾಮ್*
**ಪುಟ : x + ೪ + ೫೪ + ೪** **ಬೆಲೆ : ರೂ. ೪೦**
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಭವನ್ಸ್ ಗಾಂಧೀ ಸೆಂಟರ್ ಆಫ್ ಸೈನ್ಸ್ ಆ್ಯಂಡ್ ಹ್ಯೂಮನ್ ವ್ಯಾಲ್ಯೂಸ್,** ಭಾರತೀಯ ವಿದ್ಯಾಭವನ, ನಂ. ೪೩/೧, ರೇಸ್‌ಕೋರ್ಸ್ ರಸ್ತೆ, ಬೆಂಗಳೂರು - ೫೬೦ ೦೦೧

**ಪ್ರಪಂಚದ ಪ್ರಭಾವಿ ಮಹಿಳೆಯರು** ರಾಜೇಶ್ವರಿ ಎನ್.
**ಪುಟ : xvi + ೯೬ = ೧೧೨** **ಬೆಲೆ : ರೂ. ೭೦**
**ಕಾಲ ಪ್ರಕಾಶನ,** ನಂ. ೨೩/ಎ, ೨ನೇ ಮಹಡಿ, ೧೦ನೇ ಅಡ್ಡರಸ್ತೆ, ೧ನೇ 'ಎನ್' ಬ್ಲಾಕ್, ರಾಜಾಜಿನಗರ, ಬೆಂಗಳೂರು - ೫೬೦ ೦೧೦

**ಗೊಂದಲಿಗ್ಯಾ** ಎ. ಎಂ. ಮದರಿ
**ಪುಟ : ೨೪೦** **ಬೆಲೆ : ರೂ. ೧೨೫**
**ಲೋಹಿಯಾ ಪ್ರಕಾಶನ,** ಕ್ಷಿತಿಜ, ಕಪ್ಪಗಲ್ಲು ರಸ್ತೆ, ಗಾಂಧಿನಗರ, ಬಳ್ಳಾರಿ - ೫೮೩ ೧೦೩

**ನಮ್ಮ ಚಿಲಗೋಡರು** ಅಕ್ಬರ್ ಸಿ. ಕಾಲಿಮಿರ್ಚಿ
**ಪುಟ : xvi + ೬೪** **ಬೆಲೆ : ರೂ. ೫೫**

**ಕೊಪ್ಪಳ ಜಿಲ್ಲಾ ಮಾಹಿತಿ ಕೋಶ** (ಸಮಗ್ರ ಮಾಹಿತಿ ಸಂಕಲನ)
ಸಂ. : ಶಂಕರ್ ಹೂಗಾರ, ಅಕ್ಬರ್ ಸಿ. ಕಾಲಿಮಿರ್ಚಿ
**ಪುಟ : ೧೨ + ೧೪೦** **ಬೆಲೆ : ರೂ. ೧೦೦**

**ಅಮಲ** (ಕವನ ಸಂಕಲನ) ಅಕ್ಬರ್ ಸಿ. ಕಾಲಿಮಿರ್ಚಿ
**ಪುಟ : xii + ೮೦** **ಬೆಲೆ : ರೂ. ೬೦**
ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು
**ಕನ್ನಡ ಮೈತ್ರಿ ಪ್ರಕಾಶನ,** ನಂ. ೭೩೧/೩, ಮನೆ ನಂ. ೯, ಮಂಜುನಾಥ ಬಡಾವಣೆ, ಭಾಗ್ಯನಗರ - ೫೮೩ ೨೩೮, ಕೊಪ್ಪಳ ತಾಲೂಕು, ಜಿಲ್ಲೆ

**ಸಾಧನೆಯ ಸಮುಚ್ಚಯ ಎಲ್. ಶಿವಲಿಂಗಪ್ಪ**
*ಡಾ|| ಎಸ್. ಸಿ. ಪಾಟೀಲ*
**ಪುಟ : vi + ೭೮ + ೮** **ಬೆಲೆ : ರೂ. ೧೦೦**
**ರಾಷ್ಟ್ರೀಯ ದೃಶ್ಯಕಲಾ ಅಕಾಡೆಮಿ,** 'ಚಿತ್ರಾಕ್ಷಿ' ಮ. ನಂ. ೯, ತುಂಗಭದ್ರಾ ಹೌಸಿಂಗ್ ಕಾಲೋನಿ, ೨ನೇ ಅಡ್ಡರಸ್ತೆ, ಶ್ರೀನಗರ ಕ್ರಾಸ್, ಧಾರವಾಡ - ೭

**೧೦೧ - ಇವು ನಿಮ್ಮ ಜೀವನದಲ್ಲಿ ನಿಶ್ಚಿತವಾಗಿ ಪರಿವರ್ತನೆ ತರುತ್ತವೆ** *ಜೋಜಿ ವಲ್ಲಿ*
**ಪುಟ : ೨೧೪** **ಬೆಲೆ : ರೂ. ೧೫೦**
**ಸಾವಣ್ಣ ಎಂಟರ್‌ಪ್ರೈಸಸ್,** ನಂ. ೫೭, ೧ನೇ ಮಹಡಿ, ಪುಟ್ಟಣ್ಣ ರಸ್ತೆ, ಬಸವನಗುಡಿ, ಬೆಂಗಳೂರು - ೫೬೦ ೦೦೪



# ಪತ್ರಕರ್ತ ವಿ. ಎನ್. ಸುಬ್ಬರಾವ್‌ಗೆ ನಮನ

ನಾಲ್ಕಾರು ದಶಕಗಳಿಂದ ಒಟ್ಟಿಗೆ ಕೆಲಸ ಮಾಡಿದ ಗೆಳೆಯರು ಒಬ್ಬರಾದ ಮೇಲೆ ಒಬ್ಬರು ತೀರಿಕೊಂಡಾಗ ಮನಸ್ಸಿಗೆ ಆಗುವ ಆಘಾತ ಅಪಾರ, ಅವರ್ಣನೀಯ. ಆಗ ನಮ್ಮ ಸರದಿ ಯಾವಾಗ ಅನ್ನಿಸದೇ ಇರದು. ಮೊನ್ನೆ ನಿಧನ ಹೊಂದಿದ (ಅಕ್ಟೋಬರ್ ೯) ಗೆಳೆಯ ವಿ. ಎನ್. ಸುಬ್ಬರಾವ್ (೮೦) ನನ್ನ ಆತ್ಮೀಯರಲ್ಲೊಬ್ಬ. ಕಷ್ಟ ಸುಖಗಳನ್ನು ಹಂಚಿಕೊಂಡು ಸಲಿಗೆಯಿಂದ ಏಕವಚನದಲ್ಲಿ ಮಾತನಾಡುತ್ತಿದ್ದ ಮಿತ್ರನನ್ನು ಕಳೆದುಕೊಂಡ ದುಃಖ ನನ್ನ ಪಾಲಿಗೆ. ಎರಡು ತಿಂಗಳ ಹಿಂದೆ ಅವನು ನಗರದ ಎಂ. ಎಸ್. ರಾಮಯ್ಯ ಆಸ್ಪತ್ರೆಯಲ್ಲಿದ್ದಾಗ ಹೋಗಿ ಭೇಟಿಯಾದೆ. ಕ್ಯಾನ್ಸರ್ ರೋಗಪೀಡಿತನಾಗಿ ಕಿಮೋ ಥೆರಪಿಗೆ ಒಳಗಾಗಿದ್ದ. ಈಚೆಗೆ ತಾನೆ ಕಳೆದುಕೊಂಡ ಬಾಲ್ಯದ ಗೆಳೆಯ ಗೋಪಾಲಕೃಷ್ಣನ ಬಗ್ಗೆ ಬರೆದಿದ್ದನ್ನು ನೆನಪಿಸಿಕೊಂಡೆ. ಅವನು ಕೂಡಲೇ ''ನನ್ನ ಬಗ್ಗೆ ಕೂಡ ನೀನೇ ಬರೆಯಯ್ಯ'' ಎಂದ. ನನಗೆ ಕೋಪ ಬಂದು, ''ಹಾಗೆನ್ನಬೇಡ ನೀನು ಗುಣಮುಖನಾಗುವೆ'' ಎಂದೆ. ಅವನು ಹೇಳಿದ್ದೇ ನಿಜವಾಯಿತು. ಹಿರಿಯ ಮಗನ ಮನೆಯಲ್ಲಿ ಮಲಗಿದ್ದ ಸುಬ್ಬರಾವ್‌ಅನ್ನು ಎರಡು ಮೂರು ಸಲ ಹೋಗಿ ನೋಡಿಬಂದಾಗಲೂ ತುಂಬಾ ಬೇಸರ ವಾಯಿತು. ಅವನಿಗೆ ಖಿನ್ನತೆ ಆವರಿಸಿಕೊಂಡಿತ್ತು. ನಾನೆಂದೂ ಅವನು ಆ ರೀತಿ ಮಲಗಿದ್ದುದನ್ನು ಕಂಡವನಲ್ಲ. ಸದಾ ಚಟುವಟಿಕೆ ಯಿಂದಿರುತ್ತಿದ್ದ, ಗರಿಗರಿಯಾಗಿ ಇಸ್ತ್ರಿ ಮಾಡಿದ ದಿರಸಿನಿಂದಿರುತ್ತಿದ್ದ. ಆಗಾಗ ದೂರವಾಣಿಯಲ್ಲಿ ಮಾತನಾಡುತ್ತಿದ್ದೆವು. ಕೊನೆಯ ದಿನಗಳಲ್ಲಿ ಅವನು ಕೇಳಿದ್ದು ಓದಲು ಕನ್ನಡ ಪುಸ್ತಕಗಳನ್ನು. ಗೆಳೆಯ ರಾಜಾರಾಮ್ ಆಸ್ಪತ್ರೆಯಲ್ಲಿದ್ದ ಅವನನ್ನು ಭೇಟಿಯಾದಾಗ ಒಂದಷ್ಟು ಕನ್ನಡ ಪುಸ್ತಕಗಳನ್ನು ತಲುಪಿಸಿದರು. ನಾನು ಅವನಿಗೆ 'ಮೇನಕಾ ಸಾಹಸ' ಕುರಿತು ಬರೆದಿದ್ದ ಹಸ್ತಪ್ರತಿಯನ್ನು ಮತ್ತು ಕಮ್ಯುನಿಸ್ಟ್ ಪಾರ್ಟಿ ಕುರಿತು ಬರೆದಿದ್ದ ಪುಸ್ತಕವನ್ನು ಓದಲು ಕೊಟ್ಟೆ. ಅವನ್ನು ಓದಿ ಮೆಚ್ಚಿಕೊಂಡು 'ಮೇನಕಾ'ದ ಬಗ್ಗೆ ಬಿಟ್ಟು ಹೋಗಿರುವ ಒಂದೆರಡು ಮಾಹಿತಿಗಳನ್ನು ಕುರಿತು ತಿಳಿಸುವುದಾಗಿ ಹೇಳಿದ. ಆ ದಿನ ಬರಲೇ ಇಲ್ಲ.

ಸುಬ್ಬರಾವ್ ಬೆಂಗಳೂರಿನ 'ಡೆಕ್ಕನ್ ಹೆರಾಲ್ಡ್' ಪತ್ರಿಕೆ ಸೇರಿದಾಗಿನಿಂದ ನನಗೆ ಪರಿಚಯ. ೧೯೫೦ರ ದಶಕದ ಪ್ರಾರಂಭದಲ್ಲಿ, ಅವನು ಸೆಂಟ್ರಲ್ ಕಾಲೇಜಿನಲ್ಲಿ ಬಿ.ಎ. ಆನರ್ಸ್ ಓದುತ್ತಿದ್ದಾಗ ನಾನೂ ಅದೇ ಕಾಲೇಜಿನಲ್ಲಿದ್ದೆ. ಪರಿಚಯ ಇರಲಿಲ್ಲ. ಇಬ್ಬರಿಗೂ ಗೆಳೆತನ ಬೆಳೆದದ್ದು ಪತ್ರಕರ್ತರ ಸಂಘಟನೆಯಲ್ಲಿ. ನಾನು ಕಾರ್ಯದರ್ಶಿಯಾಗಿದ್ದಾಗ ಅವನು ಕೆಲವು ವರ್ಷಗಳು ಕಾರ್ಯಕಾರಿ ಸಮಿತಿಯ ಸದಸ್ಯನಾಗಿದ್ದ. ಆಗಿನಿಂದ ಇಬ್ಬರೂ ಒಟ್ಟಾಗಿ ಒಂದಲ್ಲ ಒಂದು ಕೆಲಸಕಾರ್ಯಗಳಲ್ಲಿ ತೊಡಗಿರುತ್ತಿದ್ದೆವು. ಸ್ಮರಣ ಸಂಚಿಕೆಗಳನ್ನು ಸಂಪಾದಿಸುವುದರಲ್ಲಿ ಸುಬ್ಬರಾವ್ ನಿಷ್ಣಾತ. ಅವನಿಂದ ನಾನು ಪುಟಗಳ ವಿನ್ಯಾಸ ಮಾಡುವುದನ್ನು ಕಲಿತೆ. ಇಂಗ್ಲಿಷ್ ಮತ್ತು ಕನ್ನಡ ಎರಡರಲ್ಲೂ ಲೀಲಾಜಾಲವಾಗಿ ಬರೆಯಬಲ್ಲವನಾಗಿದ್ದ. ಅವನು ಒಳ್ಳೆಯ ಚಲನಚಿತ್ರ ವಿಮರ್ಶಕ. 'ಇಂಡಿಯನ್ ಎಕ್ಸ್‌ಪ್ರೆಸ್'ನಲ್ಲಿ ವರದಿಗಾರನಾಗಿ, ಮುಖ್ಯ ವರದಿಗಾರನಾಗಿ ಹಲವಾರು ವರ್ಷಗಳ ಸೇವೆ ಸಲ್ಲಿಸಿದ. ಹೊಸದಾಗಿ ಪತ್ರಿಕಾರಂಗ ಸೇರಿದವರಿಗೆ ಸಾಕಷ್ಟು ನೆರವಾಗಿದ್ದ. ಬೆಳಗ್ಗೆ ಸುಮಾರು ಹತ್ತು ಹನ್ನೊಂದು ಗಂಟೆಗೆ ಮನೆ ಬಿಟ್ಟನೆಂದರೆ ಮರಳುತ್ತಿದ್ದುದು ತಡರಾತ್ರಿಗೇ. ಇದನ್ನು ಜೀವಿತದುದ್ದಕ್ಕೂ ರೂಢಿಸಿಕೊಂಡಿದ್ದ. ಪತ್ರಿಕಾರಂಗದಲ್ಲಿ ಒಳ್ಳೆಯ ಹೆಸರು ಗಳಿಸಿದ, ಪ್ರಶಸ್ತಿಗಳನ್ನು ಪಡೆದ. ಪ್ರೆಸ್‌ಕ್ಲಬ್‌ನ, ಮಾಧ್ಯಮ ಅಕಾಡೆಮಿಯ ಅಧ್ಯಕ್ಷನಾಗಿದ್ದ. ಸುಬ್ಬರಾವ್ ಎಲ್ಲ ಪತ್ರಕರ್ತರಂತೆ ಉದ್ಯೋಗಕ್ಕಷ್ಟೇ ಅಂಟಿಕೊಂಡವನಲ್ಲ. ನಾನಾ ಬಗೆಯ ಚಟುವಟಿಕೆಗಳಲ್ಲಿ ತೊಡಗಿಕೊಳ್ಳುತ್ತಿದ್ದ. ರಾಜಕೀಯ ಕ್ಷೇತ್ರದಲ್ಲಿ ಎಷ್ಟು ನಂಟು ಬೆಳೆಸಿಕೊಂಡಿದ್ದನೋ ಅಷ್ಟೇ ನಂಟನ್ನು ಚಿತ್ರರಂಗದಲ್ಲೂ ಹೊಂದಿದ್ದ. ಅವನು ಪತ್ರಿಕಾ ವೃತ್ತಿ ಪ್ರಾರಂಭ ಮಾಡಿದ್ದೇ ಚಿತ್ರರಂಗದಿಂದ. ಮುಂಬೈನಿಂದ ಪ್ರಕಟವಾಗುತ್ತಿದ್ದ 'ಸ್ಕ್ರೀನ್' ವಾರಪತ್ರಿಕೆಯಲ್ಲೇ ಅವನ ಮೊದಲ ಉದ್ಯೋಗ. 'ಇಂಡಿಯನ್ ಎಕ್ಸ್‌ಪ್ರೆಸ್' ಬಿಟ್ಟಮೇಲೆ ಕೆಲಕಾಲ 'ಸಂಡೇ ಮಿಡ್ ಡೆ' ಪತ್ರಿಕೆಯಲ್ಲಿದ್ದು, ನಂತರ 'ಸಂಯುಕ್ತ ಕರ್ನಾಟಕ' ಪತ್ರಿಕೆಯ ಸಂಪಾದಕನಾಗಿ ದುಡಿದ. ಕೊನೆಯ ದಿನಗಳಲ್ಲಿ ಆ ಪತ್ರಿಕೆಯ ಅಂಕಣಕಾರನಾಗಿದ್ದ.

ಪತ್ರಕರ್ತ ಸುಬ್ಬರಾವ್‌ನ ಇನ್ನೊಂದು ಮುಖ ಸಾಹಸ ಪ್ರವೃತ್ತಿ. ಸುಮ್ಮನೆ ಕೂಡುತ್ತಿರಲಿಲ್ಲ. ಏನಾದರೂ ಮಾಡಬೇಕೆಂಬ ಚಡಪಡಿಕೆ. ಯಾವಾಗಲೂ ಸ್ವಂತವಾಗಿ ಪತ್ರಿಕೆ ಮಾಡಬೇಕೆಂಬ ಹಂಬಲ. ಇನ್ನೊಬ್ಬರಿಗಾಗಿ ದುಡಿಯುವುದಕ್ಕಿಂತ ಸ್ವಂತಕ್ಕಾಗಿ ದುಡಿಯುವ ಕನಸು ಕಾಣುತ್ತಿದ್ದ. ಅವನ ಈ ಕನಸುಗಾರಿಕೆಯಲ್ಲಿ ನಾನೂ ಭಾಗಿ. ರಾಜಕೀಯ ಪಕ್ಷವೊಂದರ, ಅದರಲ್ಲೂ ಕಮ್ಯುನಿಸ್ಟ್ ಪತ್ರಿಕೆಯ ಸಂಪಾದಕನಾಗಿದ್ದ ನನ್ನನ್ನು ಸಿನಿಮಾ ಪತ್ರಿಕಾರಂಗಕ್ಕೆ ಎಳೆದು ತಂದವನು ಸುಬ್ಬರಾವ್. ನಮ್ಮ ಕನಸಿನ ಕೂಸೇ ಅಂದಿನ ದಿನಗಳಲ್ಲಿ, ಅಂದರೆ ಅರವತ್ತು ಎಪ್ಪತ್ತರ ದಶಕದಲ್ಲಿ ಜನಪ್ರಿಯವಾಗಿದ್ದ ಸಿನಿಮಾ ಪತ್ರಿಕೆ 'ಮೇನಕಾ'. ಹೆಸರಿಗೆ ನಾನು ಸಂಪಾದಕನಾಗಿದ್ದರೂ ನಿಜವಾದ ಸಂಪಾದಕ ಸುಬ್ಬರಾವ್. 'ವಿಶ್ವಾಮಿತ್ರ' ಹೆಸರಿನಲ್ಲಿ ಬರೆಯುತ್ತಿದ್ದ ಅವನು 'ಮೇನಕಾ'ಗೆ ವಿಶ್ವಾಮಿತ್ರನೇ ಆಗಿದ್ದ. ಅವನ ಛಲದಿಂದಲೇ ಆ ಪತ್ರಿಕೆ ಏಳೆಂಟು ವರ್ಷ ಜೀವಂತವಾಗಿತ್ತು. ಈ ಪತ್ರಿಕೆ ಕಟ್ಟಿಕೊಂಡು ನಾವಿಬ್ಬರೂ ಅನುಭವಿಸಿದ ಕಷ್ಟನಷ್ಟಗಳು ಅವರ್ಣನೀಯ. ಅದೊಂದು ಬೇರೆಯೇ ಕತೆ.

ಸುಬ್ಬರಾವ್ ಕೈಗೊಂಡ ಇನ್ನೊಂದು ಸಾಹಸ ಎಂದರೆ 'ಬೆಳ್ಳಿ ಚುಕ್ಕಿ' ಎಂಬ ಸಿನಿಮಾ ವಾರ್ತೆಯ ಚಿತ್ರಾವಳಿ ಕ್ಯಾಸೆಟ್‌ಗಳ ತಯಾರಿಕೆ. ಇದು ಹೆಚ್ಚು ಕಾಲ ನಡೆಯಲಿಲ್ಲ. ಮತ್ತೆ ಸಿನಿಮಾ ಪತ್ರಿಕೆ ನಡೆಸುವ ಗೀಳು ಮಾತ್ರ ಹೋಗಲಿಲ್ಲ. ಬೇರೆಯವರ ನೆರವಿನಿಂದ 'ನಾವು ನೀವು' ಮತ್ತು 'ನಕ್ಷತ್ರ ಲೋಕ' ಪತ್ರಿಕೆಗಳನ್ನು ಪ್ರಾರಂಭಿಸಿದ. ಇವೂ ಕೂಡ ವಿಫಲವಾದವು. ನಂತರ ಎರಡು ಚಿತ್ರಗಳ ತಯಾರಿಕೆಗೂ ಕೈಹಾಕಿ ಕೈ ಸುಟ್ಟುಕೊಂಡ. ನಾನು ಬೆಂಗಳೂರಿಗೆ ಬಂದಮೇಲೆ ಏನೇನೋ ಯೋಜನೆಗಳನ್ನು ಹಾಕಿಕೊಂಡೆವು. ಆದರೆ ಅವು ಮೇಲೇಳಲೇ ಇಲ್ಲ. ಸುಬ್ಬರಾವ್ ಸ್ವಂತ ಬರಹ ಪ್ರಕಟಿಸಲೇ ಇಲ್ಲ. ಅವನು ತನ್ನ ಅನುಭವಗಳನ್ನು ದಾಖಲಿಸಿದ್ದರೆ ಚೆನ್ನಾಗಿರುತ್ತಿತ್ತು. ಆದರೆ ಅವನು ಸಂಪಾದಿಸಿದ ಸ್ಮರಣ ಸಂಚಿಕೆಗಳು ಬೇಕಾದಷ್ಟು. ಬೆಂಗಳೂರಿನಲ್ಲಿ ಫಿಲಂ ಸೊಸೈಟಿ ಚಳವಳಿ ಸ್ಥಾಪಕರಲ್ಲಿ ಅವನೂ ಒಬ್ಬ. ಸುಚಿತ್ರ ಫಿಲಂ ಸೊಸೈಟಿ ಮತ್ತು ಅಕಾಡೆಮಿ ಅವನ ಪರಿಶ್ರಮದ ಸಂಕೇತ. ಕೊನೆಯವರೆಗೂ ಅವನು ಅದರ ಅಧ್ಯಕ್ಷನಾಗಿದ್ದ. ಅವನು ಮಾಡಿದ ಒಂದು ದೊಡ್ಡ ಕೆಲಸ ಎಂದರೆ ಕನ್ನಡ ಚಿತ್ರರಂಗದ ಇತಿಹಾಸದ ಸಂಪಾದನೆ. ಎರಡು ಸಂಪುಟಗಳ ಈ ಬೃಹತ್ ಗ್ರಂಥದ ಮೂವರು ಸಂಪಾದಕರಲ್ಲಿ ಅವನೂ ಒಬ್ಬ.

ಜೀವನವಿಡೀ ದುಡಿದು ಗಳಿಸಿದ್ದು ಅಪಾರ ಮಿತ್ರವೃಂದವೇ ಹೊರತು ಬೇರೇನೂ ಇಲ್ಲ. ಅವನು ಗಳಿಸಿದ್ದಕ್ಕಿಂತ ಕಳೆದುಕೊಂಡದ್ದೇ ಹೆಚ್ಚು. ನವಕರ್ನಾಟಕ ಪ್ರಕಾಶನದೊಂದಿಗೆ ಒಳ್ಳೆಯ ಒಡನಾಟವಿತ್ತು ಅವನಿಗೆ. ಅಗಲಿದ ಮಿತ್ರನಿಗೆ ನನ್ನ ಹಾಗೂ 'ಹೊಸತು' ಪತ್ರಿಕೆಯ ನಮನ.

**ಸಿ. ಆರ್. ಕೃಷ್ಣರಾವ್**
'ಚೌಬೀನ',ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫

"ಏನಿದು ಪುಟ್ಟಿ? ಇಷ್ಟೊಂದು ಕಾಗದ ಹರಿದು ಹಾಕಿದಿಯಾ ? ''ಕಾಗದ ಇರೋದು ಈ ರೀತಿ ವೇಸ್ಟ್ ಮಾಡೋಕಾ ? ನಿನಗೆ ಪುಸ್ತಕ ಕೊಡಿಸೋದು ಓದೋಕೆ, ಬರೆಯೋಕೆ ಹೊರತು ಈ ರೀತಿ ಹರದ್, ಹರದ್‌ಹಾಕೋಕಲ್ಲ ತಿಳೀತಾ ?''

ಊಟ ಮುಗಿಸಿ ಅಮ್ಮ ಮಲಗಲು ಬಂದಾಗ ಪುಟ್ಟಿ ಕೇಳಿದಳು. ''ಅಮ್ಮಾ ಕಾಗದವನ್ನ ಯಾಕೆ ವೇಸ್ಟ್ ಮಾಡಬಾರದು'' ಸಂಜೆಯ ವಿಷಯವನ್ನು ಇನ್ನೂ ತಲೆಯಲ್ಲಿ ತುಂಬಿಕೊಂಡಿದ್ದ ಪುಟ್ಟಿಯತ್ತ ಪ್ರೀತಿಯಿಂದ ನೋಡಿದ ಅಮ್ಮ ''ಪುಟ್ಟಿ ಈ ಕಾಗದದ ತಯಾರಿಕೆಗೆ ಎಷ್ಟೊಂದು ವಸ್ತುಗಳು, ಎಷ್ಟೊಂದು ನೀರು, ಸಮಯ ಉಪಯೋಗವಾಗಿರುತ್ತೆ. ಕಾಗದ ಬಹಳ ಅಮೂಲ್ಯವಾದ ವಸ್ತು. ಅದನ್ನು ನೀನು ಸರಿಯಾಗಿ ಬಳಸದೆ ಇದ್ರೆ ಅದೆಲ್ಲವೂ ವ್ಯರ್ಥ ಅಲ್ವಾ ? ಅದಕ್ಕೆ ಬೈಯ್ದದ್ದು.'' ಅಮ್ಮ ಹೇಳಿದಾಗ ಪುಟ್ಟಿಗೇನೂ ಸಮಾಧಾನವಾಗಲಿಲ್ಲ. ಕಾಗದ ಎಷ್ಟು ಸುಲಭವಾಗಿ ಸಿಗುತ್ತೆ. ಅಮ್ಮ ಹೇಳಿದ್ದಲ್ಲ ಇದರ ತಯಾರಿಕೆಗೆ ಏನೇನೋ ಬೇಕಾಗುತ್ತೆ ಅಂತಾ. ಅದನ್ನೆಲ್ಲಾ ತಿಳಿಯಬೇಕು ಎಂದುಕೊಳ್ಳುತ್ತಾ ನಿದ್ದೆ ಮಾಡಿದಳು.

**ಕನಸಿನಲ್ಲಿ ಕಾಗದ**

'ಪುಟ್ಟೀ... ಪುಟ್ಟೀ!' ಸ್ವಲ್ಪ ಒರಟಾದ, ಆದರೆ ಪ್ರೀತಿಯಿಂದ ಕರೆದ ದನಿಯ ಕಡೆ ನೋಡಿದಳು ಪುಟ್ಟಿ, ಏನಾಶ್ಚರ್ಯ! ಸುಂದರವಾದ ಗುಲಾಬಿ ಬಣ್ಣದ ಕಾಗದವೊಂದು ಕೈ ಕಾಲುಗಳೊಂದಿಗೆ ಬಂದಿದೆ.

''ಯಾಕ್ ನಗ್ತೀಯ ಪುಟ್ಟಿ?'' ಕೇಳಿತು ಕಾಗದ.

''ಏನ್ ಮಾಡ್ಲಿ, ನಿನ್ನ ನೋಡಿದ್ರೆ ನಗು ಬರುತ್ತೆ. ನಿನ್ನ ಚಪ್ಪಟೆ ಮೈಗೆ ಕೈಕಾಲು ಊಹಾಂ.. ವಿಚಿತ್ರವಾಗಿದೆ ಆದ್ರೆ ನಿನ್ನ ಬಗ್ಗೆ ಮಾತ್ರ ಬ್ಯೂಟಿಫುಲ್'' ಎಂದಳು ಪುಟ್ಟಿ.

''ನನಗೆ ಗೊತ್ತು ನಿನಗೆ ಗುಲಾಬಿ ಬಣ್ಣ ಅಂದ್ರೆ ಪ್ರೀತಿ ಅಂತಾ. ಆದ್ರೆ ಬಣ್ಣ ನನಗೆ ಬರಬೇಕು ಅಂದ್ರೆ ಏನೆಲ್ಲಾ ಕೆಲಸ ಆಗಬೇಕು ಗೊತ್ತಾ? ಅದು ಅಷ್ಟು ಸುಲಭ ಅಲ್ಲ'' ಕಾಗದದ ಮಾತಿಗೆ ಪುಟ್ಟಿ ಎದ್ದು ಕುಳಿತಳು.

''ಹಾಂ ಪೇಪರಣ್ಣ, ನಿನ್ನ ಹತ್ರ ನಂಗೆ ತುಂಬಾ ಮಾತಾಡೋದಿದೆ ಬಾ ಕೂತ್ಕೊ'' ಅಂದಳು. ಕಾಗದ ಖುಷಿಯಿಂದ ಅವಳ ಪಕ್ಕ ಬೆಚ್ಚಗೆ ರಗ್ಗಿನಲ್ಲಿ ಸೇರಿ ಕುಳಿತುಕೊಂಡಿತು.

''ಈಗ ಹೇಳು ನಿನ್ನ ಕಥೇನಾ'' ಎಂದಳು ಪುಟ್ಟಿ.

''ನನ್ನ ಕಥೆ!'' ಆಶ್ಚರ್ಯದಿಂದ ನುಡಿಯಿತು ಕಾಗದ.

''ಹೂಂ, ನಿನ್ನ ಕಥೆ ನೀನು ಯಾರು ? ನೀನು ಎಲ್ಲಿ ಹುಟ್ಟಿದೆ ? ಎಲ್ಲಿಂದ ಬಂದೆ ಇದೆಲ್ಲಾ ನಿನ್ನ ಕಥೆ ತಾನೇ? ಅದೆಲ್ಲಾ ನನಗೆ ಬೇಕು.''



''ಆದ್ರೆ ಪುಟ್ಟಿ ಅದೆಲ್ಲಾ ನಂಗೆ ಗೊತ್ತಿಲ್ಲ. ನಾನು ಹೇಗೆ ಬಂದೆ ಅಂತಾ ಅಷ್ಟೇ ಗೊತ್ತು. ನಾನಂತೂ ಭದ್ರಾವತಿಯಲ್ಲಿಯ ಪೇಪರ್ ಕಾರ್ಖಾನೆಯಲ್ಲಿ ತಯಾರಾದೆ. ತಯಾರಾದರೂ ನಾನು ಸ್ವಲ್ಪ ಹಸಿ ಹಸಿಯಾಗಿದ್ದೆ. ನನ್ನನ್ನ ಬಿಸಿ ಗಾಳಿಯಲ್ಲಿ ಹಾಯಿಸಿ ಒಣಗಿಸಿ ಗರಿ ಗರಿಯಾಗುವಂತೆ ಮಾಡಿದ್ರು, ಅಷ್ಟು ನನಗೆ ನೆನಪಿದೆ. ನಾನು ನಿನ್ನ ಸುಂದರವಾದ ಲೆಟರ್ ಪ್ಯಾಡ್‌ನಲ್ಲಿ ಸೇರಿಕೊಂಡಾಗ ನಿನ್ನ ಪುಟ್ಟ ಕೈಯಿಂದ ನನ್ನ ನಯವಾದ ಮೈ ಮೇಲೆ ಏನು ಬರೀತೀಯಾ ಅಂತಾ ಕಾಯ್ತಾ ಇದ್ದೆ.''

''ಹೌದಾ !'' ಖುಷಿಯಿಂದ ಕಣ್ಣರಳಿಸಿದಳು ಪುಟ್ಟಿ.

''ಹೂಂ, ಆದ್ರೆ ನೀನೇನು ಮಾಡ್ದೆ ಪುಟ್ಟಿ, ಏನೋ ಬರೆಯೋಕೆ ಅಂಥಾ ಶುರು ಮಾಡಿ ಒಂದು ಸಾಲು ಬರೆದು ಹರಿದು ಬಿಸಾಡಿದೆ'' ''ನಿನ್ನೆ ನೀನು ಹರಿದು ಬಿಸಾಡಿದಾಗ ನಾನು ನಿನ್ನ ಮಂಚದ ಕೆಳಗೆ ಹೋಗಿ ಬಿದ್ದೆ. ಇಲ್ಲಾಂದ್ರೆ ಅಮ್ಮ ಗುಡಿಸಿದಾಗ ನಾನು ಕಸದ ಬುಟ್ಟಿ ಸೇರ್ತಿದ್ದೆ. ನನ್ನ ಸುಂದರವಾದ ಈ ಗುಲಾಬಿ ಮೈಯೆಲ್ಲಾ ಕೊಳಕಾಗಿ ಬಿಡ್ತಾ ಇತ್ತು.''

''ಓಹೋ ಸ್ವಾರಿ. ನಂಗೆ ಗೊತ್ತಾಗಲಿಲ್ಲ.''

''ಹೂಂ, ಅದೆಲ್ಲಾ ಸರಿ ಪೇಪರ್, ನಿನ್ನನ್ನು ಮೊಟ್ಟ ಮೊದಲ ಬಾರಿಗೆ ಯಾರು ತಯಾರು ಮಾಡಿದ್ರು ?''

''ಓಹೋ ಅದೊಂದು ದೊಡ್ಡ ಕಥೆ ಪುಟ್ಟಿ. ಚೀನೀಯರು ಮೊಟ್ಟ ಮೊದಲ ಬಾರಿಗೆ ನಮ್ಮನ್ನು ತಯಾರು ಮಾಡಿದ್ರು ಅಂತಾರೆ, ಆದ್ರೆ ಅದರ ಬಗ್ಗೆ ಹೆಚ್ಚು ವಿಷಯ ನನಗೆ ಗೊತ್ತಿಲ್ಲ'' – ಪೇಪರ್ ನುಡಿದಾಗ ಪುಟ್ಟಿಯ ಮುಖ ಪೆಚ್ಚಾಯಿತು.

**ಕಾಗದ ಹುಟ್ಟಿತು**

''ಅಮ್ಮಾ ನಾವೆಲ್ಲಿಗೆ ಹೋಗ್ತಾ ಇದ್ದೀವಿ ?'' ಮುಖಕ್ಕೆ ಪೌಡರ್ ಲೇಪಿಸ್ತಾ ಇದ್ದ ಅಮ್ಮನನ್ನ ಪ್ರಶ್ನಿಸಿದಳು ಪುಟ್ಟಿ.



# ಕಾಗದದ ಕಥೆ

**ಪುಟ್ಟಿಯ ತಲೆಯ ತುಂಬ 'ಪಪೈರಸ್'ನ ಕಥೆಯೇ ತುಂಬಿಕೊಂಡಿತ್ತು. ರಾತ್ರಿ ಊಟಕ್ಕೆ ಕುಳಿತಾಗ ಆ ವಿಷಯವನ್ನು ತಂದೆಯ ಹತ್ತಿರ ಚರ್ಚೆ ಮಾಡಿದಳು. ''ಅಪ್ಪಾ, ಗಿಡವೊಂದರ ಕಾಂಡವನ್ನ ಸೀಳಿ ಸೀಳಿ ಕಾಗದ ತಯಾರಿಸೋದು ಎಷ್ಟು ಕಷ್ಟವಾಗಿರಬೇಕಲ್ವೆ?'' ಎಂದು ಹೇಳಿದಾಗ ತಂದೆ ಅದಕ್ಕೆ ಸಂಬಂಧಿಸಿದ ಕಥೆಯೊಂದನ್ನು ಹೇಳಿದರು.**

**ಸುಮಂಗಲಾ. ಎಸ್. ಮುಮ್ಮಿಗಟ್ಟಿ**

''ರೇಶ್ಮಾ ಆಂಟಿ ಮನೆಗೆ'' ತಾಯಿ ಉತ್ತರಿಸಿದಳು.

''ಯಾರಮ್ಮ ರೇಶ್ಮಾ ಆಂಟಿ ಅಂದ್ರೆ? ಇದಕ್ಕೆ ಮುಂಚೆ ನಾನವರನ್ನ ನೋಡೀದೀನಾ ?'' ಮತ್ತೆ ಪುಟ್ಟಿಯ ಪ್ರಶ್ನೆ.

''ಇಲ್ಲ ಪುಟ್ಟಿ ನೀನವರನ್ನ ನೋಡಿಲ್ಲ, ಅವಳು ನನ್ನ ಗೆಳತಿ. ಈ ಊರಿಗೆ ಇತ್ತೀಚೆಗೆ ಬಂದಿದಾಳೆ'' ಅಮ್ಮನ ಉತ್ತರ.

ರೇಶ್ಮಾ ಆಂಟಿಯ ಮನೆಯ ಗೇಟ್ ತೆಗೆದು, ಉದ್ದನೆಯ ಕಾಲು ಹಾದಿಯನ್ನ ದಾಟಿಕೊಂಡು ಒಳಹೋದಾಗ ಆಂಟಿ ಕಾಯ್ತಾ ಇದ್ರು. ''ಬಾ ಪುಟ್ಟಿ ಹೇಗಿದ್ದೀ ? ಬಾರೆ ಸುಶೀಲಾ ಇಷ್ಟು ದಿನ ಬೇಕಾಯ್ತು ನೀನು ನಮ್ ಮನೆಗೆ ಬರೋದಿಕ್ಕೆ. ಅಂತೂ ಇಂತೂ ಮಗಳಿಗೋಸ್ಕರವಾಗಿಯಾದರೂ ಬಂದ್ಯಲ್ಲ'' ಎನ್ನುತ್ತಾ ಒಳಗೆ ಕರೆದೊಯ್ದರು.

ಒಳಗಡೆಯ ಹಾಲ್‌ನಲ್ಲಿ ಕುಳಿತಾಗ ಸುತ್ತಲೂ ಕಣ್ಣು ಹಾಯಿಸಿದಳು ಪುಟ್ಟಿ. ''ಅಬ್ಬಾ ! ಎಲ್ಲಿ ನೋಡಿದರಲ್ಲಿ ಪುಸ್ತಕಗಳು. ಯಾರು ಈ ಆಂಟಿ ? ಇಷ್ಟೊಂದು ಪುಸ್ತಕ ಯಾಕೆ ಇಟ್ಕೊಂಡಿದಾರೆ ? ಇವರ ಮನೆಯೇ ಒಂದು ಲೈಬ್ರರಿ ಇದ್ದ ಹಾಗಿದೆ'' ಎಂದುಕೊಂಡು ಮೆಲ್ಲನೆ ಕುಳಿತಲ್ಲಿಂದ ಎದ್ದಳು. ಬಹಳ ದಿನಗಳ ನಂತರ ಭೇಟಿಯಾದ ಗೆಳತಿಯರು ಮಾತಿನಲ್ಲಿ ಇವಳತ್ತ ಗಮನಕೊಡಲೇ ಇಲ್ಲ.

ಪುಟ್ಟಿ ಹಾಲ್ ದಾಟಿ ಪಕ್ಕದ ಕೋಣೆಗೆ ಕಾಲಿಟ್ಟಳು. ಅಲ್ಲಿಯೂ ಟೇಬಲ್ ಮೇಲೆ, ಗೋಡೆಯ ರ್‍ಯಾಕ್‌ನಲ್ಲಿ ಪುಸ್ತಕಗಳೇ ಪುಸ್ತಕಗಳು. ಆದ್ರೆ ಮಂಚದ ಮೇಲಿದ್ದ ಬಣ್ಣ ಬಣ್ಣದ ಚಿತ್ರವುಳ್ಳ ಪುಸ್ತಕ ಪುಟ್ಟಿಯ ಗಮನ ಸೆಳೆಯಿತು. ಮೆಲ್ಲನೇ ಪುಟ ತಿರುವಿದಳು. ಅದರಲ್ಲಿ ಹಳೆಯ ಕಾಲದ ಚಿತ್ರದಂತಹ ಏನೋ ಚಿತ್ರಗಳಿದ್ದವು. ಅದರ ಕೆಳಗಿದ್ದ ಬರಹವನ್ನು ಓದಿದಳು ಪುಟ್ಟಿ. ಕಾಗದ ಇಲ್ಲದ ಕಾಲದಲ್ಲಿ ಜನ ಹೀಗೆ ಮಣ್ಣಿನ ಹಾಗೂ ಕಲ್ಲಿನ ಶಾಸನಗಳನ್ನು ರಚಿಸುತ್ತಿದ್ದರು ಎಂದಿತ್ತು. ಓಹೋ ಕಾಗದ ಬರುವ ಮುಂಚೆಯೇ ಜನ ಬರೆಯುತ್ತಿದ್ದರು ಎಂದುಕೊಂಡು ಮುಂದಿನ ಪುಟ ತೆರೆದಾಗ, ಇದು ವಿಶ್ವದ ಮೊಟ್ಟ ಮೊದಲ ಪುಸ್ತಕ ಎಂದು ಬರೆದಿದ್ದರು. ಪುಟ್ಟಿಯ ಮುಖ ಅರಳಿತು. ಹಾಗಾದ್ರೆ ಆಂಟಿಗೆ ಕಾಗದದ ಕಥೆ ಗೊತ್ತು– ಹೊರಗೋಡಿದಳು ಪುಟ್ಟಿ.

ಗೆಳತಿಯರಿಬ್ಬರೂ ಇನ್ನೂ ಮಾತಾಡ್ತಾ ಇದ್ರು. ಅವರನ್ನೇ ನೋಡ್ತಾ ಕುಳಿತಳು. ಅಷ್ಟರಲ್ಲಿ ಯಾರೋ ಒಬ್ಬ ಅಕ್ಕ ಚಹ ಬಿಸ್ಕೆಟ್ ತಂದಿಟ್ಟಳು. ಈಗ ಅವರ ಗಮನ ಪುಟ್ಟಿಯ ಕಡೆಗೆ ಹೋಯಿತು. ''ಪುಟ್ಟಿಗೆ ಹಾಲು ತಂದು ಕೊಡು ಲಕ್ಷ್ಮೀ'' ಎಂದರು ಆಂಟಿ. ತಗೋ ಪುಟ್ಟಿ 'ಬಿಸ್ಕೆಟ್' ಎಂದರು.

''ಆಂಟಿ ನಿಮಗೆ ಕಾಗದದ ಕಥೆ ಗೊತ್ತಾ?'' ಅವಕಾಶ ಬಳಸಿಕೊಂಡಳು ಪುಟ್ಟಿ.

''ಓಹೋ ! ರೇಶ್ಮಾ, ನಾನು ಬಂದ ಕೆಲಸವನ್ನೇ ಮರೆತಿದ್ದೆ. ನಾನಿವಳನ್ನ ನಿನ್ನ ಹತ್ರ ಕರ್‍ಕೊಂಡು ಬಂದಿದ್ದು ಪೇಪರ್ ಟೆಕ್ನಾಲಜಿಯಲ್ಲಿ ಸಂಶೋಧನೆ ಮಾಡಿರೋ ನಿನ್ನಿಂದ ಇವಳಿಗೆ ಪೇಪರ್ ಕಥೆ ಹೇಳಿಸೋಕೆ. ಅವಳಿಗೆ ಕಾಗದದ ಬಗ್ಗೆ ತುಂಬಾ ಕುತೂಹಲ'' ಎಂದರು ಅಮ್ಮ.

''ಹೌದಾ ಪುಟ್ಟಿ, ಕಾಗದದ ಬಗ್ಗೆ ನಿನಗೇನು ತಿಳ್ಕೋಬೇಕು ?'' ಎಂದರು ಆಂಟಿ.

''ಆಂಟಿ, ನಾನೀಗ ಆ ಹೋಗೇನಲ್ಲಿ ಒಂದು ಪುಸ್ತಕ ನೋಡಿದೆ. ಅದರಲ್ಲಿ ಕಾಗದಕ್ಕೆ ಮುಂಚೆ ಹೇಗೆ ಬರೀತಿದ್ರು ಅಂತಿತ್ತು. ಆಮೇಲೆ ಒಂದು ಪುಸ್ತಕದ ಚಿತ್ರ ಇತ್ತು. ಅದಕ್ಕೆ ಇದು ವಿಶ್ವದ ಮೊದಲ ಪುಸ್ತಕ ಅಂತಾ ಸಹಾ ಇತ್ತು. ಹಾಗಾದ್ರೆ ಕಾಗದ ಯಾವಾಗ ಹುಟ್ಟಿತು ? ಅದನ್ನ ಯಾರು ಕಂಡು ಹಿಡಿದ್ರು ? ಅನ್ನೋ

## ಭಾಷೆಯೂ ಅಸ್ತ್ರವಾಗಿದೆ ಇಲ್ಲಿ

ಆಡುವ ಭಾಷೆಯೂ ರಾಜಕೀಯ ವಿಷಯವಾಗಿದೆ
ಗೂಂಡಾಗಳ ಕೈಯಲ್ಲಿ ಕೂಡುಗತ್ತಿಯಾಗಿದೆ.
ಗಾಂಧಿ, ಅಬ್ದುಲ್ ಗಫಾರ್, ಅಣ್ಣಾ ಹಜಾರೆಯವರನು
ಹಾದಿ ಬೀದಿಯಲ್ಲಿ ಅವಮಾನಿಸುತ್ತಿದ್ದಾರೆ
ಜೇಬುಗಳ್ಳರಿಗಿಲ್ಲಿ ತುಂಬು ಗೌರವದ ಧಿರಿಸು
ಒಳ್ಳೆಯವರಿಗಿಲ್ಲಿ ಕಾಲ ಎಲ್ಲಿದೆ ಹೇಳು !

ಗುಲಾಬಿ ಹೂವಿನ ತುಟಿಗಳ ಮೇಲೆಯೂ
ವಿಷದ ಛಾಯೆ, ದ್ವೇಷದ ಕಿಡಿಯಿದೆಯಲ್ಲ!
ಎಂತಹ ಮಂದಿರ, ಮಸೀದಿ, ಚರ್ಚು ಹೇಳು
ಎಲ್ಲವೂ ರಾಜಕೀಯ ದಂಧೆಯಾಗಿದೆಯಲ್ಲ!
ದೇವರು, ಧರ್ಮ, ರಾಜಕೀಯದ ದಾಳ
ಹಿಡಿದು ಹೆದರಿಸುವ ಅವರ ಪರಿ ನೋಡು!

ಹರಿತ ಆಯುಧ, ಜಾತಿ ಮಾರಕಾಸ್ತ್ರ ಹಿಡಿದು ಅವನು
ಭೂಪಟದ ತುಂಬಾ ಬಾಂಬಿನ ಬೀಜ ಬಿತ್ತಿದ್ದಾನೆ
ಹೂವು ಅರಳುವುದಿಲ್ಲ ಅವನ ಹೊಕ್ಕಳ ನಾಭಿಯಲ್ಲಿ
ಜೀವರಸ ಉಕ್ಕಿ ಹರಿಯುವುದಿಲ್ಲ ಹೃದಯದಲ್ಲಿ
ಪ್ರೀತಿ ಪುಟಿಯುವುದಿಲ್ಲ ನಾಲಿಗೆಯ ಮಾತುಗಳಲ್ಲಿ



ಹಸಿಯ ತೇವವಿಲ್ಲ, ಹಸಿರು ಚಿಗಿಯುವುದಿಲ್ಲ,
ಬರೀ ಗೋರಿಗಳ ಬಿಕ್ಕಳಿಕೆ ತುಂಬಿದೆಯಲ್ಲ.
ಭಾಷೆಯೂ ರಾಜಕೀಯದ ಅಸ್ತ್ರವಾಗಿದೆಯಲ್ಲ!

**ಡಾ|| ಕೆ. ಷರೀಫಾ**
ಕೃಷಿ ಮಾರುಕಟ್ಟೆ ನಿರ್ದೇಶಕ ಕಛೇರಿ
ಅಂಚೆ ಪೆಟ್ಟಿಗೆ ಸಂಖ್ಯೆ : ೫೫೦೯, ನಂ. ೧೬/೨,
ರಾಜಭವನ ರಸ್ತೆ, ಬೆಂಗಳೂರು - ೫೬೦ ೦೦೧

ವಿಷಯ ಬೇಕಿತ್ತು.'' ''ಭೇಷ್ ನೀನಾಗ್ಲೇ ಎಷ್ಟೊಂದು ವಿಷಯ ತಿಳ್ಕೊಂಡಿದೀಯಾ. ನಿಂಗೆ ಕಾಗದದ ಕಥೆಯನ್ನ ಪೂರ್ತಿ ಹೇಳ್ತೀನಿ'' ಅಂದ್ರು ಆಂಟಿ.

ಈಗ ಪುಟ್ಟಿ ಆಂಟಿಯ ಪಕ್ಕ ಕಾಲು ಮಡಿಸಿ ಕುಳಿತಿದ್ದಳು.

''ಇಲ್ನೋಡು ಪುಟ್ಟಿ, ಇಲ್ಲಿ ಕಾಣುವ ಈ ಚಿತ್ರ ಬೆಬಿಲೋನಿಯನ್ನರು ಮಣ್ಣಿನಿಂದ ಮಾಡಿದ ಶಾಸನದ್ದು. ಮಣ್ಣಿನಿಂದ ಇದನ್ನ ತಯಾರಿಸಿ ಅದರ ಮೇಲೆ ಮೊನಚಾದ ವಸ್ತುವಿನಿಂದ ಬರೆದು ನಂತರ ಅದನ್ನ ಇಟ್ಟಿಗೆಯನ್ನ ಸುಟ್ಟ ಹಾಗೆ ಸುಡುತ್ತಿದ್ದರು. ಇದರಿಂದ ಇವು ಬಹುಕಾಲ ಕೆಡದೇ ಉಳಿಯುತ್ತಿದ್ದವು. ಪುಟ್ಟಿ ಆ ಚಿತ್ರದತ್ತ ಬಗ್ಗಿ ಗಮನವಿಟ್ಟು ನೋಡಿದಳು. ಉಬ್ಬು ರಚನೆಯ ಮೇಲೆ ಗೀಟು ಗೀಟಿನ ಅಕ್ಷರಗಳು. ಆದ್ರೆ ಯಾವುದೂ ಅರ್ಥವಾಗಲಿಲ್ಲ. ಉಬ್ಬನ್ನು ಅನುಭವಿಸುವಂತೆ ಅದನ್ನು ಸವರಿದಳು. ''ಇದು ಮಣ್ಣಿಂದು. ಅಂದ್ರೆ ಬಿದ್ರೆ ಒಡೆದುಹೋಗ್ತಾ ಇತ್ತಾ?'' ಕೇಳಿದಳು ಪುಟ್ಟಿ.

''ಹೌದು ಇದರ ಸಂಗ್ರಹವೂ ಕಷ್ಟವಾಗ್ತಾ ಇತ್ತು. ಸಾಗಾಣಿಕೆ ಕೂಡ.''

''ಇವರೇ ಮೊಟ್ಟ ಮೊದಲು ಅಕ್ಷರ ಬರೆದವರಾ ಆಂಟಿ ?'' ಕೇಳಿದಳು ಪುಟ್ಟಿ.

''ಇಲ್ಲ ಪುಟ್ಟ, ಇವರಿಗಿಂತಲೂ ಮುಂಚೆ ಗುಹೆ ಗಳಲ್ಲಿ ವಾಸಿಸುತ್ತಿದ್ದ ಅಲೆಮಾರಿ ಮಾನವ ಗುಹೆಗಳ ಗೋಡೆಯ ಮೇಲೆ ಗೀಚಿದ. ಬರವಣಿಗೆಯನ್ನು ಮೊಟ್ಟ ಮೊದಲು ಅಭಿವೃದ್ಧಿಪಡಿಸಿದವರು ಸುಮೇರಿಯನ್ನರು.''

ಬೆಬಿಲೋನಿಯನ್ನರ ಮಣ್ಣಿನ ಶಾಸನ

ಈಜಿಪ್ಷಿಯನ್ನರು ಬಳಸಿದ ಪಾಪ್ಯಾರಸ್ ಗಿಡದ ತಿರುಳಿನ ಬರವಣಿಗೆ

ಮೇಣದ ಮೇಲೆ ಬರೆದ ಗ್ರೀಕರ ಶಾಸನ

ಕ್ರಿಸ್ತ ಪೂರ್ವ ೮ ಸಾವಿರದಿಂದ ೧೦ ಸಾವಿರ ವರ್ಷಗಳ ಅವಧಿಯ ಪರ್ಷಿಯನ್ನರ ಬರವಣಿಗೆಗಳು ಸಂಶೋಧನಕಾರರಿಗೆ ಸಿಕ್ಕಿವೆ. ಇದಾದ ನಂತರ ಕಲ್ಲು, ಲೋಹ, ದಂತಗಳ ಮೇಲೆ ಸಹ ಅಕ್ಷರಗಳನ್ನು ಬರೆದಿರೋದು ಕಂಡುಬರುತ್ತೆ. ಈಜಿಪ್ತಿನಲ್ಲಿ ಜನ ಜೇನು ಮೇಣದ ಹಲಗೆಗಳನ್ನ ತಯಾರಿಸಿ ಅದರ ಮೇಲೆ ಮೊನಚಾದ ವಸ್ತುವಿನಿಂದ ಬರೆದು ದಾಖಲೆ ಗಳನ್ನ ಇಟ್ಟಿರೋದು ಕಂಡುಬರುತ್ತೆ. ಇದಾದ ಮೇಲೆ ಪ್ರಾಣಿಗಳ ಚರ್ಮವನ್ನ ಶುಚಿಗೊಳಿಸಿ ಅದರ ಒಂದು ಬದಿಯಲ್ಲಿ ಮಾತ್ರ ಬರೆದಿರುವ ದಾಖಲೆಗಳೂ ದೊರೆತಿವೆ. ಆಂಟಿ ಹೇಳ್ತಾ ಹೋದ ಹಾಗೆ ಪುಟ್ಟಿ ಪುಸ್ತಕದ ಚಿತ್ರಗಳನ್ನ ನೋಡ್ತಾ ಇದ್ದಳು. ''ಆದ್ರೆ ಆಂಟಿ ಕಾಗದ ಅಂದ್ರೆ ನಾವೀಗ ಬಳಸ್ತೀವಲ್ಲ 'ಪೇಪರ್' ಇದನ್ನ ಯಾರು ತಯಾರು ಮಾಡಿದರು ?''

ಪುಟ್ಟಿ ಕೇಳಿದಾಗ ''ನಿಧಾನವಾಗಿ ಕೇಳಿಸ್ಕೋ ಪುಟ್ಟಿ, ರೇಷ್ಮಾ ಆಂಟಿ ಎಲ್ಲಾ ಹೇಳ್ತಾರೆ ಅವಸರ ಮಾಡಬೇಡ'' ಎಂದರು ಅಮ್ಮ.

''ಈ ಕಾಗದದ ತಯಾರಿಕೆಯ ಕೀರ್ತಿ ಚೀಣಿ ಯರಿಗೇ ಸಲ್ಲುತ್ತೆ. ಸುಮಾರು ೨೦೦೦ ವರ್ಷಗಳ ಹಿಂದೆ ಚೀನಾದಲ್ಲಿ ಕಾಗದ ತಯಾರಿಸಿದ ದಾಖಲೆ ಗಳಿವೆ. ಆದ್ರೆ ಇದಕ್ಕೂ ಮುಂಚೆ ನೀನು ಪಪೈರಸ್ ಬಗ್ಗೆ ತಿಳ್ಕೋಬೇಕು'' ರೇಶ್ಮಾ ಆಂಟಿ ಹಾಗೆ ಹೇಳಿ ಮತ್ತೆ ಪುಸ್ತಕದ ಪುಟಗಳನ್ನ ತಿರುವಿದರು.

''ಪಪೈರಸ್''! ಏನಾಂಟೀ ಹಾಗಂದ್ರೆ ? ಕೇಳಿದಳು ಪುಟ್ಟಿ.

''ಹೇಳ್ತೀನಿ ಅದಕ್ಕೆ ಮುಂಚೆ ಈ ಚಿತ್ರ ನೋಡು'' ತೋರಿಸಿದರು ರೇಶ್ಮಾ ಆಂಟಿ.

**ಪಪೈರಸ್ ಗಿಡಗಳು ಪ್ರಪಂಚದ ಬೇರೆ ಬೇರೆ ಭಾಗಗಳಲ್ಲಿ**

ಆಸ್ಟ್ರೇಲಿಯಾದಲ್ಲಿ ಬೆಳೆಯುತ್ತಿರುವ ಪಪೈರಸ್

ಲಂಡನ್ನಿನ 'ಕಿವ್' ಗಾರ್ಡನ್‌ನಲ್ಲಿರುವ ಪಪೈರಸ್ ಗಿಡ

ಸಿಸಿಲಿಯಲ್ಲಿರುವ ಪಪೈರಸ್ ಗಿಡಗಳು

'ಪಪೈರಸ್' ಅನ್ನೋ ಈ ಗಿಡಗಳು ನೈಲ್ ನದಿಯ ಪ್ರದೇಶದಲ್ಲಿ ಹೇರಳವಾಗಿ ಬೆಳೀತಾ ಇದ್ದವು. ಇದು ಚೂಪಾದ ತ್ರಿಕೋನಾಕಾರದ ಎಲೆಗಳನ್ನು ಹೊಂದಿದ್ದ ಎತ್ತರವಾಗಿ ಬೆಳೀತಾ ಇದ್ದಂತಹ ಒಂದು ಸಸ್ಯ. ಪೇಪರ್ ಅನ್ನುವ ಪದದ ಬಳಕೆ ಬಂದದ್ದೇ ಈ 'ಪಪೈರಸ್' ಗಿಡದಿಂದ. ಆಂಟಿ ಹೇಳಿದಾಗ ಪುಟ್ಟಿಗೆ ಇನ್ನೂ ಆಶ್ಚರ್ಯ.

''ಅಂದ್ರೆ ಆಂಟಿ, ಈ ಗಿಡದಿಂದ ಪೇಪರ್ ತಯಾರ್ ಮಾಡ್ತಾ ಇದ್ರಾ ?'' ಪ್ರಶ್ನೆ ಕೇಳಿಯೇ ಬಿಟ್ಟಳು.

''ಇಲ್ಲ ಪುಟ್ಟಿ, ಪೇಪರ್ ತಯಾರು ಮಾಡಲಿಲ್ಲ. ಆದರೆ ಅಂತಹದೇ ದಪ್ಪದಾದ ವಸ್ತುವನ್ನು ಈ ಗಿಡದ ಕಾಂಡದಿಂದ ತಯಾರಿಸ್ತಾ ಇದ್ರು. ನೈಲ್ ನದಿಯ ಬಯಲು ಪ್ರದೇಶದಲ್ಲಿ ಇದು ೫ರಿಂದ ೯ ಅಡಿಗಳಷ್ಟು ಎತ್ತರದ ವರೆಗೆ ಬೆಳೀತಾ ಇತ್ತು. ಇದನ್ನ 'ಬಿಬಿಲೋಸ್' ಅಂತ ಸಹ ಕರೀತಾ ಇದ್ರು. ಇದೊಂದು ನಗರದ ಹೆಸರು. ಈಗ ಇಂಗ್ಲಿಷ್‌ನಲ್ಲಿ ಬಿಬಿಲೋಗ್ರಫಿ ಅನ್ನೋ ಪದದ ಬಳಕೆ ಬಂದದ್ದು ಸಹ ಈ ಬಿಬಿಲೋಸ್ ಶಬ್ದದಿಂದಲೇ !''



ಪಪೈರಸ್ ಟ್ರೀ

''ಆಂಟಿ ಈ ಗಿಡದ ಕಾಂಡದಿಂದ ಪೇಪರ್‌ನಂತಹ ವಸ್ತುವನ್ನೆ ಅವರು ಹ್ಯಾಗೆ ತಯಾರಿಸ್ತಾ ಇದ್ರು'' ?

ಅವಳ ಆಸಕ್ತಿಯನ್ನು ಗಮನಿಸಿದ ರೇಶ್ಮಾ ಆಂಟಿ 'ಪಪೈರಸ್'ನ ತಯಾರಿಕೆಯ ವಿಧಾನವನ್ನು ಪುಟ್ಟಿಗೆ ತಿಳಿಸಲು ಮುಂದಾದರು. ''ಮೊದಲು ಕಾಂಡದ ತೊಗಟೆಯನ್ನು ಹೆರೆದು ತೆಗೆದು ಬಿಡ್ತಾ ಇದ್ರು. ಆಮೇಲೆ ಒಳಗಿನ ಅಂಟಾದ ಕಾಂಡವನ್ನ ಚೂಪಾದ ಸೂಜಿಯಿಂದ ಸೀಳಿ ನಾರಿನಂತಹ ಪಟ್ಟಿಗಳನ್ನ ತೆಗೀತಾ ಇದ್ರು. ಎಷ್ಟು ಸಾಧ್ಯವೋ ಅಷ್ಟು ಅಗಲದ ಪಟ್ಟಿಗಳನ್ನ ತೆಗೆಯೋ ಪ್ರಯತ್ನ ಮಾಡ್ತಾ ಇದ್ರು. ಆನಂತರ ಇವನ್ನ ಒಂದರ ಅಂಚು ಇನ್ನೊಂದರ ಮೇಲಿರುವ ಹಾಗೆ ಜೋಡಿಸಿಟ್ಟು ಒಂದಾದ ಒತ್ತಡವನ್ನು ಹೇರಿ ಬಿಸಿಲಿನಲ್ಲಿ ಒಣಗಿಸ್ತಾ ಇದ್ರು. ಅದಾದ ಮೇಲೆ ಗುಂಡಾದ ಕಲ್ಲು ಅಥವಾ ಸಾಗರದ ಚಿಪ್ಪುಗಳ ಸಹಾಯದಿಂದ ಅದರ ಮೇಲ್ಮೈಯನ್ನು ಉಜ್ಜಿ ನಯಗೊಳಿಸ್ತಾ ಇದ್ರು. ಇದರ ಎರಡೂ ತುದಿಗಳಲ್ಲಿ ಮತ್ತೊಂದು ಪಟ್ಟಿಯನ್ನ ಅಡ್ಡಲಾಗಿ ಇಟ್ಟು ಒಣಗಿಸ್ತಾ ಇದ್ದದ್ರಿಂದ ಅವು ಬಿಚ್ಚಿಕೊಳ್ತಾ ಇರಲಿಲ್ಲ. ನಯಗೊಳಿಸಿದ ನಂತರ ಈ ದಪ್ಪನೆಯ ಪಟ್ಟಿ ಉಪಯೋಗಕ್ಕೆ ಸಿದ್ಧವಾಗ್ತಾ ಇದ್ದು, ಸಾಮಾನ್ಯವಾಗಿ ಇದನ್ನು ನಾರಿನ ಎಳೆಗಳ ಗುಂಟ ಬರೆಯುವ ಹಾಗೆ ಬಳಸ್ತಾ ಇದ್ರು.''

''ಅಬ್ಬಬ್ಬಾ ! ಎಷ್ಟು ಕಷ್ಟ ಅಲ್ವ ? ಈಗ ಅಂತಹ ದಾಖಲೆಗಳೇನಾದ್ರೂ ಸಿಕ್ಕಿವೆಯಾ ರೇಶ್ಮಾ ? ಈ ಬಾರಿ ಪ್ರಶ್ನೆ ಕೇಳಿದ್ದು ಪುಟ್ಟಿಯ ಅಮ್ಮ.

''ಹಾಂ, ಸಿಕ್ಕಿದೆ 'ದ ಥೇಬನ್ ಬುಕ್ ಆಫ್ ಡೆಡ್' ಅನ್ನೋ ಹೆಸರಿನ ೧೨೨ ಅಡಿಗಳ ೨೧ ೧/೨ ಇಂಚು ಉದ್ದದ ಸುರಳಿಯ ರೂಪದ ಪುಸ್ತಕ ಸಿಕ್ಕಿದೆ. ಇದನ್ನ ಬ್ರಿಟಿಷ್ ಮ್ಯೂಸಿಯಂನಲ್ಲಿ ಇಟ್ಟಿದ್ದಾರೆ.''

''ಪಪೈರಸ್'' ಮೇಲಿನ ಬರವಣಿಗೆ

ಈಜಿಪ್ತಿನ ''ದ ಥೇಬನ್ ಬುಕ್ ಆಫ್ ಡೆಡ್'' ಪುಸ್ತಕದ ಒಂದು ಭಾಗ.

''ಆಂಟಿ ಸುರಳಿಯಾಗಿತ್ತು ಅಂದ್ರೆ ಮಸಾಲೆ ದೋಸೆ ಥರಾನಾ ?''

''ಹಾಂ ಪುಟ್ಟಿ, ಈ ಸುರುಳಿಯುದ್ದಕ್ಕೂ ಬರವಣಿಗೆ ಇರ್ತಾ ಇತ್ತು. ಯಾಕೆ ಅದು ಸುರುಳಿಯಾಗಿತ್ತು ಅಂದ್ರೆ ''ಪಪೈರಸ್'' ಮಡಸಿದ್ರೆ ಮಡಚಿದ ಕಡೆ ಮುರಿದು ಬಿಡ್ತಾ ಇತ್ತು. ಆದ್ರಿಂದ ಅದನ್ನ ಸುರುಳಿ ಸುತ್ತೀನೇ ಇಡಬೇಕಾಗಿತ್ತು.''

''ಆದ್ರೆ ರೇಶ್ಮಾ, ಅಷ್ಟು ಪಪೈರಸ್ ಗಿಡಗಳಿದ್ವಾ ? ಮತ್ತೆ ಇದು ಬಾಳಿಕೆ ಬರ್ತಾ ಇತ್ತಾ ? ಮತ್ತೆ ಕೇಳಿದ್ದು ಅಮ್ಮ. ನೈಲ್ ನದಿಯ ಬಯಲಿನಲ್ಲಿ ಬಹಳಷ್ಟು ಪ್ರದೇಶ ಪಪೈರಸ್ ಗಿಡಗಳಿಂದ ಆವರಿಸಿದ್ದರಿಂದ ಇದು ಬಹಳ ಅಗ್ಗವಾಗಿ ದೊರೀತಾ ಇತ್ತು. ಆಮೇಲೆ ಬಾಳಿಕೆ ಬಗ್ಗೆ ಕೇಳ್ದೆ ಅಲ್ವಾ ? ಇದು ತೇವಾಂಶ ಮತ್ತು ಬಿಸಿಲಿಗೆ ಹಾಳಾಗ್ತಾ ಇತ್ತು. ಅಷ್ಟೇ ಅಲ್ಲ, ಬಹಳ ಒಳ್ಳೆಯ ಗುಣಮಟ್ಟದ್ದಲ್ಲದೇ ಹೋದ್ರೆ ಅದರ ಮೇಲ್ಮೈ ಒರಟಾಗಿದ್ದು ಬರವಣಿಗೆಗೆ ಸೂಕ್ತವಾಗಿರ್ತಿರಲಿಲ್ಲ.

''ಆಂಟಿ, ಅಂದ್ರೆ ಈ 'ಪಪೈರಸ್' ಮೊದಲ

ಪೇಪರ್ ಅಂದ್ಕೋಬಹುದಾ?'' ಪುಟ್ಟಿಯ ಪ್ರಶ್ನೆ ತೂರಿ ಬಂತು.

''ಹಾಂ, ಪುಟ್ಟಿ ಒಂದು ರೀತಿಯಲ್ಲಿ ಇದು ಕಾಗದದ ತರಹವೇ ಇದ್ದದ್ದರಿಂದ ಇದನ್ನೆ ಕಾಗದದ ಪೂರ್ವಜ ಅನ್ನಬಹುದು. ಅದು ನಿಜವಾದ ಕಾಗದ ಆಗಿರಲಿಲ್ಲ ಆದ್ರೆ ಕಾಗದದಂತಹ ವಸ್ತುವಾಗಿತ್ತು. ಕಾಗದಕ್ಕೆ ಒಂದು ಕಲ್ಪನೆ ರೂಪುಗೊಂಡಿತು ಅಂತಾನೂ ಹೇಳಬಹುದು'' ಹೇಳಿದರು ಆಂಟಿ.

''ಓಹೋ! ಹಾಗಾದ್ರೆ ಕಾಗದ ಹುಟ್ಟಿದ್ದು ಸುಮಾರು ಕ್ರಿ.ಪೂ. ೨೦೦೦ದ ಹೊತ್ತಿಗೇನಾ ಆಂಟಿ?''

''ಈಜಿಪ್ತಿನ ಸ್ತೂಪ ಒಂದರಲ್ಲಿ ಸಿಕ್ಕಿರೋ ಪಪ್ಪೈರಸ್‌ನಲ್ಲಿ ಇರೋ ದಾಖಲೆ ಸುಮಾರು ಕ್ರಿ.ಪೂ. ೩೫೦೦ರದ್ದು ಅಂತಾ ಸಂಶೋಧಕರು ಭಾವಿಸ್ತಾರೆ'' ರೇಷ್ಮಾ ಹೇಳಿದ್ರು.

ಈಗ ಅಮ್ಮನ ಗಮನ ಹೋದದ್ದು ಗಡಿಯಾರದ ಕಡೆಗೆ.

''ಪುಟ್ಟಿ, ಟೈಮ್ ಆಯ್ತು ನಡಿಯಮ್ಮ ಮತ್ತೆ ಬರೋಣ.''

ಒಲ್ಲದ ಮನಸ್ಸಿನಿಂದಲೇ ತೊಡೆಯ ಮೇಲಿದ್ದ ಪುಸ್ತಕವನ್ನು ಬದಿಗೆತ್ತಿಟ್ಟು ಎದ್ದಳು ಪುಟ್ಟಿ. ಅಮ್ಮನ ಕೈ ಹಿಡಿದು ಮನೆಗೆ ಹೋಗಲು ಹೊರಟಳು.

**ಕಾಗದ ತಯಾರಾಯಿತು**

ಅಂದೆಲ್ಲ ಪುಟ್ಟಿಯ ತಲೆಯ ತುಂಬ 'ಪಪ್ಪೈರಸ್'ನ ಕಥೆಯೇ ತುಂಬಿಕೊಂಡಿತ್ತು. ರಾತ್ರಿ ಊಟಕ್ಕೆ ಕುಳಿತಾಗ ಆ ವಿಷಯವನ್ನು ತಂದೆಯ ಹತ್ತಿರ ಚರ್ಚೆ ಮಾಡಿದಳು ಪುಟ್ಟಿ. ''ಅಪ್ಪಾ, ಗಿಡವೊಂದರ ಕಾಂಡವನ್ನ ಸೀಳಿ ಸೀಳಿ ಕಾಗದ ತಯಾರಿಸೋದು ಎಷ್ಟು ಕಷ್ಟವಾಗಿರಬೇಕಲ್ವೆ?'' ಎಂದು ಹೇಳಿದಾಗ ತಂದೆ ಅದಕ್ಕೆ ಸಂಬಂಧಿಸಿದ ಕಥೆಯೊಂದನ್ನು ಹೇಳಿದರು:

''ಹಿಂದೆ ಮೈಸಿಯಾದ 'ಯೂಮೆಸ್' ರಾಜ ಅಂದಿನ ಅಲೆಕ್ಸಾಂಡ್ರಿಯಾದಲ್ಲಿ ಇದ್ದಂತಹ ಗ್ರಂಥಾಲಯವನ್ನ ತನ್ನ ರಾಜ್ಯದಲ್ಲಿಯೂ ಸ್ಥಾಪಿಸಲು ಉದ್ದೇಶಿಸಿದ. ಅದಕ್ಕಾಗಿ ಅವನು 'ಟಾಲೆಮಿ ಎಫಿಫೆನಸ್' ಎಂಬ ಹಿರಿಯ ವಿಜ್ಞಾನಿಯನ್ನು ತನ್ನ ದೇಶಕ್ಕೆ ಕಳಿಸಿಕೊಡುವಂತೆ ಕೇಳಿದ. ಆದರೆ ಅದರ ರಫ್ತು ಸಾಧ್ಯವಿಲ್ಲದೇ ಹೋದಾಗ ಅದಕ್ಕಾಗಿ ಅವನು ಹೊಸ ಕಾಗದದಂತಹ ವಸ್ತುವಿನ ತಯಾರಿಕೆಗೆ ಮುಂದಾದ. ಈ ವಿಧಾನದಲ್ಲಿ ಮೇಕೆ, ಹಂದಿ, ಕರು, ಕುರಿ ಮುಂತಾದ ಪ್ರಾಣಿಗಳ ಚರ್ಮವನ್ನು ಹದ ಮಾಡಿ ಬರೆಯೋದಕ್ಕೆ ಬಳಸಲು ಪ್ರಾರಂಭಿಸಿದರು. ಒಟ್ಟಾರೆಯಾಗಿ, ಈ ವಸ್ತುವನ್ನು 'ಚರ್ಮಾ ಪರ್‌ಗ್ಯಾಮಿನಾ' ಅಂತಾ ಕರೀತಾ ಇದ್ರು. ''ಅಪ್ಪಾ, ಕಾಗದದ ಬಗ್ಗೆ ನಿಂಗೂ ಇಷ್ಟೊಂದು ವಿಷಯ ತಿಳಿದಿದೆ ಅನ್ನೋದು ನಂಗೊತ್ತೆ ಇರಲಿಲ್ಲ'' ಎಂದು ಸಂತೋಷದಿಂದ ನುಡಿದಳು ಪುಟ್ಟಿ.

''ಆದರೆ ಇವು ಯಾವುವೂ ನಿಜವಾದ ಕಾಗದ ವಾಗಿರಲಿಲ್ಲ. ಕಾಗದ ತಯಾರಿಕೆಗಾಗಿ ಹಲವಾರು ಪ್ರಯತ್ನಗಳು ನಡೀತಾನೇ ಇದ್ದವು. ಯಶಸ್ಸು ದೊರೆತದ್ದು ಚೀನೀಯರಿಗೆ.'' ಎಂದರು ಅಪ್ಪ.

''ಅಪ್ಪಾ ನಾವೀಗ ಬಳಸೋ ಕಾಗದ ಇದೆಯಲ್ಲಾ ಅದು ತಯಾರಾದದ್ದು ಯಾವಾಗ?'' ಕೈ ತೊಳೆದು ಅಪ್ಪನ ಜೊತೆಗೇ ಹೊರಬರುತ್ತಾ ಕೇಳಿದಳು ಪುಟ್ಟಿ.

''ಪಪ್ಪೈರಸ್‌ನ ಬಳಿಕ ಪ್ರಾರಂಭವಾದ ಸುಮಾರು ೩೦೦೦ ವರ್ಷಗಳವರೆಗೆ ಕಾಗದದ ತಯಾರಿಕೆಯಲ್ಲಿ ಅಂತಹ ಕ್ರಾಂತಿಕಾರಿ ಬದಲಾವಣೆಗಳೇನೂ ಆಗಲಿಲ್ಲ. ಚೀನಾದ ಐತಿಹಾಸಿಕ ದಾಖಲೆಯ ಪ್ರಕಾರ ಕ್ರಿಸ್ತ ಶಕ ೧೦೫ರಲ್ಲಿ ಮೊಟ್ಟಮೊದಲಿಗೆ ಕಾಗದ ತಯಾರಾಯಿತು'' ತಂದೆ ಹೇಳಿದಾಗ ಪುಟ್ಟಿ, ''ಹೌದಪ್ಪ ಯಾರು ತಯಾರು ಮಾಡಿದರು? ಹೇಗೆ ತಯಾರು ಮಾಡಿದರು?'' ಎಂದು ಕೇಳಿದಳು.

''ಪೂರ್ವ ಚೈನಾದ 'ಹಾನ್' ರಾಜಮನೆತನದ ಅರಸನ ಕಾಲದಲ್ಲಿ, ಅಂದ್ರೆ ಸುಮಾರು ಕ್ರಿಸ್ತಶಕ ೧೦೪-೧೦೫ರ ಅವಧಿಯಲ್ಲಿದ್ದ 'ಟ್ಸಾಯಿ ಲುನ್' ಎಂಬಾತ ಮೊಟ್ಟ ಮೊದಲ ಕಾಗದ ತಯಾರಿಸಿದ. ''ಟ್ಸಾಯಿ ಲುನ್' ಅಬ್ಬಾ ನೆನಪಿಡೋಕೆ ಕಷ್ಟ'' ಎಂದುಕೊಂಡಳು ಪುಟ್ಟಿ.

''ಅಪ್ಪಾ, ಅವನು ಕಾಗದವನ್ನು ಹ್ಯಾಗೆ ತಯಾರಿಸಿದ?''

''ಅವನು ಹಿಪ್ಪುನೇರಳೆ ಹಾಗೂ ಬಿದಿರಿನ ಕಾಂಡದ ಒಳಭಾಗದ ನಾರುಗಳನ್ನು ಸಂಗ್ರಹಿಸಿದ. ಅದನ್ನು ನೀರಿನಲ್ಲಿ ನೆನಸಿದ. ಅದು ಚೆನ್ನಾಗಿ ನೆಂದ ಮೇಲೆ ಕಟ್ಟಿಗೆಯ ತುಂಡಿನಿಂದ ಬಲವಾಗಿ ಕುಟ್ಟಿದ. ಆದಾದ ನಂತರ ಈ ಮಿಶ್ರಣವನ್ನು ತೆಳುವಾದ ಒರಟು ಬಟ್ಟೆಯ ಮೇಲೆ ಹರಡಿದ. ನೀರೆಲ್ಲಾ ಸೋಸಿ ಹೋಗಿ ನಾರಿನ ಎಳೆಗಳು ಮಾತ್ರ ಬಟ್ಟೆಯ ಮೇಲೆ ಉಳಿದು ಕೊಂಡವು. ಬಿಸಿಲಿನಲ್ಲಿ ಒಣಗಿಸಿದ ಮೇಲೆ ಮೊದಲ ಕಾಗದ ತಯಾರಾಯಿತು. ತಯಾರಿಸಲು ಸುಲಭವೂ ಆಗಿದ್ದು, ಹಗುರವೂ ಆಗಿದ್ದ ಇದು ಬಹಳ ಬೇಗ ಜನಪ್ರಿಯವಾಯಿತು. ಇದಾದ ಮೇಲೆ ಟ್ಸಾಯಿ ಲುನ್ ಬೇರೆ ಬೇರೆ ಮರಗಳ ತೊಗಟೆಗಳು, ಹೆಂಪ್ ಗಿಡದ ನಾರುಗಳು, ಹರಿದ ಬಟ್ಟೆ, ಹಳೆಯ ಮೀನಿನ ಬಲೆ ಎಲ್ಲವನ್ನೂ ಕಾಗದ ತಯಾರಿಕೆಯಲ್ಲಿ ಬಳಸಿ ನೋಡಿದ. ಕ್ರಿಸ್ತ ಶಕ ೧೦೫ರಲ್ಲಿ ಲುನ್ ತನ್ನ ಸಂಶೋಧನೆಯನ್ನು ಅರಸ 'ಹಿ.ಡಿ.' (He Di)ಯ ಮುಂದೆ ಪ್ರದರ್ಶಿಸಿದ.

ಅಷ್ಟರಲ್ಲಿ ಬಾಳೆ ಹಣ್ಣುಗಳನ್ನು ತಂದ ತಾಯಿ ಕೇಳಿದಳು. ''ಮತ್ತೆ ತಾಳೆ ಗರಿಗಳಲ್ಲಿ ಬರೀತಾ ಇದ್ರಲ್ಲ? ಅದು ಯಾವಾಗ?'' ''ಹಾಂ, ಹೆಚ್ಚೂ ಕಡಿಮೆ ಇದೇ ಸಮಯದಲ್ಲಿ ಚೀಣಾ ಮತ್ತು ಟಿಬೆಟ್‌ನಲ್ಲಿ ಬರೆಯುವ ವಸ್ತುವಾಗಿ ತಾಳೆಗರಿಗಳನ್ನು ಬಳಸ್ತಾ ಇದ್ರು ಅನ್ನೋದಕ್ಕೆ ದಾಖಲೆಗಳಿವೆ.''



''ಅಪ್ಪಾ, ಇದನ್ನೆಲ್ಲಾ ಚೀನೀಯರೇ ಮೊದಲು ಮಾಡಿದ್ರು ಅಂತಾ ಗೊತ್ತಾಗಿದ್ದು ಹೇಗೆ?'' ಪುಟ್ಟಿ ಕೇಳಿದಳು.

''ಡಾ॥ ಸ್ಟೇನ್ ಅನ್ನೋ ಅತ್ಯಂತ ಹೆಸರುವಾಸಿ ಪ್ರಯಾಣಿಕ ಚೀನಾದ ಪ್ರವಾಸ ಮಾಡಿ ಬರೆದಿರೋ ಗ್ರಂಥಗಳಲ್ಲಿ ತಿಳಿದುಬರುವ ಪ್ರಕಾರ ಚೀನಾದಲ್ಲಿ ನೀಟಾಗಿ ಮಡಿಸಿಟ್ಟ ಹಲವಾರು ಕಾಗದದ ದಾಖಲೆಗಳು ದೊರೆತಿವೆ. ಇವುಗಳ ಬಳಕೆಗೆ ಹರಿದ ಹಾಳೆ, ಹಳೆಯ ಬಟ್ಟೆಗಳನ್ನು ಬಳಸಿದ್ದು ಸಹ ಪರೀಕ್ಷೆಯಿಂದ ತಿಳಿದುಬಂತು ಅಂತಾ ಅವನು ಬರೀತಾನೆ'' ತಂದೆ ಹೇಳಿದರು. ''ಆಮೇಲೇನಾಯ್ತು-ಪ್ಪ?'' ಕಥೆಯನ್ನು ಮುಂದುವರಿಸುವಂತೆ ಕೇಳಿದಳು ಪುಟ್ಟಿ.

''ಚೀನಾದ ಹಲವಾರು ನಗರಗಳಲ್ಲಿ ಕಾಗದ ತಯಾರಿಕೆ ಒಂದು ಉದ್ಯಮವಾಯಿತು. ಟಾಂಗ್ ರಾಜ ಮನೆತನದ ಕಾಲದಲ್ಲಿ, ಅಂದರೆ ಕ್ರಿಸ್ತ ಶಕ ೬೧೮-೯೦೭ರ ಅವಧಿಯಲ್ಲಿ ಮತ್ತು ಸಾಂಗ್ ರಾಜಮನೆತನದ ಆಳ್ವಿಕೆಯ ಅವಧಿ ಅಂದರೆ ೯೬೦-೧೨೭೯ರ ಅವಧಿಯಲ್ಲಿ ಬೇರೆ ಬೇರೆ ತರಹದ ಕಾಗದಗಳು ತಯಾರಾದವು. ಬೇರೆ ಬೇರೆ ಕೆಲಸಗಳಿಗೆ ಬೇರೆ ಬೇರೆ ರೀತಿಯ ಕಾಗದಗಳ ಬೇಡಿಕೆ ಇತ್ತು. ಅವುಗಳಲ್ಲಿ ಹೆಂಪ್ ಕಾಗದ, ಹೈಡ್ ಕಾಗದ, ಬಿದಿರಿನ ಕಾಗದ, ಕ್ಸುವಾನ್ ಕಾಗದ ಮುಂತಾದವು ಬಹಳ ಬೇಡಿಕೆಯನ್ನು ಹೊಂದಿದ್ದವು.''

''ಚೀನೀಯರ ಪೇಂಟಿಂಗ್‌ಗಳು ಕೂಡ ಇದರಿಂದಲೇ ಪ್ರಖ್ಯಾತಿ ಹೊಂದಿರಬೇಕಲ್ವ?'' ತಾಯಿಯ ಪ್ರಶ್ನೆ.

''ಹೌದು ಕ್ಸುವಾನ್ ಕಾಗದವನ್ನು ಚೀನೀಯರು ವರ್ಣಚಿತ್ರಗಳ ತಯಾರಿಕೆಗೆ, ವಿಶೇಷ ಬರವಣಿಗೆಗೆ ಬಳಸ್ತಾ ಇದ್ರು. ಯಾಕೇಂದ್ರೆ ಅದು ಬಹಳ ನಯವಾದ ಮೇಲ್ಮೈಯನ್ನು ಹೊಂದಿದ್ದು ಅತ್ಯಂತ ಬಿಳುಪಾಗಿತ್ತು.''

''ಅಪ್ಪಾ ಕಾಗದವನ್ನು ಭಾರತದಲ್ಲಿ ಯಾವಾಗ ತಯಾರಿಸಿದ್ರು''? ಮತ್ತೊಂದು ಪ್ರಶ್ನೆ ಪುಟ್ಟಿಯಿಂದ.

''ಚೀನಾದಿಂದ ಕಾಗದ ತಯಾರಿಕೆಯ ವಿಧಾನ ಬೇರೆ ಬೇರೆ ದೇಶಗಳಿಗೆ ಹರಡಿತು ಅನ್ನೋದಷ್ಟು ನನಗೆ ಗೊತ್ತು ಪುಟ್ಟಿ. ಆದ್ರೆ ಯಾವಾಗ ಯಾವ ದೇಶಕ್ಕೆ ಹೋಯಿತು ಅನ್ನೋದು ಸರಿಯಾಗಿ ಗೊತ್ತಿಲ್ಲ'' ತಂದೆ ಆಕಳಿಸುತ್ತಾ ಹೇಳಿದ್ರು.

''ಪುಟ್ಟಿ ಮಲಗು ನಡೀ ತಡವಾಯ್ತು. ಉಳಿದ ವಿಷಯವನ್ನ ನಾಳೆ ರೇಷ್ಮಾ ಹೇಳ್ತಾರೆ'' ಎಂದು ತಾಯಿ ಹೇಳಿದಾಗ ಪುಟ್ಟಿ ತಾನೂ ಎದ್ದಳು. ಅಂದು ರಾತ್ರಿಯೆಲ್ಲಾ ಅವಳ ಕಣ್ಣ ಮುಂದೆ ಕಾಗದವೇ ಕುಣಿಯುತ್ತಿತ್ತು.

ಮರುದಿನ ಮಧ್ಯಾಹ್ನ ಪುಟ್ಟಿಯನ್ನು ತಂದೆ ರೇಷ್ಮಾ ಅತ್ತೆ ಮನೆಯಲ್ಲಿ ಬಿಟ್ಟು ತಮ್ಮ ಗೆಳೆಯನ ಮನೆಗೆ ಹೋದರು. ಮನೆಗೆ ಯಾರೊ ಅತಿಥಿಗಳು ಬಂದ ಕಾರಣ ತಾಯಿಗೆ ಬರಲು ಸಾಧ್ಯವಾಗಲಿಲ್ಲ. ಪುಟ್ಟಿ ಹಾಲ್‌ಗೆ ಬಂದಾಗ ರೇಷ್ಮಾ ಅತ್ತೆ ಮತ್ತೆ ಪುಸ್ತಕಗಳ

ನಡುವೆ ಅವಳಿಗಾಗಿ ಕಾಯುತ್ತಾ ಕುಳಿತಿದ್ದಂತೆ ಕಂಡು ಬಂದಿತು. ''ಬಾ ಪುಟ್ಟಿ. ಅಮ್ಮಾ ಬರಲಿಲ್ಲ ಅಲ್ವಾ ? ಫೋನ್ ಮಾಡಿದ್ರು. ಅಪ್ಪ ಎಲ್ಲಿ?'' ಎಂದು ಬಾಗಿಲಿನತ್ತ ನೋಡಿದರು. ತಂದೆಯಾಗಲೇ ಹೊರಟಾಗಿತ್ತು. ''ಒಂದು ನಿಮಿಷ ಕೂತಿರು, ಈಗ ಬಂದುಬಿಟ್ಟೆ'', ಎಂದು ಒಳಗೆ ಹೋದರು ಅತ್ತೆ. ಪುಟ್ಟಿ ಅಲ್ಲಿದ್ದ ನಿನ್ನೆ ನೋಡಿದ ಪುಸ್ತಕದ ಪುಟ ತಿರುವಿದಳು ಒಂದೆಡೆ, ಚೀನಾದ ಜನ ಕಾಗದ ತಯಾರಿಸ್ತಾ ಇರೋ ಚಿತ್ರವಿತ್ತು: ಅವರು ಗಿಡದ ಕಾಂಡವನ್ನ ನೆನೆಸಿ ಕಟ್ಟಿಗೆಯ ತುಂಡಿನಿಂದ ಕುಟ್ಟುತ್ತಾ ಇರೋ ಚಿತ್ರವನ್ನು ಗಮನವಿಟ್ಟು ನೋಡಿದಳು. ಅಷ್ಟರಲ್ಲಿ ಹಾಲಿನ ಲೋಟಾ ಹಿಡಿದು ಅಲ್ಲಿಗೆ ಬಂದ ರೇಶ್ಮಾ ಅತ್ತೆ ''ಏನು ನೋಡ್ತಾ ಇದೀಯಾ ಪುಟ್ಟಿ?'' ಎಂದರು.

''ಅತ್ತೆ ಇದು ಚೀನಾದಲ್ಲಿ ಕಾಗದ ತಯಾರಿಸೋ ಚಿತ್ರ ಅಲ್ವಾ ?''

''ನಿನ್ನೆ ಅಪ್ಪ ಈ ಕಥೆಯನ್ನ ನನಗೆ ಹೇಳಿದ್ರು'' ಎನ್ನುತ್ತ, ಹಾಲಿನ ಲೋಟ ತೆಗೆದುಕೊಂಡಳು.

''ಹೌದಾ, ಬಹಳ ಸಂತೋಷ'' ಏನೇನು ವಿಷಯ ತಿಳ್ಕೊಂಡೆ ?

**ಚೀನೀಯರು ಕಾಗದ ತಯಾರಿಸಿದರು**

''ಕಾಗದವನ್ನ ಚೀನೀಯರು ಹೇಗೆ, ಯಾವಾಗ ತಯಾರಿಸಿದರು ಮತ್ತೆ ಅವರು ಬೇರೆ ಬೇರೆ ರೀತಿಯ ಕಾಗದವನ್ನು ಹೇಗೆ ತಯಾರಿಸಿದ್ರು ಇದನ್ನೆಲ್ಲಾ ಹೇಳಿದರು. ಆದ್ರೆ ಭಾರತದಲ್ಲಿ ಯಾವಾಗ ಕಾಗದ ತಯಾರಾಯಿತು ಅತ್ತೆ?'' ಕೇಳಿದಳು ಪುಟ್ಟಿ.

''ಹಾಂ, ಪುಟ್ಟಿ, ಚೀನಾದಿಂದ ಕಾಗದ ಕೊರಿಯಾ, ವಿಯೆಟ್ನಾಂ, ಜಪಾನ್‌ಗಳಿಗೆ ಮೂರನೆಯ ಶತಮಾನದ ಆರಂಭದಲ್ಲಿ ಹೋಯಿತು. ೭ನೆಯ ಶತಮಾನದ ಕೊನೆಯ ಭಾಗದಲ್ಲಿ ಇದು ಭಾರತ, ನೇಪಾಳ, ಪಾಕಿಸ್ತಾನ, ಬಾಂಗ್ಲಾದೇಶಗಳಿಗೂ ಹೋಯಿತು. ಚೀನಾದ ವಾಣಿಜ್ಯ 'ರೇಶ್ಮೆ ಮಾರ್ಗ'ದ ಗುಂಟ ಕಾಗದ ಕೂಡ ಹೋಯಿತು. ರೇಶ್ಮಾ ಅತ್ತೆ ಹೇಳಿದರು.

''ಓಹೋ ಹೌದಾ ಮತ್ತೆ ಪ್ರಪಂಚದ ಇನ್ನುಳಿದ ಭಾಗಗಳಿಗೆ ಇದು ಯಾವಾಗ ಹೋಯ್ತು?'' ಪುಟ್ಟಿ ಪ್ರಶ್ನೆ ಕೇಳಿದಳು.

''ಕ್ರಿ.ಶ. ೭೫೧ರಲ್ಲಿ ಅಂದ್ರೆ ಸಮರ್‌ಖಂಡ್‌ನಲ್ಲಿ ನಡೆದ 'ಟಲಾಸ್', ಅಂದ್ರೆ ಇಂದಿನ 'ಉಜಬೆಕಿಸ್ಥಾನ್' ನಲ್ಲಿ ನಡೆದ ಯುದ್ಧದಲ್ಲಿ ಅರಬ್ಬರು ಇಬ್ಬರು ಚೀನೀಯರನ್ನು ಸೆರೆ ಹಿಡಿದರು. ಇವರು ಕಾಗದ ತಯಾರಿಸುವ ತಂತ್ರಜ್ಞಾನವನ್ನು ತಿಳಿದಿದ್ದರು. ಇವರಿಂದ ಇಸ್ಲಾಮಿಕ್ ಜಗತ್ತಿನಲ್ಲಿ ಮೊದಲ ಕಾಗದದ ತಯಾರಿಕಾ ಘಟಕ ತಯಾರಾಯಿತು'' ರೇಶ್ಮಾ ಅತ್ತೆ ಹೇಳ್ತಾ ಹೋದ ಹಾಗೆ ಪುಟ್ಟಿ ಕೇಳ್ತಾ ಹೋದಳು.

''ಅಲ್ಲಿಂದ ಮುಂದೆ ಜಗತ್ತಿನ ಇತರ ಭಾಗಗಳಿಗೆ ಹಾಗೂ ಯುರೋಪಿನ ವಿವಿಧ ಭಾಗಗಳಿಗೆ ಕಾಗದ ತಯಾರಿಕಾ ತಂತ್ರಜ್ಞಾನ ಪಸರಿಸಿತು. ೧೦ನೆಯ ಶತಮಾನದ ಹೊತ್ತಿಗೆ ಅರಬ್ಬರು ಮರದ ಹಾಗೂ ಬಿದಿರಿನ ತಿರುಳಿಗೆ ಬದಲಾಗಿ ಹತ್ತಿಯ ಎಳೆಗಳನ್ನು ಬಳಸಿ ಅತ್ಯಂತ ನಯವಾದ ಕಾಗದವನ್ನು ತಯಾರಿಸಿದರು. ಆಗ ಕಾಗದದ ಪುಟಗಳ ತಯಾರಿಕೆ ಆರಂಭವಾಯಿತು. ಕ್ರಿ.ಶ. ೧೧೫೦ರಲ್ಲಿ ಯುರೋಪಿನ ಮೊಟ್ಟ ಮೊದಲ 'ಕಾಗದದ ಕಾರ್ಖಾನೆ' ಶುರುವಾಯಿತು''. ರೇಶ್ಮಾ ಅತ್ತೆ ಹೇಳಿದರು.

''ಅಬ್ಬಬ್ಬಾ ! ಅಂತೂ ಇಂತೂ ಪೇಪರ್ ಫ್ಯಾಕ್ಟರಿ ನಿರ್ಮಾಣ ಆಯ್ತು! ಈಗ ಬೇಕಾದಷ್ಟು ಕಾಗದದ ತಯಾರಿಕೆ ಆಗಿರಬೇಕು ಅಲ್ವಾ ಅತ್ತೆ?''

''ಹೌದು ಪುಟ್ಟಿ ಅಷ್ಟೇ ಅಲ್ಲ, ಅರಬ್ಬಿನ ವ್ಯಾಪಾರಸ್ಥರು ಅಫ್ಘಾನಿಸ್ತಾನ್ ಮತ್ತು ಇಂಡೋನೇಶಿಯಾದ ಬೇರೆ ಬೇರೆ ಭಾಗಗಳಿಗೆ ಭೇಟಿ ನೀಡಿದರು. ಅವರು ಚೀನಾದ ಕಾಗದ ತಯಾರಿಕೆಯ ತಂತ್ರಜ್ಞಾನವನ್ನು ಆಸ್ಟ್ರೇಲಿಯಾದ ಪಶ್ಚಿಮ ಭಾಗಗಳಿಗೆ ಸಹ ಕೊಂಡೊಯ್ದರು.''

''ಇದು ನಡೆದದ್ದು ಯಾವಾಗ ಅತ್ತೆ?'' ಮತ್ತೆ ಕೇಳಿದಳು ಪುಟ್ಟಿ.

''ಇದು ನಡೆದದ್ದು ೧೫ನೆಯ ಶತಮಾನದಲ್ಲಿ. ಅಲ್ಲಿಂದ ಸತತವಾಗಿ ಕಾಗದ ತಯಾರಿಕಾ ವಿಧಾನ ಜಗತ್ತಿನ ಬೇರೆ ಬೇರೆ ಭಾಗಗಳಲ್ಲಿ ಕಂಡುಬಂದಿತು. ೧೯ನೆಯ ಶತಮಾನದಲ್ಲಿ ಬರೆಯಲ್ಪಟ್ಟ ಪುಸ್ತಕ 'ದಿ ಎಕ್ಸ್‌ಪ್ಲಾಯಿಟೇಶನ್ ಆಫ್ ದಿ ವರ್ಕ್ಸ್ ಆಫ್ ನೇಚರ್' ನಲ್ಲಿ ಕಾಗದ ತಯಾರಿಕೆಯ ಆರು ಪ್ರಮುಖ ಹಂತಗಳನ್ನು ವಿವರಿಸಿದ್ದಾರೆ. ಇಂಗ್ಲೆಂಡಿನಲ್ಲಿ ಮೊದಲ ಪೇಪರ್ ಮಿಲ್ ಸ್ಥಾಪನೆಯಾದದ್ದು ೧೫೮೮ರಲ್ಲಿ. ಡಾರ್ಟ್‌ಫೋರ್ಡ್ ಹತ್ತಿರ ಜಾನ್ ಸ್ಪಿಲ್‌ಮ್ಯಾನ್ ಇದನ್ನು ತಯಾರಿಸಿದ'' ರೇಶ್ಮಾ ಆಂಟಿ ಹೇಳಿದರು.

''ಆಂಟಿ, ಪೇಪರ್ ತಯಾರಿಕೆಯ ಮಶೀನ್‌ಅನ್ನು ಯಾರು ಕಂಡುಹಿಡಿದರು ?'' ಪುಟ್ಟಿ ತನ್ನ ಕುತೂಹಲವನ್ನು ತಡೆಯದೆ ಕೇಳಿದಳು. ಫ್ರಾನ್ಸ್‌ನ ನಿಕೋಲಾಸ್-ಲೂಯಿ ರಾಬರ್ಟ್ ೧೭೯೮ ಒಂದು ಮಾದರಿ ಯಂತ್ರವನ್ನು ಕಂಡುಹಿಡಿದ. ಮುಂದೆ ೧೭೯೯ರ ಜನವರಿ ೧೮ರಂದು ಕಂಡುಹಿಡಿದ ಯಂತ್ರ ಮೊದಲ ಕಾಗದ ತಯಾರಿಕಾ ಯಂತ್ರವಾಯಿತು. ಆ ಯಂತ್ರದಲ್ಲಿಯೇ ಮಾರ್ಪಾಟುಗಳನ್ನು ಮಾಡುತ್ತಾ ಪೇಪರ್ ತಯಾರಿಕೆ ಮುಂದುವರಿಯಿತು'' ಅತ್ತೆ ಹೇಳಿದಾಗ, ಪುಟ್ಟಿಯ ಗಮನವೆಲ್ಲ ಪುಸ್ತಕದಲ್ಲಿದ್ದ ಚಿತ್ರದ ಕಡೆಗಿತ್ತು. ಅಷ್ಟರಲ್ಲಿ ಸದ್ದು ಮಾಡಿತು ಬಾಗಿಲಿನ ಕರೆಗಂಟೆ. ಬಾಗಿಲು ತೆರೆದಾಗ ಪುಟ್ಟಿಯ ಅಪ್ಪ ಅವಳನ್ನು ಕರೆದೊಯ್ಯಲು ಬಂದಿದ್ದರು.

**ವಿಕಾಸ ಹೊಂದಿದ ಕಾಗದದ ತಯಾರಿಕೆ**

ಅಂದು ಪುಟ್ಟಿ ಅಪ್ಪನೊಡನೆ ಮನೆಗೆ ಬಂದಾಗ, ಮಧ್ಯಾಹ್ನ ಬಂದಿದ್ದ ಅತಿಥಿಗಳು ಮನೆಯಲ್ಲಿ ಇನ್ನೂ

**ಹೊಸತು** ಜನವರಿ ಸಂಚಿಕೆ

ಜನವರಿ ೨೦೧೩ರ ಸಂಚಿಕೆಯಲ್ಲಿ 'ಮಾಧ್ಯಮಗಳಲ್ಲಿ ಭವಿಷ್ಯವಾಣಿ' ಎಂಬ ವಿಷಯವನ್ನು ಕುರಿತು ಅಭಿಪ್ರಾಯಗಳನ್ನು ವ್ಯಕ್ತಪಡಿಸಲು ಓದುಗರಲ್ಲಿ ಮನವಿ ಮಾಡಿಕೊಳ್ಳುತ್ತಿದ್ದೇವೆ. ಡಿಸೆಂಬರ್ ೧೦, ೨೦೧೨ರ ಒಳಗಾಗಿ ನಿಮ್ಮ ಬರಹವನ್ನು ಕಳಿಸಿ. ಬರಹ ೨೦೦ ಪದಗಳ ಮಿತಿಯಲ್ಲಿದ್ದರೆ ಒಳ್ಳೆಯದು.

*– ಸಂಪಾದಕ ಮಂಡಲಿ*



ಇದ್ದರು. ಎಲ್ಲರೂ ಅವರವರ ಮಾತಿನಲ್ಲಿ ತೊಡಗಿರುವುದನ್ನು ಕಂಡ ಪುಟ್ಟಿ ಸುಮ್ಮನೇ ಕುಳಿತಳು. ಅವಳ ಮನಸ್ಸೆಲ್ಲ ನಿಕೋಲಾಸ್-ಲೂಯಿ-ರಾಬರ್ಟ್ ಕಾಗದ ತಯಾರಿಕೆಯ ಮಶೀನ್ ಕಂಡುಹಿಡಿದ ನಂತರ ಏನಾಗಿರಬಹುದು? ಎಂಬುದರ ಕಡೆಗೇ ಇತ್ತು. ಏನ್ ಯೋಚಿಸ್ತಿದ್ದಿಯಾ ಮರಿ?'' ಅಂಕಲ್ ಒಬ್ಬರು ಅವಳ ಹತ್ತಿರ ಬಂದು ಕೇಳಿದರು. ''ರೇಶ್ಮಾ ಅತ್ತೆ ಕಾಗದ ತಯಾರಿಕೆಯ ಕಥೆ ಹೇಳ್ತಾ ಇದ್ರು'' ಅಂದಾಗ ಮಧ್ಯ ಪ್ರವೇಶಿಸಿದ ಅಮ್ಮ ''ಅಣ್ಣಾ ಅವಳಿಗೆ ಕಾಗದ ತಯಾರಿಕೆಯ ಬಗ್ಗೆ ಆಸಕ್ತಿ ಮೂಡಿದೆ. ನನ್ನ ಗೆಳತಿ ರೇಶ್ಮಾ ಒಂದಷ್ಟು ವಿಷಯ ತಿಳಿಸಿದಾಳೆ. ನೀನೂ ಯಾಕೆ ಒಂದಿಷ್ಟು ವಿಷಯ ತಿಳಿಸಬಾರದು? ಹೇಗೂ ನೀನು ಇತಿಹಾಸದ ಪ್ರೊಫೆಸರ್'' ಎಂದಳು. ಪುಟ್ಟಿ ಕುತೂಹಲದಿಂದ ಅವರ ಕನ್ನಡಕದೊಳಗಿನ ಕಣ್ಣುಗಳನ್ನೇ ನೋಡಿದಳು. ಅಬ್ಬಾ, ಇವರು ಇತಿಹಾಸದ ಪ್ರೊಫೆಸರ್! ಎಲ್ಲರೂ ಎಷ್ಟೊಂದು ವಿಷಯಗಳನ್ನು ತಿಳಿದಿದ್ದಾರೆ. ತಾನು ಮಾತ್ರ ಇದುವರೆಗೂ ಏನೂ ತಿಳ್ಕೊಂಡೆ ಇರ್ಲಿಲ್ಲ ಅಂದುಕೊಂಡಳು. ''ಏಯ್ ಪುಟ್ಟಿ ಹೋಗು, ಅಂಕಲ್ ನಿನಗೆ ಇನ್ನೊಂದಿಷ್ಟು ವಿಷಯ ತಿಳಿಸ್ತಾರೆ.'' ಅಮ್ಮ ಹೇಳಿದಾಗ ಪಕ್ಕದ ಕೋಣೆಯ ಕಡೆಗೆ ಹೋಗ್ತಾ ಇದ್ದ ಅಂಕಲ್‌ಅನ್ನು ಹಿಂಬಾಲಿಸಿದಳು ಪುಟ್ಟಿ.

ಅಲ್ಲಿದ್ದ ಆರಾಮ ಕುರ್ಚಿಯಲ್ಲಿ ಕುಳಿತ ಅಂಕಲ್ ಕೇಳಿದರು, ''ಹೂಂ, ಈಗ ಹೇಳು ನಿನಗೆ ಯಾವ ಕಥೆ ಬೇಕು? ಎಲ್ಲಿಂದ ಬೇಕು?''

''ಅಂಕಲ್, ಫ್ರಾನ್ಸ್‌ನ ನಿಕೋಲಾಸ್ ಲೂಯಿ ರಾಬರ್ಟ್ ಪೇಪರ್ ತಯಾರಿಕಾ ಯಂತ್ರವನ್ನು ಕಂಡುಹಿಡಿದ ನಂತರ ಮುಂದೆ ಏನಾಯ್ತು, ಅನ್ನೋ ಕಥೆ ಬೇಕು'' ಎಂದು ನಕ್ಕಳು. ''ಹಾಂ, ನಿಜವಾಗಿಯೂ ಅದು ಕಥೆಯೇ. ನಿಕೋಲಾಸ್ ಲೂಯಿ ರಾಬರ್ಟ್ ಫ್ರೆಂಚ್ ಸೈನ್ಯದಲ್ಲಿ ಸಾರ್ಜಂಟ್ ಆಗಿದ್ದ. ಅವನು ಆ ಕೆಲಸವನ್ನು ಬಿಟ್ಟ ಮೇಲೆ ಪ್ರಸಿದ್ಧ ಮುದ್ರಣ ಕಂಪನಿಯೊಂದರ ಮಾಲೀಕ ಪಿಯರಿ-ಫ್ರಾಂಕಾಯಿಸ್-ಡಿಡಾಟ್‌ನ ಹತ್ತಿರ ಪ್ರೂಫ್ ರೀಡರ್ ಆಗಿ ಸೇರಿಕೊಂಡ. ಆ ನಂತರ ಸೆಂಟ್ ಲೀಗರ್ ಡಿಡಾಟ್ ಪೇಪರ್ ಮಿಲ್‌ನ ಲೆಕ್ಕ ಪತ್ರ ವಿಭಾಗದಲ್ಲಿ ಕರ್ಮಚಾರಿಯಾದ ಸೆಂಟ್ ಲೀಗರ್ ಅವನ ಪೇಪರ್ ತಯಾರಿಕಾ ಯಂತ್ರದ ಅಭಿವೃದ್ಧಿಯ ಕೆಲಸಕ್ಕೆ ಪ್ರೋತ್ಸಾಹಿಸಿದ. ಕೊನೆಗೊಮ್ಮೆ ಸೆಂಟ್ ಲೀಗರ್ ರಾಬರ್ಟ್‌ನಿಂದ ೨೭,೪೦೦ ಫ್ರಾಂಕ್‌ಗಳಿಗೆ ಅದರ ಹಕ್ಕನ್ನು ಖರೀದಿಸಿದ. ಆದರೆ ಪೇಪರ್ ಮಿಲ್‌ನಲ್ಲಿ ಉಂಟಾದ ಹಾನಿಯಿಂದ ಆ ಹಣವನ್ನು ರಾಬರ್ಟ್‌ನಿಗೆ ಕೊಡಲೇ ಇಲ್ಲ. ನಿಕೋಲಾಸ್ ಲೂಯಿ ರಾಬರ್ಟ್ ತಾನು ಕಂಡುಹಿಡಿದ ಯಂತ್ರದ ಮಾಲೀಕತ್ವ ವನ್ನು ಮರಳಿ ಪಡೆದ. ಆದರೆ ಅವನ ಸಂಶೋಧನೆ ಅವನಿಗೆ ಯಾವುದೇ ರೀತಿಯಲ್ಲಿ ಧನವನ್ನು ಒದಗಿಸಲಿಲ್ಲ'' ಅಂಕಲ್ ನಿಜವಾಗಿಯೂ ಕಥೆಯನ್ನೇ ಹೇಳ್ತಾ ಇದ್ರು.

ಪಾಪ! ಆಮೇಲೇನಾಯ್ತು? ಪುಟ್ಟಿ ಪ್ರಶ್ನಿಸಿದಳು.

ಆಮೇಲೆ ಯಂತ್ರದ ಮಾದರಿಗಳು ಡಿಡಾಟನ ಮುಖಾಂತರ ಇಂಗ್ಲೆಂಡ್ ತಲುಪಿದವು. ೧೮೦೧ರ ಏಪ್ರಿಲ್‌ನಲ್ಲಿ ಹೆನ್ರಿ ಹಾಗೂ ಸೀಲೆ ಫೌಡ್ರಿನಿಯರ್ ಸಹೋದರರು 'ಬ್ರೈನ್ ಡಾಕಿನ್' ಎಂಬ ಎಂಜಿನಿಯರ್‌ನ ಸಹಾಯದಿಂದ ಕಾಗದ ತಯಾರಿಕೆಯ ಯಂತ್ರವನ್ನು ಮತ್ತಷ್ಟು ಅಭಿವೃದ್ಧಿಪಡಿಸಿದರು.

೧೮೫೧ರ ಹೊತ್ತಿಗೆ ಡಾಕಿನ್ ೧೯೧ ಯಂತ್ರಗಳನ್ನು ತಯಾರುಮಾಡಿದ್ದ. ಅವುಗಳಲ್ಲಿ ೮೩ ಇಂಗ್ಲೆಂಡಿನ ಕಾಗದ ಕಾರ್ಖಾನೆಗಳಿಗೆ ಬಳಕೆಯಾದರೆ ಉಳಿದವು ಯುರೋಪ್, ಭಾರತ ಮತ್ತು ಅಮೇರಿಕಾದ ಕಾಗದ ಕಾರ್ಖಾನೆಗಳಿಗೆ ರವಾನೆಯಾದವು. ಈ ಯಂತ್ರಗಳನ್ನ 'ಫೌಡ್ರಿನಿಯರ್' ಯಂತ್ರಗಳು ಎಂದೇ ಕರೆಯುತ್ತಿದ್ದರು.''

''ಓಹೋ ಹಾಗಾದರೆ ಭಾರತಕ್ಕೂ ಕಾಗದ ತಯಾರಿಕೆಯ ಯಂತ್ರ ಬಂತು. ಅಂಕಲ್, ಅಮೇರಿಕಾದಲ್ಲಿ ಇದೇ ಮೊದಲ ಯಂತ್ರವಾಗಿತ್ತಾ?'' ಪುಟ್ಟಿ ಪ್ರಶ್ನೆ ಕೇಳಿದಳು.

''ಇಲ್ಲ ಪುಟ್ಟಿ, ಅಮೇರಿಕಾದ ಮೊದಲ ಕಾಗದ ತಯಾರಿಕಾ ಘಟಕ ೧೬೯೦ರಲ್ಲಿ ಫಿಲಡೆಲ್ಫಿಯಾದ ರಾಕ್ಸ್‌ಬರೋನಲ್ಲಿ ಸ್ಥಾಪಿತವಾಗಿತ್ತು. ಇದನ್ನು ವಿಲಿಯಮ್ ರಿಟೆನ್ ಹೌಸ್ ಸ್ಥಾಪಿಸಿದ್ದ. ೧೮ನೆಯ ಶತಮಾನದವರೆಗೆ ಅಂದರೆ ನಿಕೋಲಾಸ್ ಲೂಯಿ ರಾಬರ್ಟ್ ಯಂತ್ರವನ್ನು ಕಂಡುಹಿಡಿಯುವವರೆಗೆ ಕಾಗದವನ್ನ ಕೈಯಿಂದಲೇ ತಯಾರಿಸ್ತಾ ಇದ್ರು.''

''೧೮೦೯ರಲ್ಲಿ ಸಿಲಿಂಡರ್ ವಿಧಾನದ ಕಾಗದ ತಯಾರಿಕಾ ಯಂತ್ರವನ್ನ ಕಂಡುಹಿಡಿದ. ಇದು ೩೦ ಅಡಿ ಅಗಲದ ಹಾಳೆಗಳನ್ನ ನಿಮಿಷಕ್ಕೆ ೬೦ರಂತೆ ತಯಾರಿಸಬಲ್ಲದ್ದಾಗಿತ್ತು. ಇದರ ಮಾದರಿಯನ್ನ ಬಹಳ ಗುಪ್ತವಾಗಿ ಇಟ್ಟಿದ್ರು'' ಅಂಕಲ್ ಹೇಳಿದಾಗ ಯಾಕೆಂದು ಕೇಳಿದಳು ಪುಟ್ಟಿ.

''ಯಾಕೇಂದ್ರೆ ಇದೊಂದು ಕ್ರಾಂತಿಕಾರಿ ಸಂಶೋಧನೆಯಾಗಿತ್ತು. ಇದರಿಂದ ಕಾಗದವನ್ನು ಬಹಳ ವೇಗವಾಗಿ ತಯಾರಿಸಬಹುದಾಗಿತ್ತು. ಇದಕ್ಕೆ ಕಾಗದವನ್ನು ಒಣಗಿಸುವ ಸಿಲಿಂಡರ್‌ನ್ನು ಸೇರಿಸಿದ ಮೇಲಂತೂ ಇದು ಬಹಳ ಉಪಯೋಗಕಾರಿಯಾಗಿತ್ತು.''

ಅಂಕಲ್ ಹೇಳಿ ಮುಗಿಸಿದಾಗ ಪುಟ್ಟಿ! ''ಅಬ್ಬಬ್ಬಾ ಅಂಕಲ್ ನಾವು ಇವತ್ತು ಕಾಗದವನ್ನು ಎಷ್ಟು ಸುಲಭವಾಗಿ ಬಳಸ್ತೀವಿ, ಹಾಳು ಮಾಡ್ತೀವಿ ಇದರ ಹಿಂದೆ ಇಷ್ಟು ದೊಡ್ಡ ಕಥೆಯಿದೆ ಅಂತಾ ನನಗೆ ಗೊತ್ತೇ ಇರಲಿಲ್ಲ'' ಎಂದಳು.

''ಹೌದಮ್ಮ, ಇದೆಲ್ಲಾ ಅದರ ಕಥೆಯೇ. ಆದರೆ ದಿನದಿಂದ ದಿನಕ್ಕೆ ಕಾಗದ ತಯಾರಿಕಾ ವಿಧಾನ ಮತ್ತೂ ವಿಕಾಸವಾಯ್ತು. ಇದರಿಂದಾಗಿ ಇವತ್ತು ಬಹಳಷ್ಟು ಬಗೆಯ ಕಾಗದಗಳನ್ನು ಬಹಳ ವೇಗವಾಗಿ ತಯಾರು ಮಾಡಬಲ್ಲ ಯಂತ್ರಗಳು ಇವೆ.'' ಅಂಕಲ್ ಇನ್ನೂ ಹೇಳುತ್ತಿರುವಂತೆಯೇ ಅಮ್ಮ ಎಲ್ಲರನ್ನೂ ಊಟಕ್ಕೆ ಎಬ್ಬಿಸಿದ್ದರಿಂದ ಕಾಗದದ ವಿಷಯ ಅಲ್ಲಿಗೇ ನಿಂತಿತು.

**ಪ್ಲಾಸ್ಟಿಕ್‌ನ ಅಣುಗಳಿಂದ ಕಾಗದ**

ಕಾಗದದ ತೆಳುವಾದ ಹಾಳೆಯೊಂದರ ಮೇಲೆ ವೀಡಿಯೋ ನೋಡಿ ಆನಂತರ ಅದನ್ನು ಸುರುಳಿ ಸುತ್ತಿ ಜೇಬಿನಲ್ಲಿಡಬಹುದಾದರೆ ಹೇಗಿರುತ್ತದೆ? ಮುಂಬರುವ ದಿನಗಳಲ್ಲಿ ಇಂತಹ ಕಾಗದ ಲಭ್ಯವಾಗಲಿದೆ.

ನ್ಯೂಜಿಲೆಂಡಿನ ವಿಜ್ಞಾನಿ ರಿಚರ್ಡ್ ಫ್ರೆಂಡ್ ಅವರ ಪ್ರಕಾರ, ಸಾವಯವ ಪಾಲಿಮರ್‌ಗಳು (ಪ್ಲಾಸ್ಟಿಕ್‌ನಂತೆ ಇರುತ್ತವೆ) ವಿದ್ಯುದೀಕರಣದ ಗುಣಧರ್ಮವನ್ನು ಬೆಳೆಸಿಕೊಳ್ಳಬಲ್ಲವು. ಇದರಿಂದ ಮಾಡಿದ ತೆಳುವಾದ 'ಹಾಳೆ' ಗೋಡೆಯ ಮೇಲಿನ ವಾಲ್‌ಪೇಪರ್‌ನಂತೆ ಕೆಲಸ ಮಾಡುವುದರ ಜೊತೆಗೆ, ವೀಡಿಯೋ ವೀಕ್ಷಣೆಗೂ ನೆರವಾಗಬಲ್ಲದು.


ಸುಮಂಗಲಾ ಎಸ್. ಮುಮ್ಮಿಗಟ್ಟಿ
ಆಲ್ ಇಂಡಿಯಾ ರೇಡಿಯೋ, ರಾಜಭವನ ರಸ್ತೆ
ಬೆಂಗಳೂರು - ೫೬೦ ೦೦೧


## ಕಣವಿ ಕಾವ್ಯ ಪುರಸ್ಕಾರ

ಹಾನಗಲ್‌ನ ಕನ್ನಡ ಯುವಜನ ಕ್ರಿಯಾ ಸಮಿತಿಯಿಂದ ಯುವ ಕವಿಗಳಿಗೆ 'ಕಣವಿ ಕಾವ್ಯ ಪುರಸ್ಕಾರ'ವನ್ನು ನೀಡಲಾಗುವುದು. ೨೦೧೧ ಮತ್ತು ೨೦೧೨ರಲ್ಲಿ ಪ್ರಥಮ ಸಂಕಲನ ಪ್ರಕಟಿಸಿದ ಯುವ ಕವಿಗಳು ಸಂಸ್ಥೆಯ ಪ್ರಧಾನ ಸಂಚಾಲಕ ವಿಜಯಕಾಂತ ಪಾಟೀಲ (ಮೊಬೈಲ್ ಸಂಖ್ಯೆ ೯೭೩೧೭೦೧೭೪೩೦) ಇವರನ್ನು ಸಂಪರ್ಕಿಸಬಹುದು.

## ವಿಭಾಗಿಸು

ಬಹುಮಹಡಿ ಕಟ್ಟಡದಲ್ಲಿ
ಅವರವರ ಮನೆಯ ಸಂಖ್ಯೆ
ಅವರವರ ವಿದ್ಯುಚ್ಛಕ್ತಿ ಮಾಪಕ ಯಂತ್ರ
ಅವರವರ ಗಾಡಿಯ ನಿಲುದಾಣ
ಅವರವರ ಹಾಲು, ಟಪಾಲು, ಚೀಲಗಳು
ಸಮಸ್ತವನ್ನೂ ವಿಭಾಗಿಸಿಯಾಯ್ತು
ದಿಢೀರನೆ ಅಡಚಣೆಯುಂಟಾಗಲು
(ತುಂಬಿಕೊಳ್ಳಲು)
ಹೇಗೆ ವಿಭಾಗಿಸುವಿರಿ ಅವರವರ
ಚರಂಡಿಯನ್ನು?


ಡಾ|| ತಮಿಳಚ್ಚಿ ತಂಗಪಾಂಡ್ಯನ್
ಅನುವಾದ: ಪ್ರೊ|| ಮಲರ್‌ವಿಳಿ ಕೆ.
ಪ್ರೆಸಿಡೆನ್ಸಿ ಕಾಲೇಜು, ಕೆಂಪಾಪುರ, ಹೆಬ್ಬಾಳ, ಬೆಂಗಳೂರು



**ಡಾ॥ ಎಚ್. ಎಸ್. ಗೋಪಾಲ ರಾವ್**

# ಅರ್ಥವಂತ ಇತಿಹಾಸಕಾರ: ಎರಿಕ್ ಹಾಬ್ಸ್‌ಬಾಮ್

'ಇತಿಹಾಸಕಾರ' ಶಬ್ದಕ್ಕೆ ಅರ್ಥ ತಂದುಕೊಡುವ ಇತಿಹಾಸಕಾರರು ಅಪರೂಪವಾಗುತ್ತಿರುವ ಸಂದರ್ಭದಲ್ಲಿ, ಎರಿಕ್ ಹಾಬ್ಸ್‌ಬಾಮ್‌ನಂತಹ ಇತಿಹಾಸಕಾರನ ಸಾವನ್ನು ಕುರಿತು, 'ತುಂಬಲಾರದ ನಷ್ಟ' ಎನ್ನುವ ಉದ್ಗಾರವು ಕ್ಲೀಷೆ ಎನಿಸುವುದಿಲ್ಲ. ತನ್ನ ೧೪ನೆಯ ವರ್ಷದಲ್ಲೂ ಮಾರ್ಕ್ಸ್ ವಾದದ ನೆಲೆಯಲ್ಲೇ 'ಪ್ರಪಂಚವನ್ನು ಬದಲಿಸುವುದು ಹೇಗೆ'? ಎಂಬ ಕೃತಿಯ ಪ್ರಕಟಣೆಯೊಂದಿಗೆ ಇತಿಹಾಸದ ಬಗ್ಗೆ ಪ್ರೀತಿ ಮತ್ತು ವಿಶ್ವಾಸವನ್ನು ಹೊಂದಿದ್ದ ಎರಿಕ್ ಹಾಬ್ಸ್‌ಬಾಮ್ ಜೂನ್ ೯, ೧೯೧೭ರಿಂದ ಅಕ್ಟೋಬರ್ ೧, ೨೦೧೨ರವರೆಗಿನ ತನ್ನ ೯೫ ವರ್ಷಗಳ ಸಾರ್ಥಕ ಬದುಕಿನಲ್ಲಿ ಇತಿಹಾಸ ಬೋಧನೆ, ಸಂಶೋಧನೆ, ವಿಶ್ಲೇಷಣೆ ಮಾತ್ರವಲ್ಲದೆ, ಬರವಣಿಗೆಯ ಮೂಲಕವೂ ತನ್ನ ಹೆಸರನ್ನು ಸಾರ್ಥಕವಾಗಿ ಉಳಿಸಿದ್ದಾನೆ.

ಎರಿಕ್ ಹಾಬ್ಸ್‌ಬಾಮ್‌ನ ತಂದೆ ಲಿಯೋಪಾಲ್ಡ್ ಪರ್ಸಿ ಓಸ್ಟ್‌ಬಾನ್ ಈಜಿಪ್ಟ್‌ನ ಅಲೆಕ್ಸಾಂಡ್ರಿಯಾದಲ್ಲಿ ನೆಲೆಸಿದ್ದ ಯಹೂದಿ ವ್ಯಾಪಾರಿ. ಅವನ ಮಗನಾಗಿ ಹುಟ್ಟಿದ ಎರಿಕ್ ಓಸ್ಟ್‌ಬಾನ್‌ನ ಹೆಸರು ಗುಮಾಸ್ತನ ತಪ್ಪಿನಿಂದಾಗಿ ಎರಿಕ್ ಹಾಬ್ಸ್‌ಬಾಮ್ ಆಯಿತು. ನಂತರ ಅದನ್ನು ಹಾಬ್ಸ್‌ಬಾಮ್ ಬದಲಾಯಿಸಿಕೊಳ್ಳಲಿಲ್ಲ. ಮೊದಲನೆಯ ವಿಶ್ವ ಯುದ್ಧ ಮುಗಿದ ನಂತರ ಹಾಬ್ಸ್‌ಬಾಮ್‌ನ ಕುಟುಂಬ ಆಸ್ಟ್ರಿಯಾದ ವಿಯೆನ್ನಾದಲ್ಲಿ ನೆಲೆಸಿತು. ತನ್ನ ೧೩ನೆಯ ವಯಸ್ಸಿಗೇ ತಂದೆ ತಾಯಿ ಇಬ್ಬರನ್ನೂ ಕಳೆದುಕೊಂಡ ಎರಿಕ್ ಹಾಬ್ಸ್‌ಬಾಮ್ ತನ್ನ ಸೋದರ ಸಂಬಂಧಿಯೊಂದಿಗೆ ಜರ್ಮನಿಯ ಬರ್ಲಿನ್‌ನಲ್ಲಿ ನೆಲೆಸಿದ. ೧೯೩೩ರಲ್ಲಿ ಅಡಾಲ್ಫ್ ಹಿಟ್ಲರ್ ಅಧಿಕಾರಕ್ಕೆ ಬಂದ ನಂತರ ಹಾಬ್ಸ್‌ಬಾಮ್‌ನ ದತ್ತಕ ಕುಟುಂಬ ಲಂಡನ್‌ನಲ್ಲಿ ನೆಲೆಸಿತು. ತನ್ನ ಬಾಲ್ಯದ ದಿನಗಳನ್ನು ನೆನಪು ಮಾಡಿಕೊಳ್ಳುತ್ತಿದ್ದ ಸಂದರ್ಭದಲ್ಲಿ ಎರಿಕ್ ಹಾಬ್ಸ್‌ಬಾಮ್ ತಾನು ಯಹೂದಿ ಆಗಿರದಿದ್ದರೆ ಜರ್ಮನಿಯಲ್ಲೇ ಇದ್ದು ನಾಜಿಯಾಗಿರುತ್ತಿದ್ದೆ ಎಂದು ಹೇಳಿಕೊಂಡಿದ್ದಾನೆ. ವಿಯೆನ್ನಾ ಮತ್ತು ಬರ್ಲಿನ್‌ಗಳಲ್ಲಿ ಆರಂಭಿಕ ವಿದ್ಯಾಭ್ಯಾಸವಾದ ನಂತರ ಕೇಂಬ್ರಿಡ್ಜ್ ವಿಶ್ವವಿದ್ಯಾಲಯದಲ್ಲಿ ಇತಿಹಾಸ ವಿಷಯದಲ್ಲಿ ಪಿಎಚ್.ಡಿ. ಪದವಿ ಪಡೆದ ಎರಿಕ್ ಹಾಬ್ಸ್‌ಬಾಮ್ ಸ್ವಲ್ಪ ಕಾಲ ಎರಡನೆಯ ಮಹಾಯುದ್ಧದಲ್ಲೂ ಬ್ರಿಟಿಷ್ ಸೈನ್ಯದಲ್ಲಿ ಸೇವೆ ಸಲ್ಲಿಸಿದ್ದ. ಪ್ರತಿಯೊಬ್ಬ ಇತಿಹಾಸಕಾರನಿಗೂ ತನ್ನ ಜೀವಮಾನ ಪರ್ಯಂತ ಪ್ರಪಂಚದ ಇತಿಹಾಸದ ಸರ್ವೇಕ್ಷಣೆಗಾಗಿ ಸ್ವಂತ ಅವಕಾಶಗಳಿರಬೇಕು ಎಂಬುದು ಹಾಬ್ಸ್‌ಬಾಮ್‌ನ ಅಭಿಪ್ರಾಯವಾಗಿತ್ತು.

೧೯೩೧ರ ವೇಳೆಗೆ ಮಾರ್ಕ್ಸ್‌ನನ್ನು ಓದಿಕೊಂಡಿದ್ದ ಹಾಬ್ಸ್‌ಬಾಮ್ ೧೯೩೩ರ ಹೊತ್ತಿಗೇ ಎಡಪಂಥೀಯ ಚಳವಳಿಯ ಭಾಗವೇ ಆಗಿದ್ದ ಸಮಾಜವಾದಿ ಶಾಲಾ ಬಾಲಕರ ಗುಂಪಿನ ಸದಸ್ಯನಾಗಿ ತನ್ನ ಜೀವನದ ಕೊನೆಯ ದಿನಗಳವರೆಗೂ ಎಡಪಂಥೀಯನಾಗಿಯೇ ಉಳಿದ. ೧೯೩೩ರವರೆಗೆ ಬರ್ಲಿನ್‌ನಲ್ಲೇ ಇದ್ದ ಹಾಬ್ಸ್‌ಬಾಮ್‌ನ ಕುಟುಂಬವು, ಸಿಡ್ನಿ ಹಾಬ್ಸ್‌ಬಾಮ್ (ಎರಿಕ್ ಹಾಬ್ಸ್‌ಬಾನ್‌ನ ಚಿಕ್ಕಪ್ಪ)ಗೆ ವರ್ಗಾವಣೆ ಆದ ಕಾರಣ ಇಂಗ್ಲೆಂಡ್‌ನಲ್ಲಿ ನೆಲೆಸಿತು. ನಂತರ ಜೀವಮಾನದ ಕೊನೆಯವರೆಗೂ ಎರಿಕ್ ಹಾಬ್ಸ್‌ಬಾಮ್ ಇಂಗ್ಲೆಂಡ್‌ನಲ್ಲೇ ಉಳಿದ.

ಬರ್ಲಿನ್‌ನಲ್ಲಿ ಪ್ರಾಥಮಿಕ ಶಿಕ್ಷಣ ಪಡೆಯುತ್ತಿದ್ದ ವೇಳೆಯಲ್ಲೇ ಸಮಾಜವಾದಿ ಹಿನ್ನೆಲೆಯ ಸಂಘಟನೆಯಲ್ಲಿ ಸೇರಿಕೊಂಡು, ಮುಂದುವರಿದು, ಕಮ್ಯುನಿಸ್ಟ್ ತತ್ವಗಳಿಂದ ಆಕರ್ಷಿತನಾಗಿದ್ದ ಎರಿಕ್ ಹಾಬ್ಸ್‌ಬಾಮ್, ತನ್ನ ಕೊನೆಯ ಕ್ಷಣಗಳವರೆಗೂ ಆ ತತ್ವಗಳಿಂದ ವಿಚಲಿತನಾಗಲಿಲ್ಲ. ಶಾಲಾ ಬಾಲಕನಾಗಿದ್ದಾಗಲೇ ಜರ್ಮನ್ ಮಾತ್ರವಲ್ಲದೆ, ಇಂಗ್ಲಿಷ್, ಸ್ಪ್ಯಾನಿಷ್ ಮತ್ತು ಇಟಾಲಿಯನ್ ಭಾಷೆಗಳಲ್ಲೂ ಹಿಡಿತ ಸಾಧಿಸಿದ್ದ ಹಾಬ್ಸ್‌ಬಾಮ್, ಕೇಂಬ್ರಿಡ್ಜ್‌ನ ಕಿಂಗ್ಸ್ ಕಾಲೇಜಿನಲ್ಲಿ ಓದುತ್ತಿದ್ದಾಗಲೇ ಸಹಪಾಠಿಗಳಿಂದ 'ಹಾಬ್ಸ್‌ಬಾಮ್‌ಗೆ ತಿಳಿಯದ್ದೇನೂ ಇಲ್ಲ' ಎಂದು ಮೆಚ್ಚುಗೆ ಪಡೆದಿದ್ದ ಹಾಬ್ಸ್‌ಬಾಮ್ ಶಾಲಾ ವಿದ್ಯಾರ್ಥಿಗಳ ವಾರಪತ್ರಿಕೆಯಾದ 'ಗ್ರಾಂಟಾ'ದ ಸಂಪಾದನೆಯನ್ನೂ ಮಾಡುತ್ತಿದ್ದ. ಕೇಂಬ್ರಿಡ್ಜ್ ವಿಶ್ವವಿದ್ಯಾಲಯದಿಂದಲೇ ತನ್ನ ಫೇಬಿಯಾನ್ ಸಮಾಜ ಕುರಿತು ಮಾಡಿದ ಸಂಶೋಧನೆಗೆ ಪಿಎಚ್.ಡಿ. ಪದವಿ ಪಡೆದ ಹಾಬ್ಸ್‌ಬಾಮ್ ಬರ್ಕ್‌ಬೆಕ್ ಕಾಲೇಜಿನಲ್ಲಿ ಇತಿಹಾಸ ಉಪನ್ಯಾಸಕನಾಗಿ ವೃತ್ತಿಜೀವನವನ್ನು ಆರಂಭಿಸಿ, ೧೯೫೯ರಲ್ಲಿ ಪ್ರವಾಚಕನಾಗಿ ಬಡ್ತಿ ಪಡೆದರೂ ಪ್ರಾಧ್ಯಾಪಕನಾಗಲು ೧೯೭೦ರವರೆಗೆ ಕಾಯಬೇಕಾಯಿತು. ೧೯೮೨ರಲ್ಲಿ ವೃತ್ತಿಜೀವನದಿಂದ ನಿವೃತ್ತಿ ಹೊಂದಿದರೂ, ವಿಷಯದ ಬಗೆಗಿನ ನಂಟನ್ನು ಕಳೆದುಕೊಳ್ಳಲೇ ಇಲ್ಲ. ಎಡಪಂಥೀಯನಾಗಿದ್ದ ಕಾರಣದಿಂದಲೇ ಹಾಬ್ಸ್‌ಬಾಮ್‌ಗೆ ವೃತ್ತಿ ಜೀವನದಲ್ಲಿ ಹಲವು ಅಡಚಣೆಗಳು ಬಂದವು ಎಂದು ತಿಳಿಯಲಾದರೂ, ಅದರಿಂದ ಅವನು ಎಂದೂ ವಿಚಲಿತನಾಗಿರಲಿಲ್ಲ. ೧೯೮೪ರಿಂದ ೧೯೯೭ರವರೆಗೂ ಮನ್‌ಹಟನ್‌ನ ಶೈಕ್ಷಣಿಕ ಸಂಸ್ಥೆಯೊಂದರ ಸಾಮಾಜಿಕ ಸಂಶೋಧನಾ ಕೇಂದ್ರದಲ್ಲಿ ಸಂದರ್ಶಕ ಪ್ರಾಧ್ಯಾಪಕನಾಗಿ ಕಾರ್ಯ ನಿರ್ವಹಿಸಿದ್ದ.




೧೯೩೬ರಲ್ಲಿ ಕಮ್ಯುನಿಸ್ಟ್ ಪಕ್ಷಕ್ಕೆ ಸೇರಿದ ಹಾಬ್ಸ್‌ಬಾಮ್ ೧೯೪೬ರಿಂದ ೧೯೫೬ರವರೆಗೆ ಪಕ್ಷದ ಚರಿತ್ರಕಾರರ ತಂಡದ ಸದಸ್ಯನಾಗಿದ್ದ. ಕಮ್ಯುನಿಸ್ಟ್ ಪಕ್ಷದ ನಿಷ್ಠಾವಂತ ಸದಸ್ಯನಾದರೂ, ತನಗೆ ಒಪ್ಪಿಗೆಯಾಗದ ಯಾವುದೇ ವಿಷಯವನ್ನು ನಿರಾಕರಿಸುತ್ತಿದ್ದ. ೧೯೫೨ರಲ್ಲಿ ಕಮ್ಯುನಿಸ್ಟ್ ಪಕ್ಷದ ಕೆಲವು ಇತಿಹಾಸಪ್ರಿಯ ಸ್ನೇಹಿತರ ಜೊತೆಗೆ ಸೇರಿಕೊಂಡು 'ಪಾಸ್ಟ್ ಅಂಡ್ ಪ್ರೆಸೆಂಟ್' (ಭೂತ ಮತ್ತು ವರ್ತಮಾನ) ನಿಯತಕಾಲಿಕೆಯನ್ನು ಆರಂಭಿಸಿ ಕಾರ್ಮಿಕ ವರ್ಗದ ಇತಿಹಾಸದ ಬಗ್ಗೆ ಶ್ಲಾಘನೀಯ ಕೆಲಸ ಮಾಡಿದ. ೧೯೫೬ರಲ್ಲಿ ಸೋವಿಯತ್ ಒಕ್ಕೂಟ ವ್ಯವಸ್ಥೆಯ ಹಂಗೇರಿಯ ಮೇಲಿನ ಆಕ್ರಮಣವನ್ನು ಒಪ್ಪದೆ ಬ್ರಿಟನ್‌ನ ಕೆಲವು ಕಮ್ಯುನಿಸ್ಟರು ಪಕ್ಷವನ್ನು ತ್ಯಜಿಸಿದ್ದರು; ಸೋವಿಯತ್ ರಷ್ಯಾದ ಕ್ರಮವನ್ನು ಒಪ್ಪದಿದ್ದರೂ ಹಾಬ್ಸ್‌ಬಾಮ್ ಪಕ್ಷವನ್ನು ತ್ಯಜಿಸಲಿಲ್ಲ. ಪೋಲೆಂಡ್ ಮತ್ತು ಹಂಗೇರಿಗಳ ಬಂಡಾಯವನ್ನು ಬಂಡವಾಳಶಾಹಿಗಳು ಮತ್ತು ತೋರಿಕೆಯ ಕಮ್ಯುನಿಸ್ಟರ ವಿರುದ್ಧ ಕಾರ್ಮಿಕರು ಮತ್ತು ಬುದ್ಧಿಜೀವಿಗಳ ಬಂಡಾಯವೆಂದು

ಅರ್ಥೈಸಿದ. ಹೀಗೆ ಸೋವಿಯತ್ ರಷ್ಯಾದ ಎಲ್ಲ ಚಟುವಟಿಕೆಗಳನ್ನೂ ಬೆಂಬಲಿಸದೆ, ತನಗೆ ಸರಿ ಎನಿಸಿದ್ದನ್ನು ಮಾತ್ರ ಒಪ್ಪಿಕೊಂಡು ತಪ್ಪು ಎನಿಸಿದ ಎಲ್ಲವನ್ನೂ ನಿರಾಕರಿಸುತ್ತಿದ್ದ ಎರಿಕ್ ಹಾಬ್ಸ್‌ಬಾಮ್ ನೇರನಡೆ ಮತ್ತು ನುಡಿಯ ಕಮ್ಯುನಿಸ್ಟನಾಗಿ ಉಳಿದ. ೧೯೭೮ರ ಮಾರ್ಚ್ ತಿಂಗಳಿನಲ್ಲಿ ಸಹ ಮಾರ್ಕ್ಸಿಸ್ಟ್ ಶ್ರೋತೃಗಳಿಗೆ 'ಕಾರ್ಮಿಕರ ಮುನ್ನಡೆಗೆ ತಡೆ' ಎಂಬ ಮಾರ್ಕ್ಸ್ ಸ್ಮಾರಕ ಉಪನ್ಯಾಸವನ್ನು ಮಾಡಿದ. ಅದು ನಂತರ ಮಾರ್ಕ್ಸಿಸಂ ಟುಡೇ ಪತ್ರಿಕೆಯಲ್ಲಿ ಪ್ರಕಟವಾಯಿತು. ಬ್ರಿಟಿಷ್ ಲೇಬರ್ ಪಕ್ಷದ ನೀಲ್ ಕಿನಾಕ್ಸ್‌ನ ಕಾರ್ಮಿಕ ಪರವಾದ ಚಟುವಟಿಕೆಗಳನ್ನು ಹಾಬ್ಸ್‌ಬಾಮ್ ಉತ್ತೇಜಿಸುತ್ತಿದ್ದ. ಇದು ಟೋನಿ ಬ್ಲೇರ್‌ನ ಪರವಾದ ಮಾತು ಎನಿಸಿದರೂ, ಹಾಬ್ಸ್‌ಬಾಮ್ ಟೋನಿ ಬ್ಲೇರ್‌ನನ್ನು ಎಲ್ಲ ವಿಷಯಗಳಲ್ಲೂ ಸಮರ್ಥಿಸುತ್ತಿರಲಿಲ್ಲ. ೧೯೬೦ರ ನಂತರ ಹಾಬ್ಸ್‌ಬಾಮ್ ಸೋವಿಯತ್ ಒಕ್ಕೂಟದ ಎಲ್ಲ ಸಮಾಜವಾದಿ ನಿಲುವುಗಳನ್ನು ಒಪ್ಪಿಕೊಳ್ಳದಿದ್ದರೂ, ತನ್ನ ಬದುಕಿನುದ್ದಕ್ಕೂ ನಿಷ್ಠಾವಂತ ಮಾರ್ಕ್ಸ್‌ವಾದಿಯಾಗಿಯೇ ಉಳಿದ. ಆದರೆ ಮಾನವೀಯ ಮೌಲ್ಯಗಳ ವಿಚಾರದಲ್ಲಿ ದೂರದೃಷ್ಟಿಯ ಕೊರತೆ ಎದ್ದುಕಾಣುತ್ತಿದೆ ಎಂದು ಅವನು ತಿಳಿದಿದ್ದ.

ಕಳೆದ ಶತಮಾನದ ೬೦ರ ದಶಕದ ಬಹುತೇಕ ಇತಿಹಾಸಕಾರರು ಹಾಬ್ಸ್‌ಬಾಮ್‌ನ ಆಕರ ಸಂಗ್ರಹಣೆ, ಅವುಗಳ ಖಚಿತ ಮೌಲ್ಯಮಾಪನ ಮತ್ತು ಸ್ಪಷ್ಟ ಅಭಿವ್ಯಕ್ತಿಯನ್ನು ಮೆಚ್ಚಿಕೊಂಡಿದ್ದಾರೆ. ಇತಿಹಾಸವು ಆಧಾರಸಹಿತ ವಿಶ್ಲೇಷಿಸಬೇಕಾದ ಶಾಸ್ತ್ರ ಎಂಬುದು ಹಾಬ್ಸ್‌ಬಾಮ್‌ನ ನಿಲುವಾಗಿತ್ತು. ಬ್ರಿಟಿಷ್ ಇತಿಹಾಸಕಾರರು ಹಾಬ್ಸ್‌ಬಾಮ್‌ನನ್ನು ಎಡಪಂಥೀಯ ಇತಿಹಾಸಕಾರ ಎಂದು ಹಣೆಪಟ್ಟಿ ಕಟ್ಟಿ ಗುರುತಿಸಿಲ್ಲ. ಅವನ ಪೂರ್ವಾಗ್ರಹವಿಲ್ಲದ ಐತಿಹಾಸಿಕ ಜ್ಞಾನವನ್ನು ೨೦ನೆಯ ಶತಮಾನದ ಇತಿಹಾಸಕಾರರು ಮುಕ್ತವಾಗಿ ಒಪ್ಪಿಕೊಂಡಿದ್ದಾರೆ.

ಹಾಬ್ಸ್‌ಬಾಮ್‌ನ ಮೊದಲ ಕೃತಿ ೧೯೫೯ರಲ್ಲಿ ಪ್ರಕಟವಾದ 'ಪ್ರಿಮಿಟಿವ್ ರೆಬೆಲ್ಸ್' ಹೆಸರೇ ಸೂಚಿಸುವಂತೆ ಅದು ಪ್ರಾಚೀನ ಬಂಡಾಯಗಾರರನ್ನು ಕುರಿತದ್ದು. ಇತಿಹಾಸದಲ್ಲಿ ವ್ಯವಸ್ಥೆಯ ವಿರುದ್ಧ ನಿಂತು ಹೋರಾಡಿದವರ ಬಗ್ಗೆ ತಿಳಿಯಬೇಕಾದ್ದು ಅವಶ್ಯಕ ಎನ್ನುವ ಅರಿವು ಹಾಬ್ಸ್‌ಬಾಮ್‌ಗಿತ್ತು. ನಂತರ ೧೯೬೨ರಲ್ಲಿ ಪ್ರಕಟವಾದದ್ದು ಹಾಬ್ಸ್‌ಬಾಮ್‌ನಲ್ಲಿದ್ದ ಸತ್ಯಾನ್ವೇಷಕನನ್ನು ಅನಾವರಣಗೊಳಿಸಿದ 'ಕ್ರಾಂತಿಯುಗ'. ಯುಗ ಸರಣಿಯ ಮಾಲಿಕೆಯಲ್ಲಿ ನಾಲ್ಕು ಪ್ರಮುಖ ಕೃತಿಗಳನ್ನು ಹಾಬ್ಸ್‌ಬಾಮ್ ಬರೆದಿದ್ದ. ಅವುಗಳಲ್ಲಿ ಮೊದಲನೆಯದು 'ಕ್ರಾಂತಿಯುಗ' (೧೭೮೯-೧೮೪೮), ಎರಡನೆಯದು 'ಬಂಡವಾಳಶಾಹಿ ಯುಗ' (೧೮೪೮-೧೮೭೫), ಮೂರನೆಯದು 'ಸಾಮ್ರಾಜ್ಯಶಾಹಿ ಯುಗ' (೧೮೭೫-೧೯೧೪) ಮತ್ತು ನಾಲ್ಕನೆಯ ಹಾಗೂ ಸರಣಿಯ ಕೊನೆಯ ಕೃತಿ 'ಉಗ್ರಗಾಮಿ ಯುಗ' (೧೯೧೪-೧೯೯೧) ಇವು ಹಾಬ್ಸ್‌ಬಾಮ್‌ನ ವ್ಯಾಪಕ ಅಧ್ಯಯನ ಮತ್ತು ಸಂಶೋಧನೆಗಳ ಫಲವೆಂಬುದು ಬಹುತೇಕ ವಿಮರ್ಶಕರ ಅಭಿಪ್ರಾಯ.

ಕಾರ್ಮಿಕ ನಾಯಕ ಎಡ್ ಮಿಲಿಬಾಂಡ್‌ನ ಪ್ರಕಾರ ಹಾಬ್ಸ್‌ಬಾಮ್ ತಾನು ನಂಬಿದ್ದ ತತ್ವಗಳಿಗೆ ಬದ್ಧನಾಗಿದ್ದ ಮತ್ತು ಬ್ರಿಟಿಷ್ ಇತಿಹಾಸದ ನೂರಾರು ವರ್ಷಗಳನ್ನು ದಂತದ ಗೋಪುರದಿಂದ ಕೆಳಗಿಳಿಸಿ ಜನರ ಹತ್ತಿರ ತಂದ ಇತಿಹಾಸಕಾರ. ೧೯೯೮ರಲ್ಲಿ ಇಂಗ್ಲೆಂಡ್‌ನ ರಾಷ್ಟ್ರೀಯ ಗೌರವವನ್ನು ಪಡೆದ ಹಾಬ್ಸ್‌ಬಾಮ್ ೨೦೦೩ರಲ್ಲಿ ೧೯೦೦ರಿಂದ ನಂತರದ ಯೂರೋಪಿನ ಇತಿಹಾಸದ ಅಧ್ಯಯನಕ್ಕೆ ಬಾಲ್ಜಾನ್ ಪ್ರಶಸ್ತಿಯನ್ನೂ ಪಡೆದಿದ್ದ.

ಮಾರ್ಕ್ಸ್‌ವಾದಿ ಇತಿಹಾಸಕಾರನಾಗಿ ಹಾಬ್ಸ್‌ಬಾಮ್ ಫ್ರಾನ್ಸ್ ಮತ್ತು ಬ್ರಿಟನ್‌ಗಳ ಕೈಗಾರಿಕಾ ಕ್ರಾಂತಿಯನ್ನು ವಿಶ್ಲೇಷಿಸಿದ್ದಾನೆ. ಬಂಡವಾಳಶಾಹಿ ವ್ಯವಸ್ಥೆಯಿಂದ ಬಿಡುಗಡೆ ಪಡೆಯುವಲ್ಲಿ ಕ್ರಾಂತಿಗಳು ಮಹತ್ವದ ಪಾತ್ರವಹಿಸುತ್ತವೆ ಎಂಬುವುದು ಅವನ ನಂಬಿಕೆಯಾಗಿತ್ತು. ಸಾಮಾಜಿಕ ದರೋಡೆಯ ಬಗ್ಗೆ ಹಾಬ್ಸ್‌ಬಾಮ್‌ನ ವಿಚಾರಗಳು ಬಹಳ ತೀಕ್ಷ್ಣವಾಗಿದ್ದವು. ೧೯೬೮ರ ನಂತರ ಯೂರೋ ಕಮ್ಯುನಿಸ್ಟ್ ಶಕ್ತಿಯನ್ನು ಬಲಪಡಿಸಲು ಹಾಬ್ಸ್‌ಬಾಮ್ ಪ್ರಯತ್ನ ಮಾಡಿದ. ಮೊದಲಿಗೆ 'ಮಾರ್ಕ್ಸ್‌ನ ನೂರು ವರ್ಷಗಳ ನಂತರ ಬ್ರಿಟಿಷ್ ಕಾರ್ಮಿಕ ವರ್ಗ' ಎಂಬ ಉಪನ್ಯಾಸವು ನಂತರ 'ಕಾರ್ಮಿಕ ವರ್ಗದ ಮುನ್ನಡೆಗೆ ತಡೆ' ಎಂಬ ಹೆಸರಿನಲ್ಲಿ ಪ್ರಸಿದ್ಧವಾಯಿತು. ಕಾರ್ಮಿಕ ವರ್ಗದ ಬಗ್ಗೆ ಸಹಜವಾಗಿಯೇ ಹಾಬ್ಸ್‌ಬಾಮ್‌ಗೆ ಹೆಚ್ಚಿನ ಕಾಳಜಿ ಇತ್ತು. ಅವರಿಂದ ಮಾತ್ರ ಒಂದು ರಾಷ್ಟ್ರ ಪ್ರಗತಿಯನ್ನು ಸಾಧಿಸಬಹುದು ಎಂದು ಬಲವಾಗಿ ನಂಬಿದ್ದ ಇತಿಹಾಸಕಾರ ಹಾಬ್ಸ್‌ಬಾಮ್. ಬಹುತೇಕ ಈ ಕಾರಣದಿಂದಲೇ ಕೆಲವು ಕಮ್ಯುನಿಸ್ಟ್ ನಾಯಕರ ನಡೆಗಳನ್ನು ಅವನು ಆಕ್ಷೇಪಿಸುತ್ತಿದ್ದಂತೆ ಕಾಣುತ್ತದೆ.

೧೯೪೮ರಲ್ಲಿ ತನ್ನ 'ಲೇಬರ್ಸ್ ಟರ್ನಿಂಗ್ ಪಾಯಿಂಟ್' ಎಂಬ ಕೃತಿಯ ಮೂಲಕ ಓದುಗರನ್ನು ತಲುಪಿದ ಹಾಬ್ಸ್‌ಬಾಮ್‌ನ ಬಹು ಚರ್ಚಿತ ಕೃತಿ 'ಪ್ರಿಮಿಟಿವ್ ರೆಬೆಲ್ಸ್' ೧೯೫೯ರಲ್ಲಿ ಪ್ರಕಟವಾಯಿತು. ಆಗಿನಿಂದ ೨೦೧೧ರವರೆಗೂ ಹಾಬ್ಸ್‌ಬಾಮ್‌ನ ಪ್ರಕಟಿತ ಕೃತಿಗಳ ಸಂಖ್ಯೆ ೨೫ನ್ನು ದಾಟುತ್ತದೆ. ಇವುಗಳ ಪೈಕಿ ಯುಗ ಸರಣಿಯ ನಾಲ್ಕು ಕೃತಿಗಳು ಹಾಬ್ಸ್‌ಬಾಮ್‌ಗೆ ಸಮಾಜ ಮತ್ತು ಅದರ ಬೆಳವಣಿಗೆಯ ಬಗ್ಗೆ ಇದ್ದ ಚಾರಿತ್ರಿಕ ಅರಿವಿನ ಪರಿಚಯ ಮಾಡುತ್ತವೆ. ತನ್ನ ಇತಿಹಾಸದ ಅಧ್ಯಯನಕ್ಕೆ ಯೂರೋಪನ್ನು ಪ್ರಮುಖವಾಗಿ ಆಯ್ಕೆ ಮಾಡಿಕೊಂಡಿದ್ದರೂ ಹಾಬ್ಸ್‌ಬಾಮ್ ಅದರ ಹಿನ್ನೆಲೆಯಲ್ಲಿ ಇಡೀ ವಿಶ್ವದ ಇತಿಹಾಸವನ್ನು ತಿಳಿಯುವ, ಪರಿಶೀಲಿಸುವ ಮತ್ತು ವಿಶ್ಲೇಷಿಸುವ ಸಾರ್ಥಕ ಪ್ರಯತ್ನವನ್ನು ಮಾಡಿದ್ದಾನೆ. ಕ್ರಿ.ಶ. ೧೭೮೯ರಿಂದ ೧೯೯೧ರವರೆಗಿನ, ಪ್ರಮುಖವಾಗಿ ಜಾಗತಿಕ ಇತಿಹಾಸ ಮತ್ತು ವಿಶೇಷವಾಗಿ ಯೂರೋಪಿನ ಇತಿಹಾಸದ ಬಗ್ಗೆ ಚೆನ್ನಾಗಿ ತಿಳಿಯಬೇಕೆನ್ನುವವರು ಅಭ್ಯಾಸ ಮಾಡಲೇಬೇಕಾದ ಯುಗ ಸರಣಿಯ ಕೃತಿಗಳು ಇವು. ಈ ನಾಲ್ಕು ಕೃತಿಗಳ ಮೂಲಕ ಹಾಬ್ಸ್‌ಬಾಮ್‌ನ ಹೆಸರು ಬಹಳ ಕಾಲ ಉಳಿಯುತ್ತದೆ ಎನ್ನುವುದರಲ್ಲಿ ಸಂದೇಹವಿಲ್ಲ.

ಹಾಬ್ಸ್‌ಬಾಮ್‌ನ ಬಹುಮುಖೀ ಆಸಕ್ತಿಯನ್ನು ಅವನ 'ನೇಷನ್ ಅಂಡ್ ನೇಷನಲಿಜಂ ಸಿನ್ಸ್ ೧೭೮೦' ಮತ್ತು 'ದಿ ಇನ್ವೆನ್ಷನ್ ಆಫ್ ಟ್ರೆಡಿಷನ್' ಕೃತಿಗಳಲ್ಲಿ ಗುರುತಿಸಬಹುದು. ಪ್ರಾಥಮಿಕವಾಗಿ ರಾಜಕೀಯ ಮತ್ತು ರಾಷ್ಟ್ರೀಯ ತತ್ವಗಳು ಸಂಗತವಾಗುವ ಕ್ರಮವೇ ರಾಷ್ಟ್ರೀಯತೆ. ಇದು ಯಾವುದೇ ಗಂಭೀರ ಇತಿಹಾಸಕಾರನ ಅಭಿಪ್ರಾಯ ಎನ್ನುವುದನ್ನು ಕೆಲವು ವಿಮರ್ಶಕರು ಒಪ್ಪಿಕೊಂಡಿದ್ದಾರೆ.

೨೦೧೧ರ ನವೆಂಬರ್ ತಿಂಗಳಿನಲ್ಲಿ ಹಾಬ್ಸ್‌ಬಾಮ್‌ನನ್ನು ಲಂಡನ್‌ನಲ್ಲಿ ಭೇಟಿ ಮಾಡಿ, ಮಾತನಾಡಿಸಿದ್ದ ಭಾರತೀಯ ಕಮ್ಯುನಿಸ್ಟ್ ಪಕ್ಷ (ಮಾರ್ಕ್ಸಿಸ್ಟ್)ದ ಪ್ರಧಾನ ಕಾರ್ಯದರ್ಶಿ ಪ್ರಕಾಶ ಕಾರಟ್ ಅವರ ಪ್ರಕಾರ ಹಾಬ್ಸ್‌ಬಾಮ್ ಮಾನವಿಕ ಮತ್ತು ಸಮಾಜ ವಿಜ್ಞಾನಗಳಿಗೆ ಸಂಬಂಧಿಸಿದಂತೆ ವಿಶ್ವಕೋಶದ ಸ್ವರೂಪದ ವಿದ್ವಾಂಸ. ಐತಿಹಾಸಿಕ ವಿಚಾರಗಳು ಮಾತ್ರವೇ ಅಲ್ಲದೆ ವರ್ತಮಾನದ ಪ್ರತಿಯೊಂದು ಘಟನೆ ಮತ್ತು ನಡೆಯ ಬಗೆಗೂ ಹಾಬ್ಸ್‌ಬಾಮ್‌ಗೆ ಸ್ಪಷ್ಟ ತಿಳಿವಳಿಕೆ ಇತ್ತು. ಹಾಬ್ಸ್‌ಬಾಮ್ ತನ್ನ ೯೪ನೆಯ ವಯಸ್ಸಿನಲ್ಲಿ ಬರೆದಿದ್ದ 'ಹೌ ಟು ಚೇಂಜ್ ದಿ ವರ್ಲ್ಡ್ : ಮಾರ್ಕ್ಸ್ ಅಂಡ್ ಮಾರ್ಕ್ಸಿಸಂ' ಕೃತಿಯನ್ನು ಮೆಚ್ಚಿಕೊಂಡಿರುವ ಪ್ರಕಾಶ ಕಾರಟ್ ಅವರು ತಮ್ಮ ಭೇಟಿಯ ವೇಳೆ ಹಾಬ್ಸ್‌ಬಾಮ್ ಆಸಕ್ತಿಯಿಂದ ಆಡಿದ ಭಾರತದ ಮಾತ್ರವಲ್ಲದೆ ಪ್ರಪಂಚದ ಆಗುಹೋಗುಗಳ ಬಗೆಗಿನ ಮಾತುಗಳನ್ನು ಕೇಳಿ ಹಾಬ್ಸ್‌ಬಾಮ್‌ನನ್ನು ಕೇವಲ ಬ್ರಿಟಿಷ್ ಇತಿಹಾಸಕಾರ ಎನ್ನಲೊಪ್ಪದೆ ಅಂತರರಾಷ್ಟ್ರೀಯ ಇತಿಹಾಸಕಾರ ಎಂದು ಒಪ್ಪಿಕೊಂಡಿರುವುದು ಹಾಬ್ಸ್‌ಬಾಮ್‌ಗೆ ಕಳೆದುಹೋದ ಇತಿಹಾಸದ ಬಗ್ಗೆ ಮಾತ್ರವಲ್ಲದೆ ವರ್ತಮಾನದ ರಾಜಕೀಯ ಮತ್ತು ಸಾಮಾಜಿಕ ಆಗುಹೋಗುಗಳ ಬಗೆಗೂ ಇದ್ದ ಕಳಕಳಿ ಮತ್ತು ಬದ್ಧತೆಯನ್ನು ಸೂಚಿಸುತ್ತವೆ. ಇಂತಹ ಅಪರೂಪದ, ಎಡಪಂಥೀಯನಾದರೂ, ಎಲ್ಲ ವರ್ಗಕ್ಕೂ ಮತ್ತು ಎಲ್ಲ ಕಾಲಕ್ಕೂ, ಸಲ್ಲುವ ನಿಷ್ಠಾವಂತ ಇತಿಹಾಸಕಾರ ಎರಿಕ್ ಹಾಬ್ಸ್‌ಬಾಮ್ ಇನ್ನು ಮುಂದೆ ಭೌತಿಕವಾಗಿ ನಮ್ಮೊಂದಿಗಿರುವುದಿಲ್ಲ ಎಂಬುದು ನೋವಿನ ಸಂಗತಿಯಾದರೂ, ಹಾಬ್ಸ್‌ಬಾಮ್ ತನ್ನ ಕೃತಿಗಳ ಮೂಲಕ ಜೀವಂತವಾಗಿರುತ್ತಾರೆ ಎಂಬುದು ಸತ್ಯ.

**ಡಾ|| ಎಚ್. ಎಸ್. ಗೋಪಾಲ ರಾವ್**
ನಂ. ೧೪೪, 'ಸ್ವಸ್ತಿಶ್ರೀ ಸ್ಕಂದ', ಐ.ವೈ.ಡಿ.ರಸ್ತೆ
ಅರಸಿನಕುಂಟೆ, ನೆಲಮಂಗಲ ತಾಲ್ಲೂಕು
ಬೆಂಗಳೂರು ಗ್ರಾಮಾಂತರ ಜಿಲ್ಲೆ - ೫೬೨ ೧೨೩

### ಊಟಗಳು

ಆ ಸಚಿವರ ಮನೆಯಲಿ
ಭೋಜನ ಕೂಟ;
ಈ ಶಾಸಕರ ಗೃಹದಲಿ
ಬಹು ಜನರ ಕೂಟ;
ತಡೆಯೋಕ್ಕಾಗದೆ
ಜನರ ಕಾಟ,
ಜನಪ್ರತಿನಿಧಿಗಳಿಂದ
ರೆಸಾರ್ಟ್ ಕೂಟ;
ಗೊತ್ತಿಲ್ವೆ ಇವರಿಗೆ
ಪ್ರಜೆಗಳ ಪರದಾಟ ?!

**ಡಾ|| ವಿ. ಪುಗಳೇಂದಿ**
ಬಳ್ಳಾರಿ



‘‘ನರಸಯ್ಯ, ನೀನು ನಾಳೆನೇ ಸಂನ್ಯಾಸತ್ವ ತಕ್ಕೊಬೇಕು. ನಮ್ಮೂರ ಮಠಕ್ಕೆ ನೀನೆ ಸ್ವಾಮಿ. ಇಲ್ಲಾಂದ್ರೆ...’’ ರಂಗಾರೆಡ್ಡಿ ಗುಡುಗಿದ. ರೆಡ್ಡಿ ಹೇಳಿದ ಹಾಗೆ ಮಾಡಲಿಲ್ಲಾಂದ್ರೆ ಅವನ ವಂಶಾನ ನಿರ್ವಂಶ ಮಾಡುತ್ತೇವೆಂದು ಬೆದರಿಸುವ ದನಿಯಲ್ಲಿ ಮಾತನಾಡಿ, ಎಲ್ಲರೂ ದರದರನೆ ಹೊರನಡೆದರು. ನರಸಯ್ಯನಿಗೆ ಏನು ಮಾಡಬೇಕೆಂದು ತೋರಲಿಲ್ಲ. ‘‘ನಾನು ಕೆಲಸಕ್ಕೆ ರಾಜೀನಾಮೆ ನೀಡುವ ಹಿನ್ನೆಲೆಯನ್ನು ಮುಚ್ಚಿಡಲು ಸಂನ್ಯಾಸತ್ವದ ಕಳ್ಳಾಟ ಆಡುತ್ತಿದ್ದಾನೆ ಈ ರಂಗಾರೆಡ್ಡಿ; ಸಂನ್ಯಾಸತ್ವ ತಗೊಂಡರೆ ನನ್ನ ಜಾಗದಲ್ಲಿ ತನ್ನವರನ್ನು ಹಾಕಿಸಿಕೊಂಡು, ದಲಿತರ ಜಮೀನನ್ನು ಲಪಟಾಯಿಸುವ ಹುನ್ನಾರ ಇದು’’ ಎಂದು ತಿಳಿದುಕೊಳ್ಳಲು ನರಸಯ್ಯನಿಗೆ ಹೆಚ್ಚು ಹೊತ್ತು ಬೇಕಾಗಿರಲಿಲ್ಲ. ಆದರೆ ಅವನನ್ನು ಎದುರಿಸುವ ಶಕ್ತಿ ಮತ್ತು ದೃಢತೆ ನರಸಯ್ಯನಿಗೆ ಇನ್ನೂ ಬಂದಿರಲಿಲ್ಲ. ಹೀಗಾಗಿ ತಾಯಿ, ಹೆಂಡತಿ ಮತ್ತು ಮಗಳನ್ನು ಬಿಟ್ಟು, ರಂಗಾರೆಡ್ಡಿ ಹೇಳಿದ ಹಾಗೆ ಸಂನ್ಯಾಸತ್ವ ತೆಗೆದುಕೊಂಡುಬಿಟ್ಟ.

# ನರಸಯ್ಯನ ಸಂನ್ಯಾಸತ್ವ

**ಡಾ|| ವಿಜಯಕುಮಾರ್ ಎಂ. ಬೋರಟ್ಟಿ**

ಕೂಡ್ಲೂರಿನ ದಲಿತರಲ್ಲಿ ಇದುವರೆಗು ಯಾರೂ ತಹಸೀಲ್ದಾರ ಮಟ್ಟಕ್ಕೆ ಬೆಳೆದಿರಲಿಲ್ಲ. ಆದ್ರೆ ನರಸಯ್ಯ ಮೈಸೂರಿಗೆ ಹೋಗಿ, ಎಸ್ಸಿ/ಎಸ್ಟಿ ಹಾಸ್ಟಲ್‌ನಲ್ಲಿ ಇದ್ದು, ಕಷ್ಟಪಟ್ಟು ಡಿಗ್ರಿ ಮುಗಿಸಿ, ಲಂಚ ಕೊಡದೆ, ಕೆ.ಪಿ.ಎಸ್.ಸಿ. ಆಯ್ಕೆಯಲ್ಲಿ ಪ್ರಥಮ ಸ್ಥಾನ ಗಿಟ್ಟಿಸಿಕೊಂಡು ತಹಸೀಲ್ದಾರನಾದ. ತನ್ನೂರಿನ ಹತ್ತಿರವಿರಬೇಕೆಂದು ಕೃಷ್ಣಪೇಟೆಯ ತಾಲ್ಲೂಕು ಕಛೇರಿಗೆ ವರ್ಗಾಯಿಸಿಕೊಂಡ. ಅಲ್ಲಿದ್ದ ಎಲ್ಲ ದಲಿತರು ಅವನನ್ನು ಮೆರವಣಿಗೆ ಸಮೇತ ಕರೆತಂದು, ಅಂಬೇಡ್ಕರ್ ಪಟದ ಪಕ್ಕದಲ್ಲಿ ನಿಲ್ಲಿಸಿ ಸತ್ಕರಿಸಿದರು. ‘‘ಇನ್ನು ನಮ್ಮ ಸಮಸ್ಯೆಗಳು ಸುಲಭವಾಗಿ ಬಗೆಹರಿಯುತ್ತವೆ’’ ಎಂದು ಎಲ್ಲರೂ ಸಮಾಧಾನದ ನಿಟ್ಟುಸಿರು ಬಿಟ್ಟರು. ನರಸಯ್ಯ ಅವರ ಆಕಾಂಕ್ಷೆಗಳಿಗೆ ತಣ್ಣೀರೆರಚದೆ, ಆಸೆ-ಆಮಿಷಗಳಿಗೆ ಬಲಿಯಾಗದೆ ಕೇವಲ ದಲಿತರ ಸಮಸ್ಯೆ ಮಾತ್ರವಲ್ಲ, ಎಲ್ಲಾ ಜನರ ಸಮಸ್ಯೆಗಳಿಗೆ ಜಾತಿ-ಗೀತಿ ಅಂತ ನೋಡದೆ ಸ್ಪಂದಿಸುತಿದ್ದ.

ತಾಯಿ ಸಾಕಮ್ಮನ ಕಾಟ ತಡೆಯಲಾರದೆ ತನ್ನ ಜಾತಿಯ ಸುಂದರ ಹೆಣ್ಣನ್ನು ಮದುವೆಯಾದ. ಒಂದೇ ವರ್ಷದಲ್ಲಿ ಆಟವಾಡಿಕೊಂಡಿರಲು ಸಾಕಮ್ಮನಿಗೆ ಮೊಮ್ಮಗಳನ್ನು ನೀಡಿದ. ಎಲ್ಲವೂ ಸರಿಯಾಗಿದೆ, ನಾನಿನ್ನು ಹಾಯಾಗಿ ಕಣ್ಮುಚ್ಚಿಕೊಳ್ಳಬಹುದೆಂದು ಕೊಂಡಿದ್ದ ಸಾಕಮ್ಮನಿಗೆ, ನರಸಯ್ಯ ಬೆಳ್ಳಂಬೆಳಗ್ಗೆ ಎದ್ದು ಕೂಡ್ಲೂರಿನ ಮಠಕ್ಕೆ ಹೋಗಿ ಸಂನ್ಯಾಸ ತೆಗೆದುಕೊಂಡದ್ದು ನೋಡಿ ಎದೆ ಒಡೆಯುವಂತಾಯಿತು. ಹೆಂಡತಿಯಂತೂ ಮೂರ್ಛೆ ಹೋಗಿ ಹಾಸಿಗೆ ಹಿಡಿದಳು. ಸಾಕಮ್ಮ, ‘‘ಅಯ್ಯೋ, ಈ ಮುಂಡೆಗಂಡಂಗೆ ಯಾರು ತಲೆ ಕೆಡಿಸ್ದ್ರೋ? ಏನು ದೆಯ್ಯ ಬಡೀತೋ? ನಮ್ಮನೆಲ್ಲಾ ನಡುನೀರಲ್ಲಿ ಬಿಟ್ಟು ಹೊರಟೋದ್ನಲಪ್ಪಾ’’ ಎಂದು ಎಲ್ಲರ ಎದುರಿಗೆ ಬಾಯಿ, ಬಾಯಿ ಬಡಕೊಳ್ಳತೊಡಗಿದಳು. ಕೂಡ್ಲೂರಿನ ದಲಿತರಿಗಂತೂ ಇದನ್ನು ನಂಬೋದಕ್ಕೆ ಆಗಲೇ ಇಲ್ಲ. ಆದರೆ ಏನು ಮಾಡಬೇಕೆಂದು ಅವರಿಗೆ ತೋಚಲಿಲ್ಲ. ನರಸಯ್ಯ ಹಿಂಗ್ಯಾಕೆ ಮಾಡಿದ ಅನ್ನೊ ವಿಷಯ ಎಲ್ಲರಿಗೂ ರಹಸ್ಯವಾಗಿ ಉಳಿಯಿತು. ರಂಗಾರೆಡ್ಡಿಯ ಹೊರತಾಗಿ!

೧

ಗ್ಲೋಬಲ್ ಸ್ಟೀಲ್ ಇಂಡಸ್ಟ್ರೀಸ್‌ನವರು ಕೂಡ್ಲೂರಿನ ಸುತ್ತ-ಮುತ್ತ ಕಬ್ಬಿಣದ ಅದಿರು ಸಿಗುತ್ತದೆಂದು, ಅಲ್ಲಿ ತಮ್ಮ ಇಂಡಸ್ಟ್ರಿಯನ್ನು ಶುರು ಮಾಡಿದರೆ ಲಾಭವಿದೆಯೆಂದು ನಿರ್ಧರಿಸಿ, ಅಲ್ಲಿನ ಸಾವಿರಾರು ಎಕರೆಗಳ ಮೇಲೆ ಕಣ್ಣು ಹಾಕಿದರು. ಇದಕ್ಕಾಗಿ ಅವರು ರಾಜ್ಯ ಸರ್ಕಾರಕ್ಕೆ ಮುಂಗಡವಾಗಿ ನೂರು ಕೋಟಿ ರೂ.ಗಳನ್ನು ಸಂದಾಯಿಸಿದ್ದರು. ರಾಜ್ಯ ಸರ್ಕಾರ ಅಭಿವೃದ್ಧಿಯಲ್ಲಿ ಗುಜರಾತನ್ನು ಮೀರಿಸಬೇಕೆಂದು, ತರಾತುರಿಯಲ್ಲಿದ್ದದ್ದರಿಂದ ತಡವಿಲ್ಲದೆ ತರುವಾಯ ಜರುಗಿದ ಕ್ಯಾಬಿನೆಟ್ ಮೀಟಿಂಗ್‌ನಲ್ಲಿ ಕೂಡ್ಲೂರು ಮತ್ತು ಸುತ್ತ-ಮುತ್ತಲಿನ ಗ್ರಾಮಗಳಲ್ಲಿ ಭೂಸ್ವಾಧೀನ ನಿರ್ಣಯವನ್ನು ಕೈಗೊಂಡಿತು. ಈ ಸುದ್ದಿ ರಂಗಾರೆಡ್ಡಿಗೆ ತಲುಪಲು ಹೆಚ್ಚು ಸಮಯ ಬೇಕಾಗಲಿಲ್ಲ. ಕೂಡ್ಲೂರಿನಲ್ಲಿ ಅವನೇ ಶ್ರೀಮಂತ. ವಂಶಪಾರಂಪರ್ಯವಾಗಿ ಬಂದಿದ್ದ ೯೦ ಎಕರೆ ಭೂಮಿಯನ್ನು ಜಮೀನ್ದಾರಿಯ ಗತ್ತಿನಲ್ಲಿ ಉಳಿಸಿಕೊಂಡಿದ್ದ. ಊರಿನಲ್ಲಿ ಜಮೀನ್ದಾರಿತನದ ದೌಲತ್ತನ್ನು ತೋರಿಸುತ್ತಿದ್ದುದು ಅವನೊಬ್ಬನೇ. ಆದಾಗ್ಯೂ,

ಅವನಿಗೆ ಒಂದು ಅಸಮಾಧಾನವಿತ್ತು. ತಮ್ಮ ವಂಶದ ನೂರಾರು ಎಕರೆ ಭೂಮಿಯನ್ನು ಹಿಂದಿನ ಸರ್ಕಾರ 'ಉಳುವವನೇ ಒಡೆಯ' ಎಂಬ ನಿಯಮದಡಿ ಊರಲ್ಲಿದ್ದ ದಲಿತರಿಗೆ, ಬಡಬಗ್ಗರಿಗೆ ಹಂಚಿದ್ದು ಅವನನ್ನು ಕೆಂಡಾಮಂಡಲವಾಗಿಸಿತ್ತು. ತನ್ನ ವಂಶಕ್ಕಾದ ಅನ್ಯಾಯವನ್ನು ಇನ್ನೂ ಮರೆತಿರಲಿಲ್ಲ. ಈಗ ಈ ಭೂಮಿಯನ್ನು ಮರಳಿ ಪಡೆಯಲು ಸುಸಮಯ ಬಂದಿದೆಯೆಂದು ಯೋಚಿಸಿದ. ತನ್ನ ಜಮೀನಿನ ಸುತ್ತ ಇರುವ ದಲಿತರ ನೂರಾರು ಜಮೀನನ್ನು ತನ್ನ ಹೆಸರಿಗೆ ಮಾಡಿಕೊಂಡು, ನಂತರ ಆ ಜಮೀನನ್ನು ಸರ್ಕಾರಕ್ಕೆ ಮಾರಿ, ತನ್ನ ಜಮೀನನ್ನು ಉಳಿಸಿಕೊಳ್ಳಬಹುದೆಂದು ತಂತ್ರ ಹೂಡಿದ. ಜೊತೆಗೆ ಸಾಕಷ್ಟು ಹಣ ಮಾಡಿಕೊಳ್ಳಬಹುದೆಂದು ಆಸೆ ಪಟ್ಟ. ಆದರೆ ಇದಕ್ಕಿದ್ದ ಒಂದೇ ಒಂದು ತೊಡಕೆಂದರೆ ವಶಪಡಿಸಿಕೊಳ್ಳಬೇಕೆಂದಿದ್ದ ಜಮೀನಿನ ಖಾತೆಯನ್ನು ತನ್ನ ಹೆಸರಿಗೆ ವರ್ಗಾಯಿಸಿಕೊಳ್ಳುವುದಕ್ಕೆ ತಹಸೀಲ್ದಾರನ ಅನುಮತಿ ಬೇಕಾಗಿತ್ತು. ಅದನ್ನು ಚಿಟಿಕೆ ಹೊಡೆಯುವುದರಲ್ಲಿ ಪಡೆದುಕೊಳ್ಳಬಹುದು ಎಂದು ಎಣಿಸಿದ.

ಕಟ್ಟಿಸಲಾರೆ
ತಾಜ್‌ಮಹಲ್
ಪ್ರೀತಿಯ ದ್ಯೋತಕವಾಗಿ
ಸಿರಿವಂತನಲ್ಲ
ಕಟ್ಟಿಕೊಡಬಲ್ಲೆ
ತಾಜ್‌ಗಿಂತಲೂ ಸುಂದರ
ಬದುಕ
ಬಡವನಲ್ಲ.

**ವಿ. ಹರಿನಾಥ ಬಾಬು**
ಉಪ ಖಜಾನಾಧಿಕಾರಿ
ಗಂಗಾವತಿ - ೫೮೩ ೨೨೭

ಮರುದಿನ ರಂಗಾರೆಡ್ಡಿ ತನ್ನ ಜನರನ್ನು ಕಟ್ಟಿಕೊಂಡು ತಹಸೀಲ್ದಾರ್ ಆಫೀಸಿಗೆ ಬಂದ. ಬಂದವನೇ ನರಸಯ್ಯನನ್ನು ಏಕವಚನದಲ್ಲಿ ಸಂಬೋಧಿಸುತ್ತಾ, ''ನರಸಯ್ಯ, ನನ್ನ ಜಮೀನಿನ ಸುತ್ತ ಇರೋ ಜಮೀನು ನನ್ ವಂಸಕ್ಕೆ ಸೇರಿದ್ದು. ನಮ್ಮಪ್ಪನಿಗೆ ಆ ಗಾಂಧಿವಾದಿ ಇದ್ನಲ್ಲ, ಅದ್ಯಾರೋ ಇನೋಬ ಬಾವೆ. ಅವನ ಮಾತು ಕೇಳಿ ತಲೆ ಕೆಟ್ಟು ವಂಸಪಾರಂಪರ್ಯವಾಗಿ ಬಂದಿದ್ದ ನೂರಾರು ಎಕರೆ ಜಮೀನನ್ನ ಸರ್ಕಾರಕ್ಕೆ ಒಪ್ಪಿಸ್ಬಿಟ್ಟು, ಗೊಟಕ್ಕಂದ. ನಮ್ಮನ್ನ್ಯಾರ್ನೂ ಕೇಳ್ಲಿಲ್ಲ. ಸರ್ಕಾರಕ್ಕೂ ಆಗ ತಲೆ ಸರಿ ಇರ್ಲಿಲ್ಲ. ಎಲ್ಲಾ ಜಮೀನನ್ನು ನಿಮ್ಮ ಜನಕ್ಕೆ ಹಂಚಿಬಿಡ್ತು. ಈಗ ಆ ಜಮೀನನ್ನ ನನ್ನ ಹೆಸರಿಗೆ ವರ್ಗಾಯಿಸಬೇಕು. ಈ ಕೆಲ್ಸಾನ ನೀನು ಮಾಡ್ಕೊಡ್ಬೇಕು.''

''ಸ್ವಾಮಿ, ನಿಮ್ಮಪ್ಪ ಸರ್ಕಾರಕ್ಕೆ ಕೊಟ್ಟ ಜಮೀನು ಕಾನೂನು ಬದ್ಧವಾಗಿದೆ. ಈಗ ಈ ಜಮೀನು ದಲಿತರಿಗೆ ಸೇರಿದ್ದು. ನಿಮ್ಮಪ್ಪ ಕೊಡುವ ಮೊದಲು ಅದನ್ನು ಉಳುಮೆ ಮಾಡುತ್ತಿದ್ದವರು ಅವರೇ. ಈಗಲೂ ಅವರೇ ಇದ್ದಾರೆ. ಹಾಗಾಗಿ ನೀವು ಹೇಳಿದ ಹಾಗೆ ಮಾಡಿದರೆ, ನಾನು ಕೆಲ್ಸ ಕಳ್ಕೊಂಡು ಸಂನ್ಯಾಸತ್ವ ತಗೋಬೇಕಾಗುತ್ತದೆ'' ಎಂದು ನರಸಯ್ಯ ಒಂದೇ ಉಸಿರಲ್ಲಿ ದೃಢವಾಗಿ ಹೇಳಿದ್ದು ರಂಗಾರೆಡ್ಡಿಯ ಕಪಾಳಕ್ಕೆ ಎರಡು ಬಿಗಿದ ಹಾಗಾಯಿತು.

''ಎಲಾ ಇವ್ನ. ನಿನ್ನೆ, ಮೊನ್ನೆ ನನ್ನ ಜಮೀನಿನಲ್ಲಿ ಕೂಲಿ ನಾಲಿ ಮಾಡ್ಕೊಂಡಿದ್ದವನು, ಇಷ್ಟೊಂದು ಚಿಗುರ್ಕೊಂಡು ಬಿಟ್ಟವ್ನ?'' ಎಂದು ರಂಗಾರೆಡ್ಡಿ ತನ್ನ ಜನರೆದುರಿಗೆ ಉರಿದುಕೊಂಡ. ನರಸಯ್ಯ ಹೇಳಿದ ಮಾತುಗಳು ಅವನ ಮನಸ್ಸನ್ನು ಕೊರೆಯತೊಡಗಿತು. ಅವನು ಹೇಳಿದ ಮಾತನ್ನು ಮರೆಯಲು ಎಷ್ಟೇ ಪ್ರಯತ್ನಿಸಿದರೂ, ಪ್ರತಿಧ್ವನಿಯ ಹಾಗೆ ರಂಗಾರೆಡ್ಡಿಯ ಮನಸ್ಸನ್ನು ಅಪ್ಪಳಿಸತೊಡಗಿತು. ''ನೀವು ಹೇಳಿದ ಹಾಗೆ ಮಾಡಿದರೆ, ನಾನು ಕೆಲ್ಸ ಕಳ್ಕೊಂಡು ಸಂನ್ಯಾಸತ್ವ ತಗೋಬೇಕಾಗುತ್ತದೆ. ನೀವು ಹೇಳಿದ ಹಾಗೆ...''

ಹೌದು. ನರಸಯ್ಯ ಸಂನ್ಯಾಸತ್ವ ತೆಗೆದುಕೊಳ್ಳಲೇಬೇಕು. ಅವನು ತಗೊಳ್ಳಿಲ್ಲಾಂದ್ರೆ ತಗೊಳ್ಳುವ ಹಾಗೆ ಮಾಡಬೇಕು ಎಂದು ನಿರ್ಧರಿಸಿ ರಂಗಾರೆಡ್ಡಿ ಮರುದಿನ ತನ್ನ ಜನರೊಡಗೂಡಿ ಮತ್ತೆ ನರಸಯ್ಯನ ಆಫೀಸಿಗೆ ಬಂದ. ಜೊತೆಗೆ ಎಂ.ಎಲ್.ಎ. ಕರಿಯಣ್ಣ ಇದ್ದ. ಕರಿಯಣ್ಣ ಮೀಸಲು ಕ್ಷೇತ್ರದಿಂದ ಎಲೆಕ್ಷನ್‌ನಲ್ಲಿ ಗೆದ್ದಾದ ಮೇಲೆ ರಂಗಾರೆಡ್ಡಿಯ ಪರ ವಕಾಲತ್ತು ವಹಿಸಲು ಶುರು ಮಾಡಿದ್ದ. ಅವನನ್ನು ಗೆಲ್ಲಿಸಿದ್ದ ದಲಿತರನ್ನು ಮರೆಯೋದಿಕ್ಕೆ ಹೆಚ್ಚು ಸಮಯ ಬೇಕಾಗಿರಲಿಲ್ಲ.

''ನರಸಯ್ಯ, ನೀನು ನಾಳೆನೇ ಸಂನ್ಯಾಸತ್ವ ತಕ್ಕೊಬೇಕು. ನಮ್ಮೂರ ಮಠಕ್ಕೆ ನೀನೆ ಸ್ವಾಮಿ. ಇಲ್ಲಾಂದ್ರೆ...'' ರಂಗಾರೆಡ್ಡಿ ಗುಡುಗಿದ. ರೆಡ್ಡಿ ಹೇಳಿದ ಹಾಗೆ ಮಾಡಲಿಲ್ಲಾಂದ್ರೆ ಅವನ ವಂಶಾನ ನಿರ್ವಂಶ ಮಾಡುತ್ತೇವೆಂದು ಬೆದರಿಸುವ ದನಿಯಲ್ಲಿ ಮಾತನಾಡಿ, ಎಲ್ಲರೂ ದರದರನೆ ಹೊರನಡೆದರು. ನರಸಯ್ಯನಿಗೆ ಏನು ಮಾಡಬೇಕೆಂದು ತೋರಲಿಲ್ಲ. ''ನಾನು ಕೆಲಸಕ್ಕೆ ರಾಜೀನಾಮೆ ನೀಡುವ ಹಿನ್ನೆಲೆಯನ್ನು ಮುಚ್ಚಿಡಲು ಸಂನ್ಯಾಸತ್ವದ ಕಳ್ಳಾಟ ಆಡುತ್ತಿದ್ದಾನೆ ಈ ರಂಗಾರೆಡ್ಡಿ; ಸಂನ್ಯಾಸತ್ವ ತಗೊಂಡರೆ ನನ್ನ ಜಾಗದಲ್ಲಿ ತನ್ನವರನ್ನು ಹಾಕಿಸಿಕೊಂಡು, ದಲಿತರ ಜಮೀನನ್ನು ಲಪಟಾಯಿಸುವ ಹುನ್ನಾರ ಇದು'' ಎಂದು ತಿಳಿದುಕೊಳ್ಳಲು ನರಸಯ್ಯನಿಗೆ ಹೆಚ್ಚು ಹೊತ್ತು ಬೇಕಾಗಿರಲಿಲ್ಲ. ಆದರೆ ಅವನನ್ನು ಎದುರಿಸುವ ಶಕ್ತಿ ಮತ್ತು ದೃಢತೆ ನರಸಯ್ಯನಿಗೆ ಇನ್ನೂ ಬಂದಿರಲಿಲ್ಲ. ಹೀಗಾಗಿ ತಾಯಿ, ಹೆಂಡತಿ ಮತ್ತು ಮಗಳನ್ನು ಬಿಟ್ಟು, ರಂಗಾರೆಡ್ಡಿ ಹೇಳಿದ ಹಾಗೆ ಸಂನ್ಯಾಸತ್ವ ತೆಗೆದುಕೊಂಡುಬಿಟ್ಟ.

೨

ನರಸಯ್ಯ ಸಂನ್ಯಾಸತ್ವ ತೆಗೆದುಕೊಂಡು, ಮಠಕ್ಕೆ ಸ್ವಾಮಿಯಾಗುವ ದಿನದಂದು ರಂಗಾರೆಡ್ಡಿಯ ನೇತೃತ್ವದಲ್ಲಿ ಮೆರವಣಿಗೆ ಹೊರಟಿತು. ನರಸಯ್ಯನನ್ನು ಹೊತ್ತುಕೊಂಡು. ಖಾವಿ ಬಟ್ಟೆ ಧರಿಸಿ, ಕೊರಳಲ್ಲಿ ರುದ್ರಾಕ್ಷಿ ಮಾಲೆಯನ್ನು ಹಾಕಿಕೊಂಡು, ತಲೆ ಬೋಳಿಸಿಕೊಂಡು ನರಸಯ್ಯ ಎಲ್ಲರಿಗು ಕೈ ಮುಗಿಯುತ್ತಾ ಮುಗುಳ್ನಕ್ಕ. ಅವನು ಹಾಗೆ ವರ್ತಿಸಬೇಕೆಂದು ರಂಗಾರೆಡ್ಡಿ ತಾಕೀತು ಮಾಡಿದ್ದ. ಮೆರವಣಿಗೆ ಕೂಡ್ಲೂರಿನ ದಲಿತರ ಕೇರಿಯನ್ನೆಲ್ಲಾ ಹಾದು ಮಠಕ್ಕೆ ಬಂದಾಗ ಅಲ್ಲಿ ನರಸಯ್ಯನಿಗೆ ದೀಕ್ಷೆ ಕೊಡಲು ಬೆಂಗಳೂರಿಂದ ಒಬ್ಬ ಸ್ವಾಮಿಯನ್ನು ಕರೆಸಲಾಗಿತ್ತು. ದೀಕ್ಷೆ ಮುಗಿದ ಮೇಲೆ ರಂಗಾರೆಡ್ಡಿ ಎಲ್ಲರನ್ನು ಉದ್ದೇಶಿಸಿ,

''ಕೂಡ್ಲೂರಿನ ಮಹಾಜನರೆ, ಈ ದಿನ ಸುದಿನ. ನಮ್ಮ ಮಠಕ್ಕೆ ಸರಿಯಾದ ಸ್ವಾಮಿ ಸಿಕ್ಕವ್ರೆ. ಅದು



ಕೂಡ ಓದಿ, ಇದ್ಯಾವಂತರಾದ ನರಸಯ್ಯನಂತೋರು, ತಹಸೀಲ್ದಾರರಾಗಿ ಇರೋರ್ವರ್ಗು ನಮ್ಮೂರಿಗೆ, ಸುತ್ತ-ಮುತ್ತ ಬಾಳ ವಳ್ಳೇದು ಮಾಡವ್ರೆ. ಇದು ನಮಗೆ ಎಮ್ಮೆಯ ಇಸ್ಯ. ಈಗ ಅವರು ನಮ್ಮ ಮಠಕ್ಕೆ ಸ್ವಾಮಿಗಳಾಗ್ತಿರೋದು ನಮ್ಮ ಭಾಗ್ಯ. ಸ್ವಾಮಿಗಳು ನಮ್ಮೂರಿಗೆ ಒಳ್ಳೇದು ಮಾಡ್ತಾರಂತ ನಂಗೆ ಗ್ಯಾರಂಟಿ ಐತೆ. ಜೊತೆಗೆ ದಲಿತ್ರಿಗೆ ಸ್ವಾಮಿ ಪಟ್ಟ ಕಟ್ಟುದ್ರು ಅಂತ ಸರ್ಕಾರ ನಮ್ಮನ್ನ ಹೊಗುಳ್ಳೈತೆ. ಮಾದರಿ ಊರು ಅಂತ ನಮ್ಮನ್ನ ಕರೀತೈತೆ. ಹಿಂಗಾಗಿ, ನಾವೆಲ್ರು ಇನ್‌ಮ್ಯಾಕೆ ಸ್ವಾಮಿಗಳಿಗೆ ಸಾಕಾರ, ಇಸ್ವಾಸ ಎಲ್ಪು ನೀಡ್ಬೇಕು'' ಎಂದು ತನ್ನ ಭಾಷಣವನ್ನು ಆಜ್ಞೆಯೆನ್ನುವ ರೀತಿಯಲ್ಲಿ ಜೋರಾಗಿ ಮಾತನಾಡಿದ. ರಂಗಾರೆಡ್ಡಿಯ ಕಡೆಯವರು ಜೋರಾಗಿ ಕರತಾಡನ ಮಾಡಿದ್ದನ್ನು ನೋಡಿ, ಅಲ್ಲಿದ್ದ ಕೆಲವೇ ಕೆಲವು ದಲಿತರು ಸಹ ಅವರನ್ನು ಸೇರಿಕೊಂಡರು.

ಈಗ ಕರಿಯಣ್ಣನ ಸರದಿ: ''ನಮ್ಮೋರ್ಗೆ ಅಧ್ಯಾತ್ಮ ಬೇಕು. ನಮ್ಮೋರು ತಿಂದು-ಕುಡ್ದು-ಬೀಳೋದ್ರಲ್ಲಿ ಮುಳುಗೌರೆ. ಅವರ್ನ ಅಜ್ಞಾನದಿಂದ ಮೇಲಕ್ಕೆತ್ತಬೇಕು. ಹೆಣ್ಣು, ಹೊನ್ನು, ಮಣ್ಣು ಎಷ್ಟು ದಿನ ? ನಾವಿರೋವರ್ಗೆ ಒಳ್ಳೇ ರೀತೀಲಿ ಬಾಳ್ಬೇಕು. ಅದಕ್ಕಾಗಿ ನಾವು ಸರಿ ದಾರಿಲಿ ನಡಿಬೇಕು. ದಲಿತರಿಗೆ ಒಬ್ಬ ಸ್ವಾಮಿ ಬೇಕು. ಈ ಕೊರತೆಯನ್ನು ನೀಗಲು ನಮ್ಮೋರಾದ ನರಸಯ್ಯನವರು ಸ್ರಮ ಪಡ್ತಾರಂತ ನನ್ನ ನಂಬುಕೆ. ಅವರಿಗೆ ನಿಮ್ಮೆಲ್ಲರ ಸಹಕಾರ, ವಿಶ್ವಾಸ ಬೇಕು. ಅದನ್ನು ನೀವು ನೀಡುತ್ತೀರೆಂದು ನನ್ನ ನಂಬುಕೆ.'' ನರಸಯ್ಯನ ಮೂಲಕ ಮುಂದಿನ ಎಲೆಕ್ಷನ್‌ನಲ್ಲಿ ಎಲ್ಲರ ಓಟು ಮತ್ತೆ ತನಗೆ ಬರುವ ಹಾಗೆ ಮಾಡಿಕೊಳ್ಳಬೇಕೆಂದು ಕರಿಯಣ್ಣ ಈಗಾಗಲೇ ಎಣಿಸಿದ್ದ. ಅದಕ್ಕಾಗಿಯೇ ಅವನು ರಂಗಾರೆಡ್ಡಿಗೆ ಸಾಥ್ ನೀಡಿದ್ದು.

ನರಸಯ್ಯನ ಕಡೆಯವರು ''ಸ್ವಾಮಿಗಳು ಮಾತಾಡ್ಬೇಕು'' ಎಂದು ಕೂಗು ಹಾಕಿದರು. ನರಸಯ್ಯ ''ಮಾತನಾಡುವದಕ್ಕೆ, ಕೇಳುವದಕ್ಕೆ ಇದು ಸರಿಯಾದ ಸಮಯವಲ್ಲ'' ಎಂದು ನುರಿತ ಜ್ಞಾನಿಯಂತೆ ಕೈ ಸನ್ನೆ ಮಾಡಿದ. ನರಸಯ್ಯನ ತಾಯಿಯಂತೂ ಮನೆಯಲ್ಲಿದ್ದುಕೊಂಡೆ, ''ಇವನಿಗ್ಯಾವ ರೋಗ ಬಡೀತೋ. ಇವನಪ್ಪ ನನ್ನನ್ನು ಬಸುರಿ ಮಾಡಿ, ಕಟ್ಟಿದ ತಾಳಿನ ಕಿತ್ಕೊಂಡು, ಯಾವುದೋ ಸೂಳೆ ಸೆರಗಿಡ್ಕೊಂಡು ಓಡೋದ. ಇವ್ನನ್ನ ನಾನು ಹೆತ್ತು, ಸಾಕಿ, ಬೆಳಿಸಿದ್ರೆ, ದೇವ್ರು, ದಿನ್ರು ಅಂತ ಈಗ ಕೈ ಕೊಟ್ಟವ್ನೆ. ನಮ್ಗೆ ಇದೆಲ್ಲಾ ಬೇಕಾ ? ನಮಗೆ ಗತಿ ಯಾರಪ್ಪ ಈಗ ?'' ಎಂದು ಎದೆ ಬಡಿದುಕೊಂಡು ಸೊಸೆಯೆದುರಿಗೆ ಅಳತೊಡಗಿದಳು.

ಊರಲಿದ್ದ ಅನೇಕ ದಲಿತರಿಗೆ ರಂಗಾರೆಡ್ಡಿ ನರಸಯ್ಯನಿಗೆ ಮಣೆ ಹಾಕಿ, ಅಷ್ಟೊಂದು ಜೋರಾಗಿ ಮೆರವಣಿಗೆಯನ್ನು ಹೊರಡಿಸಿದ್ದು ಅನುಮಾನಾಸ್ಪದವಾಗಿ ಕಾಣತೊಡಗಿತು. ಯಾವತ್ತೂ ಇಲ್ಲದ ಕಾಳಜಿ ಇವನಿಗೆ ಇವತ್ತ್ಯಾಕೆ ಬಂತು ಎಂದು ಗುಸು ಗುಸು ಮಾತನಾಡಿಕೊಂಡರು. ನರಸಯ್ಯನನ್ನು ಕೇಳಿದರೆ ಅವನು ತುಟಿ ಬಿಚ್ಚಲಿಲ್ಲ. ಇದರಲ್ಲಿ ಏನೋ ಮಸಲತ್ತಿದೆ ಎಂದು ಕೆಲವರು ವಿಚಾರಿಸಿದಾಗ, ನಿಜ ಹೊರಗೆ ಬಿತ್ತು. ತಮ್ಮ ಜಮೀನಿನ ಮೇಲೆ ರಂಗಾರೆಡ್ಡಿ ಕಣ್ಣುಹಾಕಿದ್ದು ಅವರಿಗೆ ಗೊತ್ತಾಯ್ತು. ಏನು ಮಾಡಬೇಕೆಂದು ಎಲ್ಲರು ತಲೆ ಕೆಡಿಸಿಕೊಂಡರು. ಅದಕ್ಕಿದ್ದ ಒಂದೇ ಮಾರ್ಗ ನರಸಯ್ಯನನ್ನು ಮತ್ತೆ ತಹಸೀಲ್ದಾರನನ್ನಾಗಿ ಮಾಡೋದು. ಇಲ್ಲಾಂದ್ರೆ ರಂಗಾರೆಡ್ಡಿ ತನ್ನವರನ್ನು ಕರೆಸಿ ಎಲ್ಲಾ ಜಮೀನನ್ನು ನುಂಗಿಬಿಡ್ತಾನೆಂದು, ಇದನ್ನು ತಡೆಯದಿದ್ರೆ ನಮ್ಮ ಬಾಯಿಗೆ ಮಣ್ಣೇ ಗತಿ ಎಂದು ನಿರ್ಧರಿಸಿದರು.

೩

ರಂಗಾರೆಡ್ಡಿ ತನ್ನವರನ್ನು ತಹಸೀಲ್ದಾರ್ ಜಾಗಕ್ಕೆ ತರಲು ಪ್ರಯತ್ನಿಸಬೇಕಾದರೆ, ನರಸಯ್ಯನಿಗೆ ಅದೇನು ಒಳ್ಳೆ ಬುದ್ಧಿ ಬಂತೊ, ರಂಗಾರೆಡ್ಡಿಯ ಒತ್ತಾಯಕ್ಕೆ ಮಣಿದು ತಾನು ಸಂನ್ಯಾಸಿಯಾದದ್ದು ತಪ್ಪು; ಮಣ್ಣು ತಿನ್ನೊ ಕೆಲಸ ಮಾಡ್ಬಿಟ್ಟೆ ಎಂದು ಹಲುಬುವುದಕ್ಕೆ ಶುರು ಮಾಡಿದ. ಒಂದು ದಿನ ಊರ ದಲಿತರೆಲ್ಲ ಸಾಕಮ್ಮ ಮತ್ತು ಸೊಸೆಯ ನೇತೃತ್ವದಲ್ಲಿ ಮಠದ ಎದುರಿಗೆ ಹೋಗಿ ಧರಣಿ ಕೂತರು. ಅವರಲ್ಲೊಬ್ಬ ಎದ್ದು ರಾಜಕಾರಣಿಯ ಹಾಗೆ, ''ಮಾ ಜನಗಳೆ, ಈ ದಿನ ನಾವು ಇಲ್ಲಿ ಕುತ್ಕೊಂಡಿರೋದು ನಿಮ್ಗೆ ಗೊತ್ತೇ ಇದೆ. ನರಸಯ್ಯನ್ನೋರು ಸಂನ್ಯಾಸ ಬಿಟ್ಟು ಅವರ ಹೆಂಡ್ತಿ, ತಾಯಿಯ ಜೊತೆ ಸಂಸಾರ ಮಾಡ್ಬೇಕು. ಅಲ್ಲಿವೊರ್ಗು ನಾವು ಇಲ್ಲಿಂದ ಜಪ್ಪಯ್ಯ ಅಂದ್ರು ಕದಲ್ಬಾರ್ದು'' ಎಂದು ಗಾಂಧಿ, ನೆಹರು, ಅಂತ ಏನೇನೋ ಭಾಷಣ ಹೊಡಿಯೋಕೆ ಶುರು ಮಾಡ್ದ. ಹಿಂಗೆ ಬಿಟ್ರೆ ದಿನ ಎಲ್ಲಾ ಮಾತಾಡ್ತಾನೆ ಅಂತ ಹೆದರಿ ಯಾರೋ ಒಬ್ಬ ಮುಖವನ್ನು ಟವೆಲ್‌ನಿಂದ ಮುಚ್ಚಿಕೊಂಡು, ''ಸಾಕ್ ಮಾಡೋ ನಿನ್ ಡಬ್ಬಿಯಾ. ಬೇರೆಯೋರು ಮಾತಾಡ್ಲಿ'' ಅಂತ ಕಿರುಚಿದ ಮೇಲೇ ಅವನು ಸುಮ್ಮನಾಗಿದ್ದು.

ನಂತರ ಮತ್ತೊಬ್ಬ ಎದ್ದು, ''ನೋಡಿ, ನಾವು ನಮ್ಮ ನರಸಯ್ಯೋರು ವಾಪಾಸ್ ಬರೊತಕ್ಕ ಈ ಧರ್ನಾನಾ ಇಟ್ಕೊಬೇಕು. ಅವ್ರು ಮತ್ತೆ ತಹಸಿಲ್ದಾರ್ ಆಗ್ಬೇಕು. ಅವ್ರಿಂದ ನಮಗೆ ಬಾಳ ಎಲ್ಪ್ ಆಗೈತೆ. ನಮ್ ಜನಕ್ಕೆ ಕುಂದು, ಕೊರತೆ ನಿಗ್ಸೋರು ಅವರೆ. ನಮ್ ಜನ ಅಷ್ಟೇ ಅಲ್ಲ, ಬೇರೆಯೋರ್ಗು ಎಲ್ಪ್ ಮಾಡರ್ವೆ. ಚೆನ್ನಾಗಿ ಆಡಳಿತ ನಡಿಸ್ತಿದ್ರು. ಆದ್ರೆ ಯಾರ್ದೋ ಬೇವರ್ಸಿ ಮಾತು ಕೇಳಿ ನರಸಯ್ಯೊರು ದಾರಿ ತಪ್ಪವ್ರೆ'' ಎಂದು ರಂಗಾರೆಡ್ಡಿಯನ್ನು ಪರೋಕ್ಷವಾಗಿ ಬೈದಾಗ ಎಲ್ಲರೂ ಕರತಾಡನ ಮಾಡಿದ್ರು. ಮತ್ತೊಬ್ಬ ಯಾರೋ, ''ಕರಿಯಣ್ಣ ಬರ್ಲಿ. ನಮ್ಜೊತೆ ಇರ್ಬೇಕು. ನರಸಯ್ಯನೋರ ಮನ ಒಲಿಸ್ಲಿ. ಬರೀ ಎಲೆಕ್ಷನ್ ಗೆದ್ದು, ತಿಂದು, ತೇಗಿ, ಹೇಲೋದಿಕ್ಕಲ್ಲ ಅವನಿರೋದು'' ಅಂತ ಜೋರಾಗಿ ಕಿರುಚಿದ. ಯಾರು ಕಿರಿಚಿದ್ದು ಅಂತ ಎಲ್ಲರು ಹಿಂದಿರುಗಿ ನೋಡಿದರು. ಯಾರು ಅಂತ ಗೊತ್ತಾಗ್ಲಿಲ್ಲ.

''ನರಸಯ್ಯೋರು ವಾಪಾಸ್ ಬರ್ಲಿ, ನರಸಯ್ಯೋರು ವಾಪಾಸ್ ಬರ್ಲಿ'' ಅಂತ ಎಲ್ಲರೂ ಒಕ್ಕೊರಲಿನಿಂದ ಚೀರತೊಡಗಿದರು. ಅಷ್ಟರಲ್ಲಿ ಮಠದ ಒಳಗಿದ್ದ ನರಸಯ್ಯನಿಗೆ ಬ್ರಹ್ಮಪುತ್ರ ನದಿ ಹರಿಯೋ ರಭಸದಂಗೆ ಧೈರ್ಯ ಒಳಗಿಂದ ಉಕ್ಕಿಬಂತು. ತಾನು ರಂಗಾರೆಡ್ಡಿಯ ಬೆದರಿಕೆಗೆ ಹೆದರಿ ಹೆಂಡತಿ, ತಾಯಿಯನ್ನು ಬಿಟ್ಟು ಸಂನ್ಯಾಸ ತಗೊಂಡಿದ್ದು ಹೇಡಿಯ ಕೆಲಸ ಅಂತ ಬುದ್ಧಿ ಚಿಗುರೊಡೆಯತೊಡಗಿತು. ಸಿಕ್ಕ ಸರ್ಕಾರಿ ಕೆಲಸವನ್ನು ತಿರಸ್ಕರಿಸಿ ಸಂನ್ಯಾಸ ತಗೊಂಡಿದ್ದು ಯಾವ ಘನಂದಾರಿ ಕೆಲಸ ಮಾಡೋಕೆ ಎಂದು ತನ್ನನ್ನೇ ತಾನೇ ಬೈದುಕೊಂಡ. ತನ್ನ ತಾಯಿ ಅಷ್ಟು ಕಷ್ಟಪಟ್ಟು ಓದಿಸಿದ್ದು ವ್ಯರ್ಥವಾಗಬಾರದು ಎಂದು ಅವನಿಗೆ ಅನಿಸತೊಡಗಿತು. ಜೊತೆಗೆ ತನ್ನ ಜಾತೀಲಿ ಕೆಲವೇ ಕೆಲ ಜನ ದೊಡ್ಡ ಆಫೀಸರ್‌ಗಳಾಗಿದ್ದರೂ, ಅವರೆಲ್ಲರೂ ತಮ್ಮ ತಮ್ಮ ಉದರ-ಪೋಷಣ ನಿಮಿತ್ತ ಇರುವುದನ್ನು ನೋಡಿ ನರಸಯ್ಯ ಎಷ್ಟೋ ಸಾರಿ ಕೊರಗಿದ್ದ. ಇವರೆಲ್ಲರಿಗಿಂತ ಭಿನ್ನವಾಗಿರಬೇಕೆಂದು ಹಠ ಹಿಡಿದು, ಅದಕ್ಕೆ ತಕ್ಕ ಹಾಗೆ ಪ್ರಾಮಾಣಿಕವಾಗಿ ಕೆಲಸ ಮಾಡುತಿದ್ದ. ತನ್ನ ಜನರ ಅನೇಕ ಸಮಸ್ಯೆಗಳನ್ನು ಬಗೆಹರಿಸುವಲ್ಲಿ ಅವನು ಯಶಸ್ವಿಯಾಗಿದ್ದ. ಊರಲ್ಲಿ ಜಾತೀಯತೆಯ ಹಗರಣಗಳು ಕಡಿಮೆಯಾಗಿದ್ದಕ್ಕೆ ಇವನ ಕಟ್ಟುನಿಟ್ಟಿನ ಆಡಳಿತವೇ ಕಾರಣವಾಗಿತ್ತು.

ಅನೇಕ ಜನ ಇವನನ್ನು 'ಧರೆಗಿಳಿದ ದೇವರು' ಎಂದು ಕೈ ಮುಗಿದು ಗೌರವಿಸುತ್ತಿದ್ದರು. ಹಾಗೆ ಕೈ ಮುಗಿದವರಿಗೆಲ್ಲಾ ನರಸಯ್ಯನ ಸಂನ್ಯಾಸತ್ವ ಸಿಡಿಲು ಬಡಿದಂಗಾಗಿತ್ತು. ಇರೋ ಕೆಲವೇ ಕೆಲವು ಒಳ್ಳೆ ಆಫೀಸರ್‌ಗಳಲ್ಲಿ ಇವನನ್ನೂ ನಾವು ಕಳೆದುಕೊಂಡರೆ ತಮ್ಮ ಗತಿ ಏನು ಎಂದು ಅವರು ಹಲುಬತೊಡಗಿದರು. ನರಸಯ್ಯನಿಗೆ ಒಂದು ಕ್ಷಣ ತನ್ನ ಜನರ ದೈನ್ಯತೆ, ಆಕಾಂಕ್ಷೆ, ಅಪೇಕ್ಷೆಗಳು ಕಣ್ಣಮುಂದೆ ಹಾದುಹೋದವು. ಸಂನ್ಯಾಸತ್ವ ಆತುರದ ಮತ್ತು ಹೇಡಿಯ ನಿರ್ಧಾರ ಎಂದು ಅವನಿಗೆ ಅನಿಸತೊಡಗಿತು. ಏನೇ ಆಗ್ಲಿ ನಾನು ಈ ಸಂನ್ಯಾಸತ್ವವನ್ನು ಬಿಡಬೇಕು. ಮತ್ತೆ ತಹಸೀಲ್ದಾರ್ ಆಗಬೇಕು ಎಂದು ಗಟ್ಟಿ ಮನಸ್ಸು ಮಾಡಿದ.

ನರಸಯ್ಯ ಮತ್ತೆ ತಹಸೀಲ್ದಾರ್ ಆದ. ರಂಗಾರೆಡ್ಡಿಗೆ ಏನು ಮಾಡಬೇಕೆಂದು ತೋಚಲಿಲ್ಲ. ಅಷ್ಟರಲ್ಲಿ ಸರ್ಕಾರ ಭ್ರಷ್ಟಾಚಾರದ ಆರೋಪ ಎದುರಿಸಲಾರದೆ ಕುಸಿದುಬಿದ್ದು, ಮಧ್ಯಂತರ ಎಲೆಕ್ಷನ್‌ಅನ್ನು ಘೋಷಿಸಿತು. ಇಂತಹ ಸಮಯದಲ್ಲಿ ಕೂಡ್ಲೂರಿನ ವಿರೋಧ ಕಟ್ಟಿಕೊಳ್ಳೋದು ಸರಿಯಲ್ಲ ಅಂತ ಅನಿಸಿ ಕರಿಯಣ್ಣ ರಂಗಾರೆಡ್ಡಿಯಿಂದ ದೂರ ಉಳಿದ.

ಡಾ|| ವಿಜಯಕುಮಾರ್ ಎಂ. ಬೋರಟ್ಟಿ
ಸಹಾಯಕ ಪ್ರಾಧ್ಯಾಪಕ, ಇಂಗ್ಲಿಷ್ ವಿಭಾಗ
ವಿ.ವಿ. ಸಂಜೆ ಕಾಲೇಜ್, ಮೈಸೂರು ವಿ.ವಿ., ಮೈಸೂರು - ೫೭೦ ೦೦೫

## ಪ್ರಶಸ್ತಿ

## ಸನತ್‌ಕುಮಾರ ಬೆಳಗಲಿ

ಸಮತಾವಾದಿ, ಪ್ರಗತಿಪರ ಚಿಂತಕ, ಹಿರಿಯ ಪತ್ರಕರ್ತ ಸನತ್‌ಕುಮಾರ ಬೆಳಗಲಿ ಅವರಿಗೆ ಕನ್ನಡ ಸಾಹಿತ್ಯ ಪರಿಷತ್ತು ಕೊಡುವ 'ನಾಗಡಿಕೆರೆ ಕಿಟ್ಟಪ್ಪ ಗೌಡ ರುಕ್ಮಿಣಿ ದತ್ತಿ ಪ್ರಶಸ್ತಿ' ಲಭಿಸಿದೆ. ಸಾಮಾಜಿಕ ಬದ್ಧತೆಯುಳ್ಳ ಪತ್ರಕರ್ತರಿಗೆ ಕೊಡುವ ಈ ಪ್ರಶಸ್ತಿ ಪಡೆದ ಸನತ್‌ಕುಮಾರ ಬೆಳಗಲಿ ಅವರನ್ನು 'ಹೊಸತು' ಅಭಿನಂದಿಸುತ್ತದೆ.




# ದಲಿತ ಸಾಂಸ್ಕೃತಿಕ ಲೋಕ ಅನಾವರಣಗೊಳಿಸುವ 'ತಳಸಂಸ್ಕೃತಿ'




ಲೇಖಕ : **ಡಾ|| ಶಿವರಾಮ ಅಸುಂಡಿ**
ಪುಟಗಳು : ೨೩೬ ಬೆಲೆ : ರೂ. ೧೫೦-೦೦
ಪ್ರಕಾಶಕರು : ಎಂ. ಮೀನಾಕ್ಷಿ ರಮೇಶ್, ಧಾತ್ರಿ ಪುಸ್ತಕ
ವಿಳಾಸ : ನಂ. ೧೭೦, ೩ನೇ 'ಸಿ' ಅಡ್ಡರಸ್ತೆ, ವಿನಾಯಕ ಬಡಾವಣೆ, ನಾಗರಬಾವಿ ೨ನೇ ಹಂತ, ಬೆಂಗಳೂರು - ೫೬೦ ೦೭೨

**ಡಾ||** ಶಿವರಾಮ ಅಸುಂಡಿ ಅವರು ಕೈಗೊಂಡ ಸಂಶೋಧನೆಯ ಫಲ 'ತಳ ಸಂಸ್ಕೃತಿ' ಕೃತಿ. ದಲಿತ ಸಂಸ್ಕೃತಿಯ ಒಳನೋಟಗಳನ್ನು ಕಟ್ಟಿಕೊಡುವ ಈ ಕೃತಿಯನ್ನು ಬೆಂಗಳೂರಿನ ಧಾತ್ರಿ ಪುಸ್ತಕ ಪ್ರಕಾಶನ ಪ್ರಕಟಿಸಿದೆ.

ನವೋದಯ ಪೂರ್ವದಿಂದ ಹಿಡಿದು ದಲಿತ-ಬಂಡಾಯ ಕಾಲಘಟ್ಟದವರೆಗಿನ ಪ್ರಾತಿನಿಧಿಕ ಕೃತಿಗಳನ್ನಿಟ್ಟುಕೊಂಡು ಡಾ|| ಶಿವರಾಮ ಅಸುಂಡಿಯವರು ದಲಿತ ಸಾಂಸ್ಕೃತಿಕ ಲೋಕವನ್ನು ಅನಾವರಣಗೊಳಿಸಿದ್ದಾರೆ. ಏಳು ಅಧ್ಯಾಯಗಳಲ್ಲಿ ಹರಡಿಕೊಂಡಿರುವ ಈ ಸಂಶೋಧನಾ ಕೃತಿಯಲ್ಲಿ ಕನ್ನಡ ಕಾದಂಬರಿಗಳ ಸಂದರ್ಭದಲ್ಲಿ ದಲಿತ ಸಂವೇದನೆಗಳು ಹಾಗೂ ದಲಿತ ಕಾದಂಬರಿಗಳು, ಸಾಂಸ್ಕೃತಿಕ ಪರಿಕಲ್ಪನೆ ಅಧ್ಯಾಯಗಳು, ಅಧ್ಯಯನದ ಹೃದಯ ಭಾಗಗಳಾಗಿವೆ. ಶಿವರಾಮ ಅಸುಂಡಿಯವರು ಎಲ್ಲಿಯೂ ಆಕ್ರೋಶಕ್ಕೆ ಒಳಗಾಗದೆ ಸಂಯಮದಿಂದಲೇ ದಲಿತ ಸಂಸ್ಕೃತಿಯನ್ನು ಬಿಡಿಸುತ್ತಾ ಹೋಗಿದ್ದಾರೆ. ಮೇಲ್ವರ್ಗದವರು ಕೆಳವರ್ಗದವರಿಗಾಗಿ ಹುಟ್ಟುಹಾಕಿದ ಮಿಥ್‌ಗಳ ಚರ್ಚೆಯ ಜೊತೆಗೆ, ಅವುಗಳಿಗೆ ದಲಿತ ಲೇಖಕರು ಒಡ್ಡಿದ ಪ್ರತಿರೋಧ ಇತ್ಯಾದಿಗಳನ್ನು ಮನೋಜ್ಞವಾಗಿ ಬಿಂಬಿಸಿದ್ದಾರೆ. ಬದಲಾದ ಸಂದರ್ಭದಲ್ಲಿ ದಲಿತನಿಗೆ ಎದುರಾಗಿರುವ ಜಾಗತೀಕರಣ, ಖಾಸಗೀಕರಣ ಮತ್ತು ಉದಾರೀಕರಣಗಳ ಅಪಾಯಗಳನ್ನು ಸಾಂಸ್ಕೃತಿಕ ನೆಲೆಯಲ್ಲಿ ಗ್ರಹಿಸುವ ಜೊತೆಗೆ ಅವುಗಳನ್ನು ಎದುರಿಸಲು ಅಗತ್ಯವಿರುವ ಸಾಂಸ್ಕೃತಿಕ ಪರ್ಯಾಯಗಳ ಕುರಿತೂ ಸಮಾಲೋಚಿಸಿದ್ದಾರೆ. ಇದುವರೆಗೆ ಕನ್ನಡದ ಪ್ರಮುಖ ಕಾದಂಬರಿಗಳಲ್ಲಿ ಮೂಡಿಬಂದ ದಲಿತ ಸಂಸ್ಕೃತಿ-ಸಂವೇದನೆಗಳನ್ನು ಸಂಶೋಧನೆಯ ಒರೆಗೆ ಹಚ್ಚುವ ಕೆಲಸವನ್ನು ಅಸುಂಡಿಯವರು ಮಾಡಿದ್ದಾರೆ.

ಶತಮಾನಗಳ ಇತಿಹಾಸ ಹೊಂದಿರುವ ಕನ್ನಡ ಕಾದಂಬರಿ ಪ್ರಕಾರವು ಅನೇಕ ಅವಸ್ಥೆಗಳನ್ನು ದಾಟಿ ಸಮೃದ್ಧವಾಗಿ ಬೆಳೆದಿದೆ. ಆದರೆ ಎಷ್ಟೇ ಜನಪ್ರಿಯ ಮಾಧ್ಯಮವಾಗಿ ಬೆಳೆದರೂ ಇಪ್ಪತ್ತನೆಯ ಶತಮಾನದ ಎಪ್ಪತ್ತರ ದಶಕದವರೆಗೂ ದಲಿತರ ಪಾಲಿಗೆ ಗ್ರಹಣ ಹಿಡಿದಂತಿತ್ತು. ಆವರೆಗಿನ ಲೇಖಕರೆಲ್ಲ ಬಹುತೇಕ ಮೇಲ್ವರ್ಗಕ್ಕೆ ಸೇರಿದವರಾಗಿದ್ದರು. ಕೆಲ ಶೂದ್ರರು ಲೇಖನಿ ಹಿಡಿದಿದ್ದರೂ ಅವರ ಕೃತಿಗಳಲ್ಲಿ ಶೂದ್ರ-ದಲಿತ-ದಮನಿತರ ಬದುಕು ಮುಖ್ಯ ಅಂಶವಾಗಿ ಬಿಂಬಿತಗೊಂಡಿರಲಿಲ್ಲ. ಅಲ್ಲಲ್ಲಿ ಆಂಶಿಕವಾಗಿ ಇಣುಕಿದಂತಿತ್ತು ಎಂಬುದನ್ನು ಚೋಮನ ದುಡಿ (ಕಾರಂತ), ಕಾನೂರು ಹೆಗ್ಗಡತಿ (ಕುವೆಂಪು), ನೀ ನನ್ನ ಮುಟ್ಟಬೇಡ (ಬಸವರಾಜ ಕಟ್ಟೀಮನಿ), ವೈಶಾಖ (ಚದುರಂಗ), ಸೂರ್ಯ, ಒಂದು ಊರಿನ ಕಥೆ (ಬರಗೂರು) ಮುಂತಾದುವುಗಳಲ್ಲಿ ಕಾಣಬಹುದು.

* ನವೋದಯ ಕಾಲಘಟ್ಟದಲ್ಲಿ ದಲಿತರನ್ನು ಕಾಡುವ ಅಸ್ಪೃಶ್ಯತೆ ಕರ್ಮಸಿದ್ಧಾಂತದ (ಗಾಂಧಿವಾದ) ಫಲ ಎಂಬಂತೆ ಮೂಡಿಬಂದಿದೆ.
* ಪ್ರಗತಿಶೀಲ ಕಾಲಘಟ್ಟದ ಕಾದಂಬರಿಗಳು ಅವಮಾನ, ಹಿಂಸೆಗಳನ್ನು ಸಹಿಸಿಕೊಂಡೇ ದಲಿತರು ಬದುಕುವುದನ್ನು ಬಿಂಬಿಸುತ್ತವೆ.
* ನವ್ಯ ಲೇಖಕರಲ್ಲಿ ದಲಿತರನ್ನು ಸುಧಾರಿಸುವ ನೆಪದಲ್ಲಿ ಸವರ್ಣೀಯ ಹಿತಾಸಕ್ತಿಗಳನ್ನು ಪ್ರಚುರಪಡಿಸುವುದನ್ನು ಕಾಣುತ್ತೇವೆ.
* ದಲಿತ-ಬಂಡಾಯ ಸಂದರ್ಭದಲ್ಲಿಯ ಕಾದಂಬರಿಗಳು ಪ್ರಜ್ಞಾವಂತನಾಗುತ್ತಿರುವ ದಲಿತನ ಅವಸ್ಥೆ, ಹಾಗೆಯೇ ಪ್ರಜ್ಞಾವಂತರಾದ ಕೆಲವು ದಲಿತರು ಸ್ವಸಮುದಾಯದ ಶೋಧಕರಾಗಿ ಮಾರ್ಪಟ್ಟಿರುವುದನ್ನು ಬಿಂಬಿಸುತ್ತವೆ ಎಂಬುದನ್ನು ಅಸುಂಡಿಯವರು ಸೂಕ್ತವಾಗಿಯೇ ಗುರುತಿಸಿದ್ದಾರೆ.

ಸಂಸ್ಕೃತಿಯು ಹಿಂದೂ ಸನಾತನಿಗಳು ಬಿಂಬಿಸಿರುವಂತೆ ಏಕರೂಪದ್ದಲ್ಲ. ಅದು, ಆಯಾ ಪ್ರದೇಶ, ಆಯಾ ಕಾಲಕ್ಕನುಗುಣವಾಗಿ ಬೇರೆ ಬೇರೆಯಾಗಿ ಬೆಳೆದು ಬಂದಿದೆ. ಬಹು ಸಂಸ್ಕೃತಿಗಳ ಅಸ್ತಿತ್ವವನ್ನು ಪ್ರಚುರಪಡಿಸುವ ದಲಿತ ಕಾದಂಬರಿಗಳು, ಊರಿಂದ ಗಾವುದ ದೂರವಿರುವ ತಳವರ್ಗದ ಸಂಸ್ಕೃತಿಯನ್ನು ಕಟ್ಟಿಕೊಟ್ಟಿವೆ. ದೇವನೂರ ಅವರ 'ಕುಸುಮಬಾಲೆ', 'ಒಡಲಾಳ', ಮ.ನ.ಜ. ಅವರ 'ಮಾಗಿ', 'ಸೂರಪ್ಪ', ಮಾಲಗತ್ತಿಯವರ 'ಕಾರ್ಯ', ಮುಳ್ಳೂರು ನಾಗರಾಜರ 'ಮರಣ ಮಂಡಲ ಮಧ್ಯದೊಳಗೆ', ಮೊಗಳ್ಳಿ ಅವರ 'ತೊಟ್ಟಿಲು', ಬಿ. ಟಿ. ಲಲಿತಾ ನಾಯಕ ಅವರ 'ಗತಿ', ಶಿವರುದ್ರ ಕಲ್ಲೋಳಿಕರ ಅವರ 'ಹೊಲಗೇರಿಯ ರಾಜಕುಮಾರ', ಲಕ್ಷ್ಮಣ ಅವರ 'ಬದುಕು', ಜಂಬಣ್ಣ ಅಮರಚಿಂತ ಅವರ 'ಕುರುಮಯ್ಯ ಮತ್ತು ಅಂಕುಶದೊಡ್ಡಿ' ಮೊದಲಾದುವು ದಲಿತ ಸಂಸ್ಕೃತಿ ಮತ್ತು ಅವರ ವೈವಿಧ್ಯತೆಯನ್ನು ಎತ್ತಿ ತೋರಿಸುತ್ತವೆ. ದಲಿತ ಲೇಖಕರೇ ಸೃಜನಕ್ರಿಯೆಯಲ್ಲಿ ತೊಡಗಿಕೊಂಡ ನಂತರ ಹೊರಹೊಮ್ಮಿದ ಕಾದಂಬರಿಗಳು ದಲಿತರ ಬದುಕಿನ ವಿವಿಧ ಆಯಾಮಗಳನ್ನು ತೆರೆದು ತೋರಿರುವ, ಅವರ ಬಹುವಿಧ ಸಮಸ್ಯೆಗಳ ಕುರಿತು ಚರ್ಚಿಸಿರುವ ಸಂಗತಿಗಳನ್ನು ಸಂಶೋಧಕ ಶಿವರಾಮ ಅಸುಂಡಿ ಗುರುತಿಸಿದ್ದಾರೆ.

ದೇವನೂರ ಮಹಾದೇವ ಅವರ 'ಒಡಲಾಳ'ದಲ್ಲಿನ ಸಾಕವ್ವನ ಮೂಲಕ ದಲಿತರ ಸ್ಥಿತಿಗತಿಗಳ ಪರಿಚಯ, ಮ.ನ.ಜ. ಅವರ 'ಮಾಗಿ', ಲಲಿತಾ ನಾಯಕರ 'ಗತಿ'ಯಲ್ಲಿನ ಸ್ತ್ರೀಪರ ಕಾಳಜಿ ಹಾಗೂ ಸಂಸ್ಕೃತಿ ಸಮೃದ್ಧತೆ, ಮೊಗಳ್ಳಿ ಅವರ 'ತೊಟ್ಟಿಲು' ಇವುಗಳಲ್ಲಿ ದಲಿತರ ಬವಣೆಗಳ ಜೊತೆಗೆ, ಆರ್ಥಿಕ ದೃಢತೆಯ ಅವಕಾಶ ದೊರೆತರೂ ಅದರ ಲಾಭ ಪಡೆದುಕೊಳ್ಳುವಲ್ಲಿ ಅವರು ವಿಫಲವಾಗುವ ಕುರಿತು ಬೆಳಕು ಚೆಲ್ಲಲಾಗಿದೆ. ಅರವಿಂದ ಮಾಲಗತ್ತಿಯವರ 'ಕಾರ್ಯ' ಆಚರಣೆಯ ಹೆಸರಲ್ಲಿ ನಡೆದಿರುವ ಶೋಷಣೆ, ದಲಿತರ ಭವಿಷ್ಯದ ಹೊಳಹುಗಳನ್ನು ಕಟ್ಟಿಕೊಡುತ್ತದೆ. ಇವುಗಳ ಜೊತೆಗೆ ದಲಿತ ಸಂಸ್ಕೃತಿಯ ಸಮೃದ್ಧತೆ, ದಲಿತರ ನ್ಯಾಯ ಪದ್ಧತಿ, ಸ್ತ್ರೀಯರ ಸ್ಥಾನಮಾನ, ಆಹಾರ-ವಿಹಾರ, ಉಡುಗೆ-ತೊಡುಗೆ, ನಂಬಿಕೆ-ಆಚರಣೆ, ದಲಿತರ ಬದುಕಿನ ಭಾಷೆ ಮುಂತಾದುವುಗಳನ್ನು ಗುರುತಿಸಿ, ದಾಖಲಿಸುವಲ್ಲಿ ಡಾ|| ಶಿವರಾಮ ಅಸುಂಡಿಯವರು ಯಶಸ್ವಿಯಾಗಿದ್ದಾರೆ. ದಲಿತನು ತನ್ನ ಹೊಟ್ಟೆಯಲ್ಲಿನ ಸಿಟ್ಟು ರಟ್ಟೆಗೆ ಬಂದು ಮೇಲ್ಜಾತಿಯವರೊಂದಿಗೆ ಎಂದು ಸಂಘರ್ಷಕ್ಕಿಳಿದನೋ ಅಂದಿನಿಂದಲೇ ಸಂಸ್ಕೃತಿ-ಸಂಸ್ಕೃತಿಗಳ ಮುಖಾಮುಖಿಗೆ ತೀವ್ರತೆ ಒದಗಿಬಂತು ಎಂಬುದನ್ನು ಇಲ್ಲಿ ಗುರುತಿಸಿದ್ದಾರೆ.

ದಲಿತರಲ್ಲದ, ದಲಿತರಾಗಿಯೂ ದಮನಿತರ, ದಲಿತರ ಸಂಸ್ಕೃತಿಗೆ ಅಲ್ಪ-ಸ್ವಲ್ಪ ಕೈ ಹಚ್ಚಿದವರಿಂದ ಹಿಡಿದು ಇಡಿಯಾದ ದಲಿತ ಸಂಸ್ಕೃತಿಯನ್ನು ಬಿಂಬಿಸುವ ಕಾದಂಬರಿಕಾರರವರೆಗೆ ಒಟ್ಟು ೩೭ ಕಾದಂಬರಿಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಗು ಮಾಡಲಾಗಿದೆ. ಅವುಗಳಲ್ಲಿ ಬಿಂಬಿತವಾದ ವಿವಿಧ ಸಾಂಸ್ಕೃತಿಕ ಅಂಶಗಳನ್ನು ಗುರುತಿಸಲಾಗಿದೆ. ಒಟ್ಟು ೨೩೬ ಪುಟಗಳಲ್ಲಿ ಹರಡಿಕೊಂಡಿರುವ ಈ ಸಂಶೋಧನಾ ಕೃತಿ ಕನ್ನಡ ಸಾಹಿತ್ಯ ಚರಿತ್ರೆಯ ಪರಿಪೂರ್ಣತೆಗೆ, ಈವರೆಗೂ ಅಲ್ಲಲ್ಲಿ ಚೆಲ್ಲುವರಿದಿದ್ದ ತಳ ಸಂಸ್ಕೃತಿಗಳ ಆಕರಗಳನ್ನು ಒಟ್ಟುಗೂಡಿಸಿಕೊಟ್ಟದ್ದು ಅನನ್ಯ ಕಾರ್ಯ.

ಇದು 'ತಳ ಸಂಸ್ಕೃತಿ'ಯು ವೈಚಾರಿಕ ನೆಲೆಯಲ್ಲಿ, ಈವರೆಗೆ ಮೂಡಿಬಂದಿರುವ ಕಾದಂಬರಿಗಳನ್ನು ವಿಶ್ಲೇಷಿಸಿರುವ, ಒಂದೆಡೆಯಲ್ಲಿ ಚರ್ಚಿಸಿರುವ ವಿಶಿಷ್ಟ ಕೃತಿಯಾಗಿದೆ. ದಲಿತ ಲೋಕದ ಸಾಂಸ್ಕೃತಿಕ ವೈವಿಧ್ಯತೆಯನ್ನು ಬಿಂಬಿಸುವ, ಇನ್ನೂ ಹೆಚ್ಚಿನ ಜಿಜ್ಞಾಸೆಗೆ ಎಡೆಮಾಡಿಕೊಡುವ ಈ ಕೃತಿ ಸಾಹಿತ್ಯಲೋಕಕ್ಕೆ, ಸಂಶೋಧಕರಿಗೆ ತುಂಬ ವೈಚಾರಿಕ ಹಾಗೂ ಮಾಹಿತಿಪೂರ್ಣವಾದ ಚಿಂತನಶೀಲ ಕೈಪಿಡಿಯಾಗುವಲ್ಲಿ ಎರಡು ಮಾತಿಲ್ಲ.

**ಡಾ|| ಸೂರ್ಯಕಾಂತ ಎಸ್. ಸುಜ್ಯಾತ್**
ಕನ್ನಡ ಉಪನ್ಯಾಸಕರು, ಎಸ್. ವಿ. ಪದವಿ ಮಹಾವಿದ್ಯಾಲಯ, ಗುಲ್ಬರ್ಗಾ



ಇಂದು ಹೂವಿನ ದ್ವಾರವೆಂದು ಕರೆಯುವ ಅರಮನೆಯ ಕೋಟೆ ಗೋಡೆಗೆ ಎದುರಿರುವ ಪ್ರದೇಶ ದ್ವಾರ ಬಹುಶಃ ಅಂದಿನ ಹಣ್ಣಿನ ತೋಟಕ್ಕೆ ಅರಮನೆಯ ಮಂದಿ ಹೋಗಿ ಬರುವ ಬಾಗಿಲಾಗಿರಬಹುದು. ಈ ದ್ವಾರ ಮತ್ತು ಅರವಂಟಿಗೆ ಹಿಂಭಾಗದಲ್ಲಿರುವ ಅರಮನೆಯಿಂದ ತೋಟದ ಕಡೆಗೆ ಹೊರಬರುವ ಸಣ್ಣ ಬಾಗಿಲು ಪರಸ್ಪರ ಸಂಬಂಧವಿರುವ ಮಾರ್ಗಗಳಾಗಿರಬಹುದು. ಈ ಎಲ್ಲ ಸಾಧ್ಯತೆಗಳನ್ನು ಒಪ್ಪಬಹುದಾದಲ್ಲಿ 'ಭೋಜನಶಾಲೆ' ಗೊಂದಲ ಮತ್ತು ಅಸ್ಪಷ್ಟತೆ ಕಡೆಗೆ ಹೊರಳಬಹುದು. ಇಲಾಖೆಯ ಸಿಬ್ಬಂದಿ ಸಾಮಾನ್ಯವಾಗಿ ಭಾವಿಸುವಂತೆ ಭೋಜನಶಾಲೆ ಅರಮನೆ ಆವರಣದಲ್ಲಿ ಇದ್ದಿತೊ ಇಲ್ಲವೊ ಯಾವುದನ್ನೂ ಸಾಧಿಸಲು ಆಧಾರಗಳಿಲ್ಲ. ಆದರೆ ಗ್ರಾನೈಟ್ ಕಲ್ಲಿನ ನಾಲೆ, ಅರವಂಟಿಗೆ ಮತ್ತು ನೀರು ವ್ಯವಸ್ಥೆ ನಿಯಂತ್ರಕ ಕಟ್ಟಡ – ಇವೆಲ್ಲ ಕಮಲಾಪುರದಿಂದ ಹರಿಯುತ್ತಿದ್ದ ನೀರಿನ ನಾಲೆಗೆ ಸಂಬಂಧಿ ಸಿದ್ದಿರಬಹುದೆ ಹೊರತು ಗ್ರಾನೈಟ್ ಕಲ್ಲಿನ ನಾಲೆ ಮೇಲೆ ಜೋಡಿಸಿಟ್ಟಿರುವ ತಟ್ಟೆಗಳನ್ನು ಕೆತ್ತಿದ ಚಪ್ಪಡಿ ಕಲ್ಲುಗಳಿಗಲ್ಲ ಎಂಬುದು ಸ್ಪಷ್ಟ. ಹಾಗಿದ್ದರೆ ಏನಿದು ಈ ಭೋಜನಶಾಲೆ ?

# ಭೋಜನಶಾಲಾ ಮತ್ತು ವೈಭವೀಕರಣ

ಕರ್ನಾಟಕದ ಗತವನ್ನು ವೈಭವೀಕರಿಸುವ ಪ್ರಕ್ರಿಯೆಯೊಂದು ಕರ್ನಾಟಕದ ಏಕೀಕರಣ ಚಳವಳಿಯಲ್ಲಿ ಭಾವನಾತ್ಮಕ ಪೂರ್ವಭಾವಿ ನೆಲೆಯನ್ನು ಒದಗಿಸಿದ್ದು ಇಂದು ಇತಿಹಾಸದ ಭಾಗವಾಗಿದೆ. ಭಾರತೀಯ ಪುನರುತ್ಥಾನ ಕಾಲದಲ್ಲಿ ಭಾರತೀಯರು ಅನಾಗರಿಕರು, ಆಳ್ವಿಕೆಗೆ ಒಳಪಡಲು ಅರ್ಹರು ಎಂಬ ವಸಾಹತುಶಾಹಿ ಹುಟ್ಟುಹಾಕಿದ ವಾದಕ್ಕೆ ಪ್ರತಿಯಾಗಿ ಅನ್ಯ ಸಂಸ್ಕೃತಿಗಳ ದಾಳಿಗಳ ಪೂರ್ವದಲ್ಲಿ ಭಾರತ ಉನ್ನತ ಸಂಸ್ಕೃತಿಯನ್ನು ಹೊಂದಿತ್ತು ಎಂದು ಪ್ರತಿಪಾದಿಸಲು ಪೂರ್ವವನ್ನು ವೈಭವೀಕರಿಸಿ ಮರುಕಟ್ಟಿದ ರೀತಿ ಕರ್ನಾಟಕ ಏಕೀಕರಣ ಸಂದರ್ಭದಲ್ಲಿ ಮಾದರಿಯಾಗಿ ಕಾರ್ಯ ನಿರ್ವಹಿಸಿರುವಂತೆ ತೋರುತ್ತದೆ. ಭಾರತೀಯ ಸಂದರ್ಭದಲ್ಲಿ 'ವೈಭವೀಕರಣ' ಅನ್ಯ ಸಂಸ್ಕೃತಿಗೆ ಸೆಡ್ಡು ಹೊಡೆಯಲು ಬಳಕೆಯಾಗಿದ್ದರೆ, ಕರ್ನಾಟಕದ ಸಂದರ್ಭದಲ್ಲಿ ಬೇರೆ ಬೇರೆ ಪ್ರಾಂತಗಳ ಆಡಳಿತಗಳಡಿ ಹರಿದು ಹಂಚಿಹೋಗಿದ್ದ ಕನ್ನಡದ ಜನ ಮತ್ತು ಪ್ರದೇಶಗಳನ್ನು ಕನ್ನಡ ಹಿತಾಸಕ್ತಿಯ(?) ಆಡಳಿತದ ಅಡಿಯಲ್ಲಿ ಒಗ್ಗೂಡಿಸುವ ಚಳವಳಿಗೆ ವೈಚಾರಿಕ ನೆಲೆ ಒದಗಿಸುವ ಪರಿಕರವಾಗಿ ಬಳಕೆಯಾಗಿರುವಂತಿದೆ. ಆದರೂ ಈ ಎರಡೂ ಸಂದರ್ಭದಲ್ಲಿ ಮೈದೋರಿದ ಸಾಂಸ್ಕೃತಿಕ ರಾಜಕಾರಣ ಒಂದೇ ಬಗೆಯದಾಗಿ ಇರುವಂತೆ ಕಂಡುಬರುತ್ತದೆಯೆ ? ಬಹು ಸಮುದಾಯಗಳ ಸಮಾಜದಲ್ಲಿ ನಿರ್ದಿಷ್ಟ ಸಮುದಾಯವೊಂದು ತನ್ನ ಹಿತಾಸಕ್ತಿ ಕೇಂದ್ರಿತ ತತ್ವ ಧೋರಣೆಯನ್ನು ಪ್ರತಿಪಾದಿಸಲು ಮತ್ತು ಈ ಧೋರಣೆಯ ನಕಾರಾತ್ಮಕ ಪರಿಣಾಮಗಳನ್ನು ಸಕಾರಾತ್ಮಕವಾಗಿ ಬಿಂಬಿಸಲು ವೈಭವೀಕರಣದ ಚಿಂತನಾ ಕ್ರಮವನ್ನು ಬಳಕೆಗೆ ತಂದಿತೆ ? ಇದು ಅಧ್ಯಯನಗಳಿಂದ ಸ್ಪಷ್ಟವಾಗಬೇಕಾದ ಅಂಶವಾಗಿದೆ.

**ವೈಭವೀಕರಣ**

ಈ ಚಿಂತನಾಕ್ರಮ ಭಾರತ ಮತ್ತು ಕರ್ನಾಟಕದ ಸಂದರ್ಭದಲ್ಲಿ ಮೈ ಪಡೆದುಕೊಂಡಿದ್ದಾದರೂ ಹೇಗೆ ಎಂಬುದನ್ನು ಸೂಚಿಸಲು ಮೇಲಿನ ಆರಂಭಿಕ ಮಾತುಗಳನ್ನು ಆಡಬೇಕಾಯಿತು. ಏಕೆಂದರೆ ವಿಜಯನಗರಕ್ಕೆ ಸಂಬಂಧಪಟ್ಟ ಇತಿಹಾಸ ಮತ್ತು ಸ್ಮಾರಕಗಳಿಗೂ 'ವೈಭವೀಕರಣ' ಚಿಂತನೆಯ ಪರಿಕರ ಬಳಕೆಯಾಗಿರುವಂತಿದೆ. ವಿಜಯನಗರ ಸಾಮ್ರಾಜ್ಯದ ಅಧಿಕಾರ ಕೇಂದ್ರವಿದ್ದ ಅಂದಿನ ಪ್ರದೇಶವಿಂದು 'ಹಾಳು ಹಂಪೆ' ಎಂದು ಪ್ರಸಿದ್ಧಿ ಪಡೆದಿದೆ. ಈ ಜೋಡಿಪದಗಳು ಪ್ರಸ್ತುತ ಸ್ಥಿತಿ ಕುರಿತು ಕೊರಗನ್ನೂ ಅದರ ಪೂರ್ವದ ಸ್ಥಿತಿ ಕುರಿತು ವೈಭವೀಕೃತ ಹೆಮ್ಮೆಯ ಕಲ್ಪನೆಯನ್ನೂ ಕಟ್ಟಿಕೊಡುತ್ತವೆ. ಇತಿಹಾಸದ ಪುಟಗಳು ಕೂಡ 'ವೈಭವ'ದ ಕನ್ನಡಿಯ ಮೂಲಕವೇ ಹಿಂದಿನ ಸ್ಥಿತಿಗತಿಗಳನ್ನು ಕಾಣಿಸಲು ಮತ್ತು ತಕ್ಕ ಸಾಕ್ಷ್ಯಾಧಾರಗಳನ್ನು ಕಟ್ಟಿಕೊಡಲು ಸಕಲ ಪ್ರಯತ್ನಪಟ್ಟಿರುವಂತೆ ಕಾಣುತ್ತದೆ. ಸಾಮ್ರಾಜ್ಯದ ನಿರ್ದಿಷ್ಟ

**ಡಾ|| ಶ್ರೀಧರ ಪಿಸ್ಸೆ**

ಅವಧಿಯಲ್ಲಿ ಅರಮನೆ ಹೊಂದಿದ್ದ ಸಂಪತ್ತಿನ ವೈಭವವನ್ನು ಇಡೀ ಸಾಮ್ರಾಜ್ಯದ ಸುಖ ಸಂಪತ್ತಿನ ವೈಭವವಾಗಿ ಭಾವಿಸುವಂತೆ ಕಾಣಿಸಲಾಗುತ್ತದೆ. ಹಿಂದೂ ಧರ್ಮದ ಶೈವ ಮತ್ತು ವೈಷ್ಣವ ಶಾಖೆಗಳ ಹಿರಿಮೆಯನ್ನು ವಿಜಯನಗರ ಸಾಮ್ರಾಜ್ಯದೊಂದಿಗೆ ಸಮೀಕರಿಸುವ ಇತಿಹಾಸದ ನಿರೂಪಣೆಗಳು, ಸಂಗಮ ವಂಶದ ಎರಡನೆಯ ವಿರೂಪಾಕ್ಷ ೧೪೭೦ರಲ್ಲಿ ತುಂಗಭದ್ರೆಯ ವರೆಗೂ ತನ್ನನ್ನು ಹಿಮ್ಮೆಟ್ಟಿಸಿಕೊಂಡು ಬಂದ ಬಹಮನಿ ಸುಲ್ತಾನ ಮೂರನೆಯ ಮಹಮದ್ ಶಾ ಲಷ್ಕರ್‌ನಿಗೆ ತನ್ನ ಮಗಳನ್ನು ಮದುವೆ ಮಾಡಿಕೊಟ್ಟು ರಾಜಿ ಮೂಲಕ ತನ್ನ ರಾಜ್ಯವನ್ನು ಭದ್ರಮಾಡಿಕೊಂಡ ಸಂಗತಿಯನ್ನು ಮುಂಚೂಣಿಗೆ ತರುವುದೇ ಇಲ್ಲ. ತಾಳಿಕೋಟೆ ಯುದ್ಧದಲ್ಲಿ ಎಡಪಾರ್ಶ್ವದಲ್ಲಿ ತಿರುಮಲನೂ, ಮಧ್ಯದಲ್ಲಿ ರಾಮರಾಯನೂ, ಬಲಪಾರ್ಶ್ವದಲ್ಲಿ ವೆಂಕಟಾದ್ರಿಯೂ ವಿಜಯನಗರ ಸೈನ್ಯದ ದಂಡನಾಯಕರಾಗಿದ್ದು (ಸಿವೆಲ್ ಪುಟ ೨೦೯), ವೈರಿಪಡೆಗಳು ರಾಮರಾಯನ ತಲೆ ಕಡಿದ ನಂತರ ಉಳಿದಿಬ್ಬರು ದಂಡನಾಯಕರು ಸೈನ್ಯವನ್ನು ಮುನ್ನಡೆಸದೆ ವಿಜಯನಗರಕ್ಕೆ ಒಂದೇ ಉಸಿರಲ್ಲಿ ಓಡಿಬಂದು ಅರಮನೆಯ ಚರ ಸಂಪತ್ತನ್ನು ಪೆನುಗೊಂಡೆಗೆ ಲೂಟಿ ಮಾಡಿಕೊಂಡು ಹೋದ ಬಗ್ಗೆಯಾಗಲೀ ಈ ಮೂಲಕ ವೈರಿಪಡೆಗಳಿಂದ ಒಳಗೊಂದು ಹಲವು ಬಗೆಗಳಲ್ಲಿ ಲೂಟಿ-ದರೋಡೆ ಪ್ರಕ್ರಿಯೆಗೆ ಮತ್ತು ವಿಜಯನಗರದ ಅರಾಜಕತೆಗೆ ನಾಂದಿ

ಹಾಡಿದ ಬಗ್ಗೆಯಾಗಲೀ ಚಕಾರವೆತ್ತದೆ ವಿಜಯನಗರದ ನಾಶವನ್ನು ಬಹಮನಿ ಸೈನಿಕರ ತಲೆಗೆ ಕಟ್ಟಿಬಿಡಲಾಗಿದೆ. ಇಂಥ ಎಲ್ಲ ಸಂಗತಿಗಳ ಹಿಂದೆ 'ವೈಭವೀಕರಣ'ದ ಪರಿಕರವೆ ಕಾರ್ಯ ನಿರ್ವಹಿಸಿದೆ ಎನ್ನಬೇಕು. ಐತಿಹಾಸಿಕ ಅಂಶಗಳ ಸೂಕ್ಷ್ಮ ಹಾಗೂ ಸಮಗ್ರ ಪರಿಶೀಲನೆಯಿಂದ ವಿಜಯನಗರದ ಇತಿಹಾಸಕ್ಕೂ 'ವೈಭವೀಕರಣ' ಚಿಂತನೆಗೂ ನಂಟಿರುವುದು ತಿಳಿಯಬಹುದು. ಅಷ್ಟೇ ಅಲ್ಲ, ಇಂದಿನ ಹಂಪಿಯಲ್ಲಿರುವ ಸ್ಮಾರಕಗಳೂ ಅವಶೇಷಗಳೂ ಈ ಪ್ರಕ್ರಿಯೆಯಿಂದ ಹೊರತಾಗಿರುವಂತೆ ಕಾಣುವುದಿಲ್ಲ.

**ಉಗ್ರ ನರಸಿಂಹ**

ವಿಜಯನಗರದ ಅವನತಿಯ ಕಾಲಾವಧಿಯಲ್ಲಿ ಉಗ್ರ ನರಸಿಂಹ ವಿಗ್ರಹ ಹಾಳಾಯಿತೆಂದು ಹೇಳಲಾಗುತ್ತದೆ. ಇದರ ಅವಶೇಷಗಳ ಜೋಡಣೆ ಮತ್ತು ಸಂರಕ್ಷಣೆ ಕುರಿತ ಪ್ರಕರಣವನ್ನೇ 'ವೈಭವೀಕರಣ' ಚಿಂತನೆಗೆ ನಿದರ್ಶನಾರ್ಥವಾಗಿ ನೋಡಬಹುದು. ಹಂಪಿ ಬೇರೆ ಬೇರೆ ಕಾಲಘಟ್ಟಗಳಲ್ಲಿ ಬೌದ್ಧ, ಜೈನ, ಶೈವ, ವೈಷ್ಣವ ಮತಧರ್ಮಗಳ ಕೇಂದ್ರ ಮಾತ್ರವಾಗಿರದೆ ಎಲ್ಲ ಕಾಲಗಳಲ್ಲಿ ಸ್ತ್ರೀ ದೈವಾರಾಧನೆಯ ಕೇಂದ್ರವೂ ಆಗಿತ್ತು. ರಾಜ್ಯ ಮತ್ತು ಕೇಂದ್ರ ಸರಕಾರಗಳ ಸಂಬಂಧಪಟ್ಟ ಇಲಾಖೆಗಳಲ್ಲಿದ್ದ ಅಧಿಕಾರಿಗಳು ತಮ್ಮ ನಿರ್ದಿಷ್ಟ ಮತಧರ್ಮದ ದೈವವನ್ನು ಹಂಪಿಯ ಪ್ರಾತಿನಿಧಿಕ ದೈವವನ್ನಾಗಿ ಮುಂಚೂಣಿಗೆ ತರುವ ಅವಸರದಲ್ಲಿ, ಒಡೆದುಹೋಗಿದ್ದ ನರಸಿಂಹ ವಿಗ್ರಹದ ಸಂರಕ್ಷಣಾ ಕಾರ್ಯವನ್ನು ಮೊದಲ ಆದ್ಯತೆಯ ಮೇಲೆ ಕೈಗೆತ್ತಿಕೊಂಡರು. ಮುರಿದ ಕಾಲುಗಳನ್ನು ಅಡ್ಡಪಟ್ಟಿ ಕೊಟ್ಟು ನಿಲ್ಲಿಸಿ ''ಉಗ್ರ ನರಸಿಂಹ''ನೆಂದು ಹೆಸರಿಸಿದರು, ಹಂಪಿಯೆಂದರೆ ಉಗ್ರ ನರಸಿಂಹ ಮತ್ತು ಕಲ್ಲಿನ ರಥ ಎನ್ನುವಷ್ಟರ ಮಟ್ಟಿಗೆ ಅವನ್ನು ಪ್ರಸಿದ್ಧಿಪಡಿಸಿದರು. ಕಾಲಾನಂತರದಲ್ಲಿ ಶಿವರಾಮ ಕಾರಂತರು ಹಂಪಿಗೆ ಭೇಟಿ ನೀಡಿ ಉಗ್ರ ನರಸಿಂಹನ ಕುರಿತು ತಮ್ಮ ತಕರಾರು ತೆಗೆದರು. ಸೌಂದರ್ಯಪ್ರಜ್ಞೆ ಮತ್ತು ವಿವೇಚನೆ ಇಲ್ಲದೆ ಶಾಂತ ಮುಖಮುದ್ರೆಯ ಲಕ್ಷ್ಮೀನರಸಿಂಹ ವಿಗ್ರಹಕ್ಕೆ ಅಡ್ಡಪಟ್ಟಿ ಕೊಟ್ಟು ಸಂರಕ್ಷಣೆಯ ಹೆಸರಿನಲ್ಲಿ ವಿಕಾರಗೊಳಿಸಿರುವುದಲ್ಲದೆ ಉಗ್ರ ನರಸಿಂಹನೆಂದು ಪ್ರಚುರಪಡಿಸಿದ ಇಲಾಖೆಯನ್ನು ತರಾಟೆಗೆ ತೆಗೆದುಕೊಂಡರು. ಕಾರಂತರ ವಾದಕ್ಕೆ ಪೂರಕವಾಗಿ ನರಸಿಂಹ ವಿಗ್ರಹದ ಎಡತೊಡೆಯ ಮೇಲೆ ಆಸೀನಳಾಗಿದ್ದ ಲಕ್ಷ್ಮೀ ವಿಗ್ರಹದ ಕೈಯೊಂದು ಬೆನ್ನ ಹಿಂಭಾಗಕ್ಕೆ ಆಸರೆಗಾಗಿ ಚಾಚಿಕೊಂಡಿದ್ದು, ಮುರಿದುಹೋದ ಅದರ ಮುಂದಿನ ಭಾಗ ಇಂದಿಗೂ ಹಾಗೆಯೇ ಉಳಿದಿದೆ. ಕಾರಂತರ ಅಭಿಪ್ರಾಯ ವ್ಯಾಪಕ ಮನ್ನಣೆಗೆ ಪಾತ್ರವಾಯಿತು. ಇಲಾಖೆಯ ವಿಕೃತರೂಪ ಶಾಶ್ವತವಾಗಿ ಉಳಿದುಹೋಯಿತು. ಈ ಎಲ್ಲ ಅವಾಂತರಗಳಿಗೆ ಮೂಲಬೀಜ ಸ್ವಂತ ಕುರಿತ ಅಂಧಾಭಿಮಾನ ಮತ್ತು ಸ್ವಮತದ ದೈವವನ್ನು ಪ್ರಸ್ತುತ ಸಮಾಜದಲ್ಲಿ ಪ್ರಭಾವಿಯನ್ನಾಗಿಯೂ ಉನ್ನತ ಸ್ಥಿತಿಯಲ್ಲಿಯೂ



ಇರಿಸಬೇಕೆನ್ನುವ ಹುಚ್ಚು ಸಾಹಸ ಮಾತ್ರ. ಇಲ್ಲಿ ಇತಿಹಾಸ ನಿಷ್ಠೆಯಾಗಲೀ ಆ ಮೂಲಕ ಒಂದು ಕಾಲಘಟ್ಟದ ಸಾಂಸ್ಕೃತಿಕ ಸ್ಥಿತಿಗತಿಯ ಸಂರಕ್ಷಣೆಯಾಗಲೀ ಎಲ್ಲವೂ ಶೂನ್ಯಸ್ಥಿತಿ ತಲುಪಿತ್ತು ಎಂಬುದು ಬೇರೆ ಮಾತು. ಪ್ರಾಚ್ಯ ವಸ್ತುಗಳ ಸಂರಕ್ಷಣೆಯ ಸಂದರ್ಭದಲ್ಲಿ ''ವೈಭವೀಕರಣ'' ಪ್ರಕ್ರಿಯೆ ಕಾರ್ಯಗತಗೊಂಡ ಸ್ವರೂಪಕ್ಕೆ ಇದೊಂದು ಉತ್ತಮ ಪ್ರಕರಣವಾಗಿದ್ದು, ಭೋಜನಶಾಲಾ ಸ್ಮಾರಕವನ್ನು ಕೂಡ ಇದೇ ಹಿನ್ನೆಲೆಯಲ್ಲಿ ಪರಿಶೀಲಿಸಬಹುದು.

**ಭೋಜನಶಾಲಾ**

ಕಮಲಾಪುರದಿಂದ ಹಂಪಿಗೆ ಹೋಗುವ ರಸ್ತೆಯಲ್ಲಿ ಕೋಟೆಗೋಡೆ, ರಾಣಿ ಸ್ನಾನಗೃಹ ದಾಟಿ ಮುಂದೆ ಹೋದಲ್ಲಿ, ಅಂದರೆ ಕಮಲಾಪುರದಿಂದ ಒಂದು ಕಿ.ಮೀ. ನಂತರದಲ್ಲಿ ರಸ್ತೆಯ ಎಡಗಡೆಗೆ 'ಭೋಜನಶಾಲಾ' ಎಂಬ ಬೋರ್ಡು (ಕಳೆದ ಶತಮಾನದ ತೊಂಬತ್ತರ ದಶಕದಲ್ಲಿ) ಇತ್ತು. (ಈಗ ಬೋರ್ಡು ಹಾಕಲು ಹೊಸ ಕಂಬ ನೆಡಲಾಗಿದೆ. ಬೋರ್ಡು ಇಲ್ಲ) ಅದರ ಪಕ್ಕದಲ್ಲಿ ರಸ್ತೆಯಿಂದ ಸುಮಾರು ನೂರಿಪ್ಪತ್ತು ನೂರನಲವತ್ತು ಅಡಿಗಳ ದೂರದವರೆಗೆ ಗ್ರಾನೈಟ್ ಕಲ್ಲಿನಿಂದ ಕಟ್ಟಿದ, ಇಬ್ಬರು ಓಡಾಡಬಹುದಾದಷ್ಟು ಅಗಲವಿರುವ ನಾಲೆಯೊಂದು ಚಾಚಿಕೊಂಡಿದೆ. ಕೆಳಗೂ ಗ್ರಾನೈಟ್ ಕಲ್ಲು ಹಾಸಿರುವುದನ್ನು ಗುರುತಿಸಬಹುದು. ನಾಲೆಯ ಎರಡೂ ಬದಿಯ ಕಲ್ಲುದಂಡೆಯ ಮೇಲೆ ಜೋಡಿಸಿದ ಕಪ್ಪು ಕಲ್ಲು ಚಪ್ಪಡಿಗಳ ಮೇಲೆ ಕೆತ್ತಿದ ಬಾಳೆ ಎಲೆ ಹಾಗೂ ಗುಂಡಗಿನ ಊಟದ ತಟ್ಟೆ ಮತ್ತು ಅದರ ಸುತ್ತ ಸಣ್ಣ ಬಟ್ಟಲುಗಳ ಆಕಾರಗಳು ಪ್ರವಾಸಿಗರ ಕುತೂಹಲವನ್ನು ಸೆಳೆಯುತ್ತವೆ. ರಸ್ತೆಯಂಚಿನ ಆರಂಭದಲ್ಲಿ ಅಂಥ ಕಪ್ಪು ಚಪ್ಪಡಿ ಕಲ್ಲುಗಳನ್ನು ಮಕಾಡೆ ಹಾಕಿದಂತಿದ್ದು ಅದರ ಮೇಲೆ ಯಾವುದೇ ಕೆತ್ತನೆಯ ಚಿತ್ತಾರ ಕಂಡುಬರುವುದಿಲ್ಲ. ಸುಮಾರು ಎರಡೂವರೆ ಅಡಿ ಅಗಲ ಮತ್ತು ಏಳೆಂಟು ಅಡಿ ಉದ್ದದ ಅಂಥ ಒರಟು ಚಪ್ಪಡಿ ಕಪ್ಪುಕಲ್ಲುಗಳು ಎರಡೂ ದಂಡೆಯ ಮೇಲೆ ಸುಮಾರು ಎರಡು ಮೂರು ಇರಬಹುದು. ರಸ್ತೆಯಿಂದ ಸುಮಾರು ಮೂವತ್ತು ನಲವತ್ತು ಅಡಿಗಳಲ್ಲಿ ನಾಲೆ ಸುಮಾರು ೭೦ ಡಿಗ್ರಿಗಳಲ್ಲಿ ಎಡಕ್ಕೆ ತಿರುಗುತ್ತದೆ. ಹಾಗೆಯೆ ಮುಂದೆ ಹೋದಲ್ಲಿ ಊಟದ ತಟ್ಟೆಗಳು ಕೆತ್ತಿದ ಕಪ್ಪು ಕಲ್ಲಿನ ಚಪ್ಪಡಿಗಳು ಇಲ್ಲವಾಗಿ, ಕೇವಲ ಗ್ರಾನೈಟ್ ಕಲ್ಲಿನ ನಾಲೆ ಮುಂದುವರಿಯುತ್ತದೆ. ಈ ಗ್ರಾನೈಟ್ ಕಲ್ಲುಗಳ ಮೇಲೂ ಅಲ್ಲಲ್ಲಿ ಕೆತ್ತನೆ ಮಾಡಿದ್ದು, ಆಕಾರಗಳು ಸ್ಪಷ್ಟವಾಗಿ ಗೋಚರಿಸುವುದಿಲ್ಲ. ಕೆಲವು ಕಡೆ ಊಟದ ತಟ್ಟೆಯಾಕಾರ ಕೆತ್ತಿರುವ ಗ್ರಾನೈಟ್ ಕಲ್ಲುಗಳನ್ನು ನಾಲೆ ದಂಡೆಯ ಕಟ್ಟಡಕ್ಕೆ ಬಳಸಿರುವುದು ಕಂಡುಬರುತ್ತದೆ. ಈ ನಾಲೆ ಮುಗಿಯುವಲ್ಲಿ ಸೈಜುಗಲ್ಲುಗಳ ರಾಶಿ ಬಿದ್ದಿದೆ. ನಾಲೆಯ ಎರಡೂ ದಂಡೆಗಳಿಂದ ಅದರ ಹಿಂಭಾಗಕ್ಕೆ ಹತ್ತು ಅಡಿಗಳವರೆಗೆ ಕಲ್ಲು ಕಟ್ಟಿ ವೇದಿಕೆಯಂತೆ ಎತ್ತರಿಸಲಾಗಿದೆ. ಬಟ್ಟ ಬಯಲಲ್ಲಿ, ನಾಲೆಯ ಮೇಲಿರುವ ಕಲ್ಲು ತಟ್ಟೆಗಳು ಯಾವ ಬಗೆಯ ಭೋಜನಶಾಲೆ ಆಗಿರಬಹುದು ಎಂಬ ಅನುಮಾನ ಈ ಸ್ಮಾರಕವನ್ನು ನೋಡುತ್ತಿರುವಂತೆ ಯಾವ ಪ್ರವಾಸಿಗನಿಗೂ ಕಾಡದೆ ಇರದು. ಊಟದ ಕಲ್ಲಿನ ತಟ್ಟೆಗಳಿರುವ ನಾಲೆ ರಸ್ತೆಯಂಚಿನಲ್ಲಿ ಇದ್ದಕ್ಕಿದ್ದಂತೆ ಕೊನೆಗೊಂಡಂತೆ ಭಾಸವಾಗುತ್ತದೆ. ಸ್ವಲ್ಪ ಎಚ್ಚರದಿಂದ ಗಮನಿಸಿದರೆ ಬ್ರಿಟಿಷರು ಕಮಲಾಪುರದಿಂದ ಹಂಪಿಗೆ ಹೊಸ ರಸ್ತೆ ಮಾಡುವ ಸಂದರ್ಭದಲ್ಲಿ ಇಂದಿನ ರಸ್ತೆಯ ಭಾಗದಲ್ಲಿ ಮುಂದುವರಿದಿದ್ದ ಕಲ್ಲಿನ ಊಟದ ತಟ್ಟೆಗಳ ನಾಲೆಯನ್ನು ಅಗೆದು ನಾಶಪಡಿಸಿರಬಹುದಾದ ಸಾಧ್ಯತೆ ಗೋಚರಿಸುತ್ತದೆ. ಬಟ್ಟ ಬಯಲಿನಲ್ಲಿ ಊಟದ ತಟ್ಟೆಗಳನ್ನು ಕೆತ್ತಿರುವ ಕಪ್ಪು ಕಲ್ಲಿನ ಚಪ್ಪಡಿ ಹಾಸಿದ ನಾಲೆಗೆ ಭೋಜನಶಾಲೆ ಎಂದು ಕರೆದಿರುವುದು ಏಕೆ ? ಇದು ಕೇವಲ ಕೆತ್ತನೆಯ ವಿಶೇಷವೇ ಅಥವಾ ಈ ಕಲ್ಲಿನ ತಟ್ಟೆಗಳ ಮೇಲೆ ಊಟಕ್ಕೆ ಬಡಿಸಲಾಗುತ್ತಿತ್ತೆ? ಹಾಗಿದ್ದಲ್ಲಿ ಬಟ್ಟಬಯಲಲ್ಲಿ ಊಟ ಮಾಡುತ್ತಿದ್ದ ಜನವರ್ಗ ಯಾವುದು ? ಭೋಜನಶಾಲೆಯ ನುಡಿಗಟ್ಟು ನೀಡುವ ಭವ್ಯ ಮತ್ತು ವೈಭವದ ಕಲ್ಪನೆ ಮತ್ತು ಬೋಳುಬೋಳಾದ ಕಲ್ಲಿನ ಊಟದ ತಟ್ಟೆಗಳ ನಾಲೆ ಇರುವ ಸ್ಥಿತಿಯ ವೈರುಧ್ಯದ ನಡುವೆ ಇದ್ದಿರಬಹುದಾದ ವಾಸ್ತವ ಯಾವುದು? ಮೂಲ ಸ್ಥಿತಿ ಮತ್ತು ಕಾಲಾಂತರದಲ್ಲಿ ಬದಲಾದ ಸ್ಥಿತಿ – ಇವುಗಳ ನಡುವಿನ ಸಂಬಂಧ ಮತ್ತು ಸ್ವರೂಪಗಳು ಯಾವ ಬಗೆಯವು ?

ರಸ್ತೆಯ ಆಚೆಗೆ, ಆದರೆ ಸ್ವಲ್ಪ ಮುಂದಕ್ಕೆ, ಮಂಟಪದ ಆಕಾರವುಳ್ಳ ಒಂದು ಕಟ್ಟಡ ಇಂದಿಗೂ ಸುಭದ್ರವಾಗಿದೆ. ಕಲ್ಲಿನ ತೊಟ್ಟಿ/ಗಚ್ಚು ಇರುವ ಅದನ್ನು ನೀರಿನ ಅರವಂಟಿಗೆ ಎಂದು ಹೇಳಲಾಗುತ್ತದೆ. ಈ ಕಟ್ಟಡ ಕಟ್ಟಿದ ಆ ಕಾಲಕ್ಕೆ ಸುಂದರವಾಗಿದ್ದಿರಬಹುದು. ಆದರೆ ಅದನ್ನು ನೀರಿನ ಅರವಂಟಿಗೆಗಾಗಿಯೆ ಕಟ್ಟಿಸಲಾಗಿತ್ತು ಎನ್ನುವುದಾದರೆ ಈಗಲೂ ಭವ್ಯವಾಗಿ ಕಾಣುತ್ತದೆ. ಅರಮನೆಗೆ ಹೋಗಿಬರಲು ಸಣ್ಣ ಬಾಗಿಲೊಂದು ಸ್ವಲ್ಪ ದೂರದಲ್ಲಿ ಇದ್ದು ಅರಮನೆಗೆ ಅಂಟಿಕೊಂಡಂತಿರುವ, ಅರಮನೆಯ ಅಕ್ಕಪಕ್ಕದ ಈ ಜಾಗ ಸಾಮಾನ್ಯ

## ಪ್ರಶಸ್ತಿ

### ರಾಜಶೇಖರ ಮಠಪತಿ

ಬೆಂಗಳೂರಿನ ಕರ್ನಾಟಕ ಗಾಂಧಿ ಸ್ಮಾರಕನಿಧಿ(ರಿ)ಯ ೨೦೧೧-೧೨ನೇ ಸಾಲಿನ ಪ್ರಶಸ್ತಿಯನ್ನು ಹಾಸನ ಜಿಲ್ಲೆಯ ಬೇಲೂರಿನ ಸರಕಾರಿ ಪದವಿ ಮಹಾವಿದ್ಯಾಲಯದ ಉಪನ್ಯಾಸಕರಾದ ಡಾ|| ರಾಜಶೇಖರ ಮಠಪತಿಯವರ *'ಗಾಂಧಿ: ಅಂತಿಮ ದಿನಗಳು'*

ಜನರಿಗೆ ನಿರ್ಬಂಧಿತ ಪ್ರದೇಶವಾಗಿರುವಂತೆ ಕಾಣುತ್ತದೆ. ಇನ್ನೂ ಹೊರನಾಡ ಆಗಂತುಕ ಪ್ರವಾಸಿಗರಿಗಂತೂ ಇಲ್ಲಿಗೆ ಖಂಡಿತ ಪ್ರವೇಶವಿರಲಾರದು. ಹಾಗಿದ್ದಲ್ಲಿ ಇಲ್ಲಿನ ನೀರಿನ ಅರವಂಟಿಗೆ ಯಾರಿಗಾಗಿ ಕಟ್ಟಿಸಿದ್ದಿರಬಹುದು, ಎಂಬ ಪ್ರಶ್ನೆ ಎದುರಾಗುತ್ತದೆ. ಇಟ್ಟಿಗೆ ಗೋಡೆಯದು ಇದ್ದಿರಬಹುದಾದ ಐದಾರು ಕಂಬಗಳನ್ನೊಳಗೊಂಡು ಹಲವು ಕಮಾನುಗಳುಳ್ಳ ಈ ಕಟ್ಟಡವನ್ನು ದಾಟಿ ಬೇಲಿಯ ಒಳಗೆ ಹೋದರೆ ಕಲ್ಲು ಮಣ್ಣಿನ ಸಣ್ಣಪುಟ್ಟ ಗುಡ್ಡೆಗಳು, ಕಲ್ಲು, ಮುಳ್ಳು, ಮುಳ್ಳುಗಿಡಗಳನ್ನು ಒಳಗೊಂಡು ಇತರ ಎಲ್ಲ ಬಗೆಯ ಸಣ್ಣಪುಟ್ಟ ಗಿಡಗಳು ವ್ಯಾಪಿಸಿಕೊಂಡಿವೆ. ಸ್ಥಳಮೂಲ ಬಲ್ಲವರೊಂದಿಗೆ ಮುಂದೆ ಹೋದಲ್ಲಿ ಅಕ್ಕಪಕ್ಕದಲ್ಲೆ ಅಳವಡಿಸಿದ್ದ ಐದಾರು ಇಂಚು ಅಗಲದ ಸುಟ್ಟ ಮಣ್ಣಿನ ಪೈಪುಗಳ ಮುಂಭಾಗದ ಅವಶೇಷ ಅಲ್ಲಿ ಕಂಡುಬರುತ್ತದೆ. ಹಾಗೆಯೆ ರಸ್ತೆಗೆ ಪರ್ಯಾಯವಾಗಿ ಮುಂದುವರಿದಲ್ಲಿ ಗಾರೆಯಿಂದ ಮಾಡಿದ ದೊಡ್ಡ ತೊಟ್ಟಿಯೊಂದು ಕಣ್ಣಿಗೆ ಬೀಳುತ್ತದೆ. ಅದಕ್ಕೆ ಕಮಲಾಪುರದ ದಿಕ್ಕಿನಲ್ಲಿ ಮೇಲೆ ಹೇಳಿದಂತೆ ಎರಡು ಪೈಪುಗಳು ಅಳವಡಿಕೆಯಾಗಿದ್ದು ಅದರ ವಿರುದ್ಧ ದಿಕ್ಕಿನಲ್ಲಿ ಸಮಾನ ಅಂತರದ ನಡುವೆ ಇರುವ ನಾಲ್ಕು ಪೈಪುಗಳ ಬಾಯಿಗಳಿವೆ. ಬಹುಶಃ ಇದೊಂದು ಅರಮನೆಗೆ ನೀರು ವ್ಯವಸ್ಥೆ ಮಾಡುವ ನಿಯಂತ್ರಕ ಕೊಠಡಿಯಾಗಿದ್ದಿರ ಬಹುದೆಂಬ ಊಹೆ ತಜ್ಞ ಸ್ನೇಹಿತರದ್ದಾಗಿದೆ. ಅರಮನೆಗೆ ನೀರು ಒದಗಿಸುವ ನೀರು ನಿಯಂತ್ರಕ ವ್ಯವಸ್ಥೆಯ ಭಾಗವಾಗಿ ಅರವಂಟಿಗೆ ಕಟ್ಟಡ ಮತ್ತು ಊಟದ ಕಲ್ಲಿನ ತಟ್ಟೆಗಳು ಕೆತ್ತಿರುವ ನಾಲೆ ಸೇರಿರಬಹುದೆ ಎಂಬ ಪ್ರಶ್ನೆ ಕೇಳಿಕೊಳ್ಳುವಂತೆ ಇದೆ. ಈ ಮೂರೂ ಅವಶೇಷಗಳು ಒಂದು ವ್ಯವಸ್ಥೆಗೆ ಸೇರಿದ್ದೊ ಅಥವಾ ಬೇರೆ ಬೇರೆ ವ್ಯವಸ್ಥೆಗಳು ನೆಲೆಗೊಂಡ ಏಕ ಪ್ರದೇಶವಾಗಿತ್ತೋ, ನಿರ್ದಿಷ್ಟವಾಗಿ ಏನೂ ಹೇಳಲಾಗದು.

ಈ ಕುರಿತು ಸಂಬಂಧಪಟ್ಟ ಇಲಾಖೆಯಲ್ಲಿ ಕೆಲಸ ಮಾಡುವವರನ್ನು ವಿಚಾರಿಸಬಹುದು. ಅವರ ಪ್ರಕಾರ ಭೋಜನಶಾಲೆಯೆಂದು ಸೂಚಿಸಿರುವ ನಾಲೆ ಕಮಲಾಪುರದ ಕೆರೆಯಿಂದ ನೀರು ಹರಿಯುವ ನಾಲೆಯಾಗಿತ್ತು. ಊಟದ ತಟ್ಟೆ ಕೆತ್ತಿರುವ ಕಪ್ಪು ಕಲ್ಲಿನ ಚಪ್ಪಡಿಗಳು ಆನೆಗೊಂದಿ ಮತ್ತು ಹಂಪಿಯ ಅರಮನೆ ಆವರಣದ ಸುತ್ತಲ ಇತರ ಸ್ಥಳಗಳಲ್ಲಿ ಕೂಡ ಕಂಡುಬರುತ್ತವೆ; ಗ್ರಾನೈಟ್ ಕಲ್ಲಿನಿಂದ ಕಟ್ಟಿದ ನಾಲೆ ಮೇಲಿರುವ ಊಟದ ತಟ್ಟೆಯ ಕಲ್ಲುಗಳು ಮೊದಲಿಗೆ ಅದೇ ಪ್ರದೇಶದಲ್ಲಿ ಇತರ ಕಡೆಗಳಲ್ಲಿದ್ದು, ಅವನ್ನು ತಂದು ಇಲ್ಲಿ ಸಣ್ಣ ಕಲ್ಲುಕೊಟ್ಟು ಜೋಡಿಸಲಾಗಿದೆ; ಸಾಮ್ರಾಜ್ಯದ ಕಾಲದಲ್ಲಿ ಗಣ್ಯ ಅತಿಥಿಗಳನ್ನು ಉಪಚರಿಸಲು ಭೋಜನಶಾಲೆ ಎಂಬ ಪ್ರತ್ಯೇಕ ಕಟ್ಟಡವೊಂದು ಅರಮನೆಯ ಆವರಣದೊಳಗೊ ಹೊರಗೊ ಇದ್ದಿರಬಹುದಾಗಿದ್ದು, ಅದು ಎಲ್ಲಿತ್ತೆಂಬ ಸುಳಿವು ಈಗ ಯಾರಿಗೂ ತಿಳಿಯದಾಗಿದೆ.

ಈ ವಿವರಗಳು ವಾಸ್ತವ ಸ್ಥಿತಿಗತಿಗಳಿಗೆ ಹತ್ತಿರವೆಂದು ತಿಳಿಯುವುದಾದಲ್ಲಿ, ಭೋಜನಶಾಲೆಗೂ ಊಟದ ತಟ್ಟೆ ಕೆತ್ತಿರುವ ಕಪ್ಪು ಕಲ್ಲಿನ ಚಪ್ಪಡಿಗಳಿಗೂ ಅವು ಇರುವ ಗ್ರಾನೈಟ್ ಕಲ್ಲಿನಿಂದ ಕಟ್ಟಿದ ನಾಲೆಗೂ ಪರಸ್ಪರ ಯಾವ ಸಂಬಂಧವೂ ಇಲ್ಲ ಎನ್ನುವ ಸಂಗತಿ ತಿಳಿದುಬರುತ್ತದೆ. ಅಲ್ಲದೆ ನಾಲೆಗೂ ಅರವಂಟಿಗೆ ಮಂಟಪಕ್ಕೂ, ಈಗ ಅವಶೇಷವಾಗಿರುವ ಮತ್ತು ನೀರು ವಿತರಣ ವ್ಯವಸ್ಥೆಯ ನಿಯಂತ್ರಕ ಕಟ್ಟಡವಿದ್ದಿರಬಹುದಾದ ಅದರ ಹತ್ತಿರದ ಕಟ್ಟಡಕ್ಕೂ ಪರಸ್ಪರ ಸಂಬಂಧವಿರುವ ಸಾಧ್ಯತೆಗಳು ಗೋಚರಿಸುತ್ತವೆ. ಹಾಗಿದ್ದಲ್ಲಿ ಕಲ್ಲಿನ ಊಟದ ತಟ್ಟೆಗಳ ಸಾಲಿಗೆ 'ಭೋಜನಶಾಲೆ' ಎಂದು ಹೆಸರು ಬಂದದ್ದಾದರೂ ಏಕೆ ? ಹೇಗೆ ?

ಕುತೂಹಲದ ಅಂಶವೆಂದರೆ, ಅಲ್ಲಿಂದ ಸುಮಾರು ನೂರು ಇನ್ನೂರು ಅಡಿ ಮುಂದೆ ರಸ್ತೆಯಲ್ಲಿ ಹೋದರೆ ಮಾವಿನ ಮರಗಳಿಂದ ಆವೃತವಾದ ಪ್ರವೇಶ

# ಮಂದಿರ ಕಟ್ಟುತ್ತಿರುವೆನು ನಾನು



ಕಟ್ಟುತ್ತಿರುವೆನು ಮಂದಿರವನ್ನು
ಎದೆಯ ಗೂಡಿನಲ್ಲಿ
ರಾಮ ರಹೀಮ ಕ್ರಿಸ್ತ ಅಲ್ಲಮ
ಎಲ್ಲರಿರುವರಲ್ಲಿ

ಆಂಜನೇಯನಿಗೂ ಏಸುಕ್ರಿಸ್ತನಿಗೂ
ಬಹಳ ನ್ಯಾಸ್ತವಿಲ್ಲಿ

ಬುದ್ಧ ನಾನಕ ಮಹಾವೀರರು
ಇವರ ಸ್ನೇಹದಲ್ಲಿ

ರಾಮ ಪವಡಿಸಿಹ ಮಸೀದಿಯಲ್ಲಿ
ಕ್ರಿಸ್ತನಾ ಕೋಣೆಯಲ್ಲಿ
ಇದಕೆ ಹೆಸರುಗಳು ಇಗರ್ಜಿ ಬಸದಿ
ನೂರು ಭಾಷೆಯಲ್ಲಿ

ಇಲ್ಲಿಯ ರಾಮ ನುಡಿವನು ಉರ್ದು
ಅಲ್ಲಾ ಸಂಸ್ಕೃತ ಬಲ್ಲ
ಕ್ರಿಸ್ತನಿಗೋ ತೆಲುಗೆಂದರೆ ಪ್ರೀತಿ
ಕನ್ನಡವಿಲ್ಲದೆ ಇಲ್ಲ

ಎಲ್ಲಾ ದೇವರು ಕ್ರಿಕೆಟಾಡುವರು
ಸೋಲು ಗೆಲುವು ಕ್ಷಣಿಕ
ಕಡೆಗೆ ಮಬ್ಬಲಿ ಒಂದೆ ಕ್ಲಬ್ಬಲಿ
ತೋರ್ಪರೆಲ್ಲ ಪುಳಕ

ಅವನು ಹೇಳುವನು ಕಿರೀಟ ಭಾರ
ಇವನು ಹೇಳುವನು ಟೋಪಿಯು ಭಾರ
ಎಲ್ಲರು ಹಾರೈಸಿಹರು ಕ್ರಿಸ್ತಗೆ
ಶಿಲುಬೆಯಿಂದ ಪರಿಹಾರ

ಜುಟ್ಟುಗಳಿದ್ದರೆ ಜುಟ್ಟೆಳೆದಾಟ
ಗಡ್ಡಗಳಿದ್ದರೆ ಮುಂಭಾರ
ದೇಹದ ಭಾರ ಶಿವದಾರ
ಇವುಗಳ್ಯಾವ ಕರ್ಮ !

ಎಲ್ಲ ಚಾನೆಲಲಿ ಮತ ಮೌಢ್ಯಗಳು
ವಿಜ್ಞಾನಕೆ ಇದು ಥರವೇ
ಕಡೆಗೆ ನಮ್ಮನೂ ಎಳೆದು ತರುವಿರಿ
ಇದು ನಿಮಗೆ ಭೂಷಣವೇ

ಎದೆಯ ಗೂಡಿನಲಿ ರಾಮ ಆಳುವನು
ಪರಿವಾರದ ಜೊತೆಗೂಡಿ
ತಾಯಿಯ ಗರ್ಭವ ದಾಟಿದ ತಪ್ಪಿಗೆ
ಪ್ರಾಣಿಪಕ್ಷಿಗಳ ಕೂಡಿ

**ಡಾ|| ಕಾ. ವೆಂ. ಶ್ರೀನಿವಾಸಮೂರ್ತಿ**
ಸಂಖ್ಯೆ : ೯೬೫, 'ಅಕ್ಷರ', ೧ನೇ ಮುಖ್ಯರಸ್ತೆ, ಚಿನ್ನಣ್ಣ ಬಡಾವಣೆ
ಕಾವಲ್ ಭೈರಸಂದ್ರ, ಬೆಂಗಳೂರು - ೫೬೦ ೦೩೨

ದ್ವಾರವೊಂದು ಕಣ್ಣಿಗೆ ಬೀಳುತ್ತದೆ. ಈ ಕಲ್ಲಿನ ಕಟ್ಟಡ ಸಾಮ್ರಾಜ್ಯವೊಂದರ ಯಾವುದೇ ಸಾಮಾನ್ಯ ಪ್ರದೇಶ ದ್ವಾರದಂತೆ ಇದ್ದಿರಬಹುದಾದರೂ ಇಂದಿಗೆ ದೊಡ್ಡದಾಗಿಯೆ ಕಾಣುತ್ತದೆ. ಅರಮನೆ ಆವರಣದ ಕೋಟೆ ಗೋಡೆಯ ಎದುರಿಗೆ ಇಂಥ ಪ್ರವೇಶ ದ್ವಾರದ ನಿರ್ಮಾಣ ಯಾವ ಉದ್ದೇಶಕ್ಕಾಗಿ ನಡೆದಿದೆ ಎಂಬುದು ಕೌತುಕವೂ ನಿಗೂಢವೂ ಆಗಿ ಕಾಣುತ್ತದೆ. ಇಲ್ಲಿಂದ ಎಲ್ಲಿಗೆ ದಾರಿಯಿತ್ತೊ ತಿಳಿಯದು. ಈಗಂತೂ ಈ ಜಾಗ ದೊಡ್ಡ ಮಾವಿನ ಮರಗಳಿಂದ ಆವೃತವಾಗಿದ್ದು, ಹೂವಿನ ದ್ವಾರವೆಂದು ಕರೆಯುತ್ತಾರೆ. ಆ ದ್ವಾರದ ಕಾವಲು ಮನೆಗಂಟಿಕೊಂಡಂತೆ ಇರುವ ದೇವರಗೂಡಿನಲ್ಲಿ ಅಂದಾಜು ಒಂದಡಿ ಅಗಲ ಮತ್ತು ಎರಡೂವರೆ ಅಡಿ ಎತ್ತರದ ಕಲ್ಲೊಂದಿದ್ದು, ಅರಿಷಿಣ ಕುಂಕುಮಗಳಿಂದ ಸಾರಿಸಿದಂತೆ ಅದರ ಮೇಲೆ ಕೇಸರಿ ಮತ್ತು ಹಳದಿ ಬಣ್ಣಗಳು ತುಂಬಿಹೋಗಿದೆ. ಅದರ ಆಕಾರ ಏನೂ ಸರಿಯಾಗಿ ಕಾಣದಂತಿದೆ. ಈ ಕುರಿತು ಸ್ಥಳೀಯರನ್ನು ಕೇಳಿದಲ್ಲಿ ಅವರಿದನ್ನು ಹೂವಿನವ್ವ ಎಂದೆನ್ನುತ್ತಾರೆ. ಈ ದೈವದ ಮೂಲ ಹೆಸರು ಏನೆಂದು ಕೇಳಿದರೆ ಗೊತ್ತಿಲ್ಲವೆನ್ನುತ್ತಾರೆ. ಗೆಳೆಯರಿಂದ ತಿಳಿದುಬಂದ ವಿಷಯವೆಂದರೆ, ಈ ಜಾಗ ಈಗಲೂ ಹೂಗಾರರಿಗೆ ಸೇರಿದುದಾಗಿದೆ.

ಈ ಎಲ್ಲ ಗೊಂದಲ, ಅಸ್ಪಷ್ಟತೆ ಮತ್ತು ನಿರ್ದಿಷ್ಟ ಸಂಬಂಧಗಳಿಲ್ಲದ ಮಾಹಿತಿಗಳ ನಡುವೆ ನಾನೊಮ್ಮೆ ಹಂಪಿ ಕನ್ನಡ ವಿಶ್ವವಿದ್ಯಾಲಯ ಪ್ರಕಟಿಸಿದ ಸದಾನಂದ ಕನವಳ್ಳಿ ಅನುವಾದಿತ ರಾಬರ್ಟ್ ಸಿವೆಲ್‌ನ 'ಮರೆತುಹೋದ ಮಹಾಸಾಮ್ರಾಜ್ಯ ವಿಜಯನಗರ' (೨೦೧೦ ಆವೃತ್ತಿ) ಓದುತ್ತಿದ್ದೆ. ಬಹುಶಃ ಕ್ರಿ.ಶ. ೧೫೨೦-೨೧ರಲ್ಲಿ ಬರೆದುದೆಂದು ಹೇಳಲಾದ ಡೊಮಿಂಗೊ ಪಯಸ್‌ನ ಕಥನದಲ್ಲಿರುವ ಕೆಲವು ವಿವರಗಳನ್ನು (ಪುಟ ೨೬೨) ಓದಿ ಅಚ್ಚರಿಪಟ್ಟೆ. ಅವು ಹೀಗಿವೆ :

ರಾಜ ತನ್ನ ಅರಮನೆಯ ಹತ್ತಿರವೇ ತೆಂಗಿನ ತೋಪು ಮತ್ತು ಇತರ ಸಂಪದ್ಭರಿತ ಹಣ್ಣಿನ ಗಿಡಗಳನ್ನು ಹೊಂದಿದ್ದಾನೆ. ಮೂರರ ವಾಸಸ್ಥಾನದ ಕೆಳಗಡೆ ಒಂದು ಚಿಕ್ಕ ನದಿಯಿದೆ. ಅದರ ಈ ಬದಿಗೆ ಅನೇಕ ಹಣ್ಣಿನ ತೋಟಗಳು ಮತ್ತು ಅನೇಕ ಹಣ್ಣಿನ ಗಿಡಗಳುಳ್ಳ ತೋಟಗಳು ಇವೆ. ಅವುಗಳಲ್ಲಿ ಬಹುಮಟ್ಟಿಗೆ ಇರುವುದು ಮಾವು, ಅಡಿಕೆ, ಹಲಸು ಮತ್ತು ಅನೇಕ ನಿಂಬೆ, ಕಿತ್ತಲೆ ಗಿಡಗಳು. ಅವುಗಳೋ, ಒಂದಕ್ಕೊಂದು ಎಷ್ಟು ಗುತ್ತಾಗಿ ಬೆಳೆದಿವೆಯೆಂದರೆ ಅದು ದಟ್ಟ ಅರಣ್ಯದಂತೆ ತೋರುತ್ತದೆ. ಮತ್ತು ಅಲ್ಲಿ ಬಿಳಿ ದ್ರಾಕ್ಷಿಗಳೂ ಉಂಟು. ನಗರದಲ್ಲಿರುವ ನೀರೆಲ್ಲ ಪ್ರಥಮ ಸುತ್ತಿನ ಗೋಡೆಯ ಹೊರಗೆ ಇರುವ ನಾನು ಹೇಳಿದ ಎರಡು ಕೆರೆಗಳಿಂದ ಬರುತ್ತದೆ.

ಇದರಿಂದ ಕೃಷ್ಣದೇವರಾಯನ ಕಾಲದಲ್ಲಿ ಅರಮನೆಯ ಅಗತ್ಯಗಳಿಗಾಗಿ ಅರಮನೆಗೆ ಹೊಂದಿಕೊಂಡಂತೆ ಮತ್ತು ಚಿಕ್ಕ ನದಿಯ ನಡುವೆ ದೊಡ್ಡದೊಂದು ಹಣ್ಣಿನ ತೋಟವೊಂದಿತ್ತು, ಚಿಕ್ಕ ನದಿಯ ಕೆಳಗೆ ಮೂರರ ವಾಸಸ್ಥಾನವಿತ್ತು ಎಂಬ ವಿಷಯಗಳು ತಿಳಿದುಬರುತ್ತವೆ. ಇದರ ಬಗ್ಗೆ ಕುತೂಹಲ ಹುಟ್ಟಿ ಈ ಪ್ರದೇಶ ಎಲ್ಲಿ ಬರಬಹುದೆಂದು ಹುಡುಕಲು ಪ್ರಯತ್ನಪಟ್ಟೆ. ಕಮಲಾಪುರ-ಹಂಪಿ ರಸ್ತೆಯಲ್ಲಿ ಮೊದಲಿಗೆ ಸಿಗುವ ಕೋಟೆ ಆಂಜನೇಯ ಗುಡಿ ಎಡಗಡೆಗೆ ಗದ್ದೆಗಳಿಗೆ ಹೋಗುವ ರಸ್ತೆಯಿದೆ. ಅದರ ಬೆನ್ನುಹತ್ತಿ ಹೋದಾಗ ಸುಮಾರು ಒಂದು ಕಿ.ಮೀ. ನಂತರ ರಸ್ತೆ ಬಲಗಡೆಗೆ ತಿರುಗುತ್ತದೆ. ಆನಂತರ ಸುಮಾರು ಒಂದೂವರೆ ಕಿ.ಮೀ. ಕ್ರಮಿಸಿದ ನಂತರ ಮತ್ತೆ ಬಲಗಡೆಗೆ ತಿರುವು ಪಡೆದು ಸ್ವಲ್ಪ ಮುಂದೆ ಹೋಗಿ, ಎಡಕ್ಕೆ ತಿರುಗಿ ನಡೆದು, ಬಲಕ್ಕೆ ಮುಂದುವರಿದರೆ ಹಳ್ಳವೊಂದು ಸಿಗುತ್ತದೆ. ಅದನ್ನು ದಾಟಿ ಕಾಲುಹಾದಿಯಲ್ಲಿ ಸುಮಾರು ದೂರ ಸಾಗಿದರೆ ಅದು ಅಕ್ಕ-ತಂಗಿ ಗುಂಡುಕಲ್ಲಿನಿಂದ ಕಡ್ಡಿರಾಂಪುರಕ್ಕೆ ಹೋಗುವ ರಸ್ತೆಗೆ ತಲುಪುತ್ತದೆ. ನಾನು ಕ್ರಮಿಸಿದ ಹಾದಿಯನ್ನು ಗಮನಿಸಿದಾಗ ಆಂಜನೇಯ ಗುಡಿಯಿಂದ ಹಳ್ಳದವರೆಗೆ ಕೋಟೆ ಮೇಲಿನ ಹಾದಿಯಾಗಿದೆ. ಉದ್ದಕ್ಕೂ ಕೋಟೆ ಕಲ್ಲುಗಳನ್ನು ಕಾಣಬಹುದು. ಕಮಲಾಪುರ - ಹಂಪಿ ಟಾರು ರಸ್ತೆಯ ಎಡಗಡೆಯಲ್ಲಿ ಉದ್ದಕ್ಕೂ ಕೋಟೆ ಗೋಡೆಯೊಂದು ಸಾಗುವುದನ್ನು ಗಮನಿಸಬಹುದು. ಆಂಜನೇಯ ಗುಡಿಯಿಂದ ಗದ್ದೆ, ರಸ್ತೆ, ಹಳ್ಳ,




ಕಡ್ಡಿರಾಂಪುರ ರಸ್ತೆ ಮೂಲಕ ಅಕ್ಕ ತಂಗಿ ಗುಂಡುಕಲ್ಲು ಮತ್ತು ಅಲ್ಲಿಂದ ಆಂಜನೇಯ ಗುಡಿಗೆ ಸುಮಾರು ೭-೮ ಕಿ.ಮೀ. ವ್ಯಾಪ್ತಿಯ ಪ್ರದೇಶ ಡೊಮಿಂಗೊ ಪಯಸ್ ಸೂಚಿಸಿರುವ ಅರಮನೆ ಹಣ್ಣಿನ ತೋಟವೆಂದು ಕಾಣುತ್ತದೆ. ಹಳ್ಳವೇ ಆತ ಸೂಚಿಸುವ ಚಿಕ್ಕ ನದಿ ಇರಬಹುದು. ಯೂರೋಪಿಯನ್ ಸಮಾಜದಲ್ಲಿ ಕರಿಯ ಗುಲಾಮರಾಗಿದ್ದ ಮೂರರು ಎಂದರ್ಥದಲ್ಲಿ ಇಂಡಿಯಾದ ಸಾಮಾಜಿಕ ಶ್ರೇಣೀಕರಣದಲ್ಲಿ ಅಂದು ಊರ ಹೊರಗೆ ವಾಸಿಸುತ್ತಿದ್ದ ಪಂಚಮರು, ಅಂದರೆ ಇಂದಿನ ಅಸ್ಪೃಶ್ಯರನ್ನು ಪಯಸ್ ಸೂಚಿಸಿದ್ದಾನೆಂದು ತೋರುತ್ತದೆ.

ಇಂದು ಹೂವಿನ ದ್ವಾರವೆಂದು ಕರೆಯುವ ಅರಮನೆಯ ಕೋಟೆ ಗೋಡೆಗೆ ಎದುರಿರುವ ಪ್ರವೇಶ ದ್ವಾರ ಬಹುಶಃ ಅಂದಿನ ಹಣ್ಣಿನ ತೋಟಕ್ಕೆ ಅರಮನೆಯ ಮಂದಿ ಹೋಗಿ ಬರುವ ಬಾಗಿಲಾಗಿರಬಹುದು. ಈ ದ್ವಾರ ಮತ್ತು ಅರವಂಟಿಗೆ ಹಿಂಭಾಗದಲ್ಲಿರುವ ಅರಮನೆಯಿಂದ ತೋಟದ ಕಡೆಗೆ ಹೊರಬರುವ ಸಣ್ಣ ಬಾಗಿಲು ಪರಸ್ಪರ ಸಂಬಂಧವಿರುವ ಮಾರ್ಗಗಳಾಗಿರಬಹುದು. ಈ ಎಲ್ಲ ಸಾಧ್ಯತೆಗಳನ್ನು ಒಪ್ಪಬಹುದಾದಲ್ಲಿ 'ಭೋಜನಶಾಲೆ' ಗೊಂದಲ ಮತ್ತು ಅಸ್ಪಷ್ಟತೆ ಕಡೆಗೆ ಹೊರಳಬಹುದು.

ಇಲಾಖೆಯ ಸಿಬ್ಬಂದಿ ಸಾಮಾನ್ಯವಾಗಿ ಭಾವಿಸುವಂತೆ ಭೋಜನಶಾಲೆ ಅರಮನೆ ಆವರಣದಲ್ಲಿ ಇದ್ದಿತೊ ಇಲ್ಲವೊ ಯಾವುದನ್ನೂ ಸಾಧಿಸಲು ಆಧಾರಗಳಿಲ್ಲ. ಆದರೆ ಗ್ರಾನೈಟ್ ಕಲ್ಲಿನ ನಾಲೆ, ಅರವಂಟಿಗೆ ಮತ್ತು ನೀರು ವ್ಯವಸ್ಥೆ ನಿಯಂತ್ರಕ ಕಟ್ಟಡ – ಇವೆಲ್ಲ ಕಮಲಾಪುರದಿಂದ ಹರಿಯುತ್ತಿದ್ದ ನೀರಿನ ನಾಲೆಗೆ ಸಂಬಂಧಿಸಿದ್ದಿರಬಹುದೆ ಹೊರತು ಗ್ರಾನೈಟ್ ಕಲ್ಲಿನ ನಾಲೆ ಮೇಲೆ ಜೋಡಿಸಿಟ್ಟಿರುವ ತಟ್ಟೆಗಳನ್ನು ಕೆತ್ತಿದ ಚಪ್ಪಡಿ ಕಲ್ಲುಗಳಿಗಲ್ಲ ಎಂಬುದು ಸ್ಪಷ್ಟ. ಹಾಗಿದ್ದರೆ ಏನಿದು ಈ ಭೋಜನಶಾಲೆ ?

ಇಲಾಖೆಯ ಸಿಬ್ಬಂದಿ ಸಾಮಾನ್ಯವಾಗಿ ಸೂಚಿಸುವಂತೆ, ಊಟದ ತಟ್ಟೆಯ ಕಲ್ಲುಗಳು ಹಂಪಿಯ ಆ ಪ್ರದೇಶದ ವಿವಿಧೆಡೆಗಳಲ್ಲಿ ಮತ್ತು ಆನೆಗೊಂದಿಯಲ್ಲಿ ಇರಬಹುದು. ಅವು ದೊರೆತ ಅಂಥ ಇನ್ನೊಂದು ಜಾಗ ಅರಮನೆಯ ಹಣ್ಣಿನ ತೋಟವೂ ಆಗಿದ್ದಿರಬಹುದು. ಡೊಮಿಂಗೊ ಪಯಸ್ ಹೇಳಿರುವ ಭಾರತೀಯ ಮೂರರು ತಮ್ಮ ಕೂಲಿ ಕೆಲಸಗಳಿಗಾಗಿ ಹೊರಹೋದ ಕೆಲವು ಅನಿವಾರ್ಯ ಸಂದರ್ಭಗಳಲ್ಲಿ ಸಮತಟ್ಟಾದ ಕಲ್ಲನ್ನು ತೊಳೆದು ಅದರ ಮೇಲೆ ಊಟ ಮಾಡುವುದನ್ನು ಇಂದಿಗೂ ಅಪರೂಪಕ್ಕಾದರೂ ಉಳಿಸಿಕೊಂಡಿರುವುದು ಸುಳ್ಳಲ್ಲ. ಬಾಳೆ ಎಲೆಗಳನ್ನು ಸಮಾಜದ ಮೇಲುವರ್ಗಗಳು ಊಟಕ್ಕೆ ಬಳಸುತ್ತಿರುವುದು ಉನ್ನತ ಸಂಸ್ಕೃತಿಯ ಹೆಮ್ಮೆಯ ಭಾಗವಾಗಿರುವ ಹಾಗೆಯೆ ಶೋಷಿತ ಸಮುದಾಯಗಳು ತಾರತಮ್ಯ ನೀತಿಗೆ ಒಳಗಾಗಿ ಬಾಳೆ ಎಲೆಗೂ ಎರವಾಗಿ ಬರಿಯ ಕಲ್ಲಿನ ಮೇಲೆ ಊಟ ಮಾಡುವಂಥ ಹೀನಸ್ಥಿತಿ ತಲುಪಿದ್ದಕ್ಕೆ ಭಾರತೀಯ ಸಾಮಾಜಿಕ ಶ್ರೇಣೀಕೃತ ವ್ಯವಸ್ಥೆಯೇ ಕಾರಣ ಎಂದು ಸೂಚಿಸುವಲ್ಲಿ ಯಾವುದೇ ವಿಶೇಷತೆ ಇಲ್ಲ. ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ಪಂಚಮರಾಗಿ ಊರ ಹೊರಗಿದ್ದ ಅಸ್ಪೃಶ್ಯರನ್ನು ಅರಮನೆ ವ್ಯವಸ್ಥೆ ತನ್ನ ಹಣ್ಣಿನ ತೋಟದಲ್ಲಿ ಕೆಲಸ ಮಾಡಲು ಅವಕಾಶ ಕಲ್ಪಿಸಿದ್ದಿರಬೇಕು. ಅದನ್ನು ಪಯಸ್ ಚಿಕ್ಕ ನದಿಯ ಆಚೆಗೆ ವಾಸಿಸುತ್ತಿದ್ದ ಮೂರರು ಎಂದು ಹೇಳುವ ಮೂಲಕ ಸೂಚನೆ ನೀಡಿದ್ದಾನೆ. ಕಲ್ಲಿನ ಮೇಲೆ ಊಟ ಬಡಿಸುವ ಅಂದಿನ ಅರಮನೆ ವ್ಯವಸ್ಥೆ ಅವರಿಗೆ ಕಲ್ಲು ತಟ್ಟೆಗಳನ್ನು ಕೆತ್ತನೆ ಮಾಡಿಸಿದ್ದಿರಬೇಕು. ಶೋಷಣೆಯ ವ್ಯವಸ್ಥೆಯಲ್ಲೂ ಕಲೆಯ ಚಿತ್ತಾರ ಮೂಡಿಸಲು ಪ್ರಯತ್ನ ನಡೆದಿದ್ದಿರಬೇಕು. ಅದರ ಫಲವಾಗಿ ಊಟದ ತಟ್ಟೆಯ ಕಪ್ಪು ಕಲ್ಲಿನ ಚಪ್ಪಡಿಗಳು ನಮಗಿಂದು ದೊರಕುತ್ತಿರಬಹುದು.

ಹಂಪಿಯ ವಿವಿಧ ಕಡೆಗಳಲ್ಲಿದ್ದ ಇಂಥ ಊಟದ ಕಲ್ಲಿನ ಚಪ್ಪಡಿಗಳನ್ನು ಆಂಧ್ರ ಮೂಲದ ಸಂರಕ್ಷಣಾಧಿಕಾರಿಯೊಬ್ಬರು ಗ್ರಾನೈಟ್ ಕಲ್ಲಿನ ಕಟ್ಟಡದ ನಾಲೆಯ ಮೇಲೆ ಜೋಡಿಸಿಟ್ಟು ಸಂರಕ್ಷಿಸಿರಬಹುದು. ಅದರ ವಿಶೇಷತೆಯ ಕಡೆಗೆ ಜನರ ಗಮನ ಸೆಳೆಯಲು ಮತ್ತು ಈ ಮೂಲಕ ವಿಜಯನಗರದ ಕಲಾ ವೈಭವವನ್ನು ಮೆರೆಸಲು ನಾಲೆಯನ್ನು ಒಂದು ವೇದಿಕೆಯನ್ನಾಗಿ ರೂಪಿಸಿಕೊಂಡಿರಬಹುದು. ಅಲ್ಲದೆ ತಮ್ಮದೇ ಭಾಷಾ ಶೈಲಿಯಲ್ಲಿ ಆ ಸ್ಮಾರಕಗಳನ್ನು 'ಭೋಜನಶಾಲಾ' ಎಂದು ಕರೆದಿರಬಹುದು. ನೇರವಾಗಿಯೋ ಪರೋಕ್ಷವಾಗಿಯೋ ಇದು ಭಾರತೀಯ ಸಾಮಾಜಿಕ ಶ್ರೇಣಿ ವ್ಯವಸ್ಥೆಯ ನಕಾರಾತ್ಮಕ ಅಂಶಗಳನ್ನು ಸಕಾರಾತ್ಮಕವಾಗಿ ಬಿಂಬಿಸುವ ಕಾರ್ಯವಾಗಿದೆ. ಇದನ್ನು ಯಶಸ್ವಿಯಾಗಿ ನಿರ್ವಹಿಸಿದ ಪ್ರತೀಕವಾಗಿ 'ಭೋಜನಶಾಲೆ'ಯ ಅವಶೇಷ/ಸ್ಮಾರಕ ಇಂದಿಗೂ ಉಳಿದು ಬಂದಿದೆ.

**ಡಾ|| ಶ್ರೀಧರ ಪಿಸ್ಸೆ**
ನಂ. ೨ ಎಫ್/೨೩-ಎ, ೭ನೇ ವಾರ್ಡ್
ಹಂಪಿ ಪವರ್ ಹೌಸ್, ಕಮಲಾಪುರ - ೫೮೩ ೨೧೫



# ಹಂದಿಸ್ವಾಮಿ

**ಸಂಪತ್ ಬೆಟ್ಟಗೆರೆ**

''ಹಂದಿಸ್ವಾಮಿಯಿಂದ ಬರಕತ್ತಿಲ್ಲ, ಸೂಳೆಮಗ ಮನೆ ಒಳಗೆ ಹಂದಿ ಹೂಳಿಕೊಂಡಿದ್ದಾನಂತೆ ! ಅವನಿಗೆ ಊರಲ್ಲಿ ಹೇಳೋರು ಕೇಳೋರು ಯಾರು ಇಲ್ಲ ಅಂತ ತೋರ್ತದೆ. ಇವತ್ತು ಬಿಡಬಾರ್ದು. ಎರಡು ತಟ್ಟಿಯಾದ್ರೂ ಸರಿ, ಹಂದಿಯ ಹೆಣವನ್ನು ಹೊರಗೆ ಎಳಸಿ ಸುಟ್ಟು ಹಾಕ್ಬೇಕು... ಏನಂತೀಯಾ ಪಾಲೇಗೌಡ ನಾನು ಹೇಳೋದು ಸರಿ ಐತೋ ಹೆಂಗೆ ?'' ಎಂದು ನನ್ನೂರಿನ ಅರಳಿಮರದ ಬುಡದಡಿ ನಿಂತ ದೈತ್ಯ ಮನುಷ್ಯನ ಧ್ವನಿ ಗುಡುಗಿತು. ಪ್ರತಿಯಾಗಿ ಹೆಂಡದಂಗಡಿಯ ಧಡಿಯ ಪಾಲೇಗೌಡ ತಲೆದೂಗಿ ಸಮ್ಮತಿ ವ್ಯಕ್ತಪಡಿಸಿದನು. ಅದು - ಇದು, ಆ ಸುದ್ದಿ - ಈ ಸುದ್ದಿ ಅಂತ ಮಾತಿಗೆ ಮಾತು ಕೂಡಿರಲು ನನ್ನೂರಿನ ನರಪಿಳ್ಳೆಗಳೆಲ್ಲಾ ಅರಳಿಮರದಡಿ ನೆರೆಯಲಾರಂಭಿಸಿದವು. ಇವತ್ತು ಹಂದಿಸ್ವಾಮಿಗೆ ಏನೋ ಗ್ರಹಚಾರ ಕಾದಿದೆ ಎಂಬುದಕ್ಕೆ ಸಾಕ್ಷಿಯಾಗಿ ಕರಿ ಕಾಗೆಗಳು ಕಾ.ಕ್ರಾ. ಎಂದು 'ಸಾವು ಕರೆಯುವ' ಶಕುನ ನುಡಿದವು.

ಮೂಲತಃ ತಮಿಳುನಾಡಿನವನಾದ ಸ್ವಾಮಿನಾಥನ್ ತನ್ನೂರಿನಲ್ಲಿ ಕೆಲಸವಿಲ್ಲದೆ ಬಸವಳಿದು ರಸ್ತೆ ರಿಪೇರಿ ಚಾಕರಿಯವರ ಜೊತೆಗೂಡಿ ಕರ್ನಾಟಕಕ್ಕೆ ಇಳಿದನು. ಬಿಸಿಲಿಗೆ ಬೆಂದು ಮತ್ತೂ ಕರಕಲು ಕರಿಯಾಗಿದ್ದ ಹೆಂಡತಿ, ಎರಡು ಹೆಣ್ಣುಮಕ್ಕಳೊಂದಿಗೆ ಕಲ್ಲು ಒಡೆಯುವ ಗೈಮೆ ಮಾಡುತ್ತಿದ್ದ ಸ್ವಾಮಿ ರಸ್ತೆ ಕೆಲಸ ಮುಗಿದ ಮೇಲೆ ಇಲ್ಲೆ ಉಳಿದುಕೊಂಡಿದ್ದನು. ಕಾಫಿ ತೋಟಕ್ಕೆ ಕೂಲಿಯಾಳುಗಳ ಬರ. ''ಹಿಂಗೆ ಆದ್ರೆ ಮುಂದೆ ಕೆಲಸ ಮಾಡ್ದಂಗೆ ಮಾರಾಯ!'' ಎಂದು ಗೊಣಗುತ್ತಿದ್ದ ಪ್ಲಾಂಟರುಗಳ ಪಾಲಿಗೆ ಜೀತಯ್ಯನಾದನು. ''ಏನು ಸ್ವಾಮಿ, ಕಾಫಿ ತೋಟದ ಕೆಲಸ ಬರ್ರೊದೊ ಹೆಂಗೆ,'' ಅಂತ ಸಾಹುಕಾರರೊಬ್ಬರು ಕೇಳಿದ್ದಕ್ಕೆ ''ಪಾಲೇಗೌಡ್ರನ್ನೇ ಕೇಳಿ. ಅವರ ಮನೆ ರೊಬಸ್ಟಾ ಗಿಡದ ಕಸಿ ಹೆಂಗೆ ತೆಗೆದಿದ್ದೀನಿ ಅಂತ ಹೋಗಿ ನೋಡಿ'', ಎನ್ನುವಷ್ಟು ಆತ್ಮವಿಶ್ವಾಸಿಗನಾದ ಸ್ವಾಮಿನಾಥನ್.

ಒಂದು ದಿನ ಬೇಲೂರು ಚನ್ನಕೇಶವಸ್ವಾಮಿ ಜಾತ್ರೆಗೆ ಹೋಗಿದ್ದಾಗ ಯಾರೋ ಕಟುಕರು ಮಾರ್ಕೆಟ್‌ಗೆ ದೊಡ್ಡ ದೊಡ್ಡ ಹಂದಿಗಳನ್ನು ಲಾರಿಯಲ್ಲಿ ಹೇರಿಕೊಂಡು ಹೋಗುತ್ತಿದ್ದುದನ್ನು ಕಂಡು ಚಕಿತಗೊಂಡನು. ಮಡದಿ ಮಕ್ಕಳಿಗೆ, ''ನಾವೊಂದು ಹಂದಿ ಸಾಕಿದ್ರೆ ಹೆಂಗೆ'' ಎನ್ನಲು ಹೆಂಡತಿಗಿಂತಲೂ ಮೊದಲೇ ಹೆಣ್ಣು ಹೈಕಳು, ''ಗಂಜಿ ನೀರು ಕುಡುಕಂಡು ಇರ್ತದೆ. ಆಯ್ತು ಅಪ್ಪಯ್ಯ ಸಾಕುವ'' ಎಂದು ಸಮ್ಮತಿಸಲು ಪಕ್ಕದ ಹಗರೆ ಎಂಬೂರಲ್ಲಿ ಹಂದಿಮರಿಯೊಂದನ್ನು ಖರೀದಿಸಿ ಮನೆಗೆ ತಂದನು.

ಆರಡಿ-ಮೂರಡಿಯಷ್ಟು ತಳಪಾಯದ ಭೂಮಿಯಲ್ಲಿ ಒಂದೇ ಕೋಣೆಯ ಗುಡಿಸಲು ಕಟ್ಟಿ ವಾಸಿಸುತ್ತಿದ್ದ ಸ್ವಾಮಿಗೆ ಹಂದಿಮರಿಗಾಗಿ ಪ್ರತ್ಯೇಕ ಗೂಡು ಮಾಡುವಷ್ಟು ಆದಾಯವಾಗಲೀ, ಜಾಗವಾಗಲೀ ಇರಲಿಲ್ಲ. ತಾವು ಮಲಗುವ ಒಂದು ಮೂಲೆಯ ಬದಿಯಲ್ಲಿ ಗೋಣಿದಾಟನ್ನು ಹಾಕಿ ತನ್ನ ಮನೆಯ ಹೊಸ ಅತಿಥಿಗೆ ಹಾಸಿಗೆ ನಿರ್ಮಿಸಿದ್ದನು. ಹಗಲೆಲ್ಲಾ ಕೂಲಿಗೆ ಹೋಗುತ್ತಿದ್ದ ಸ್ವಾಮಿಯ ಕುಟುಂಬ ಇಳಿಹೊತ್ತಿನಲ್ಲಿ 'ಬಾ...ಬಾ...' ಎಂದು ಕರೆಯುತ್ತಿದ್ದಂತೆ ಯಾವುದೇ ಮೂಲೆಯಲ್ಲಿರಲಿ ''ಇ... ಈ...ಯೀ...ಗುರುಕ್... ಗುರುಕ್...'' ಎಂದು ಮೂತಿ ಸೊಣೆಯುತ್ತ ಬಂದು ತನ್ನ ಮೋಟು ಬಾಲವನ್ನು ಅಲ್ಲಾಡಿಸುತ್ತಿದ್ದ ಹಂದಿಮರಿ ಸ್ವಾಮಿಯ ಬದುಕಿನಲ್ಲಿ ಪ್ರೀತಿಯ ಹೊಸ ಭರವಸೆಯಾಗಿ ತೋರುತ್ತಿತ್ತು.

ಒಂದು ದಿನ ಸ್ವಾಮಿಯ ಹೆಂಡತಿ ನಾಗಿ, ''ಕುಳ್ಳಿ... ಕುಳ್ಳಿ... ಬಾ ಬಾ'' ಎಂದು ಕೂಗಲು ಮುನಿಸಿಕೊಂಡಂತೆ ಕಂಡುಬಂದ ಹಂದಿಯೂ ಏನೂ ತಿನ್ನದೇ 'ಗಟ್ರ್ ಗಟ್ರೂ' ಅಂತ ಮಲಗಿದ್ದುದು ಮೇಲೇಳದೆ ಇದ್ದುದನ್ನು ಕಂಡು ಸ್ವಾಮಿ ಆತಂಕಗೊಂಡನು. ಕೊನೆಗೂ ದಿಕ್ಕು ತೋಚದೆ, ಮರದವ್ವ ಮೂರು ವರ್ಷ ಬಿಟ್ಟು ನಿನಗೆ ಕುಯಿಸ್ತೀನಿ. ನನ್ನ ಪುಟ್ಟೀನ ಉಳಿಸಿ ಕೊಡವ್ವ ಎಂದು ಎಂಟಾಣೆ ಕಾಣಿಕೆಯನ್ನು ಗೌಡರ ತೋಟದ ಚೌಡಿಗೆ ತೆಗೆದಿಟ್ಟನು. ''ಪುಟ್ಟಿ, ಏಳು ಮಗಳೇ. ಹಟ ಮಾಡಬಾರ್ದು'' ಅಂತೇಳಿ ತಾನು ಕುಡಿದು ಅರ್ಧ ಉಳಿಸಿದ್ದ ಭಟ್ಟಿ ಸಾರಾಯಿಯನ್ನು ಪುಟ್ಟಿ ಬಾಯಿಗೆ ಸುರಿಯಲು ಪುಟ್ಟಿಗೆ ಏಕ್‌ದಂ

ಏನೋ ಕನಸು ಬಿದ್ದಂತಾಗಿ ಗರಕ್-ಗುರಕ್ ಎಂದು ನಗೆಮೊಗ ತೋರಿತು. ಅಂದಿನಿಂದ ಕುಳ್ಳಿಯ ಹೆಸರು 'ಪುಟ್ಟಿ' ಎಂದು ಮರು ನಾಮಕರಣವಾಯಿತು.

ಸ್ವಾಮಿ ಬಣಕಲ್ ಹೋಬಳಿ ಕೇಂದ್ರದಲ್ಲಿ ನಡೆಯುವ ವಾರದ-ಸೋಮವಾರ ಸಂತೆಗೆ ಹಸಿಮೀನು, ಬೆಲ್ಲ, ಕಾಳು-ಕಡ್ಡಿ, ತರಕಾರಿ, ಅಕ್ಕಿ ತರೋಣವೆಂದು ಪ್ಲಾಸ್ಟಿಕ್ ಕೈಚೀಲ ಹಿಡಿದು ಹೊರಟು ನಿಂತನು. ''ಪುಟ್ಟಿ, ಬರ್ತೀಯಾ ಸಂತಿಗೆ ಹೋಗಿಬರೋಣ'' ಎಂದಾಗ, ಪುಟ್ಟಿ ತನ್ನನ್ನು ಹಿಂಬಾಲಿಸಿದುದನ್ನು ಕಂಡು ಪುಳಕಿತನಾಗಿ ಮುಂದೆ ನಡೆದನು. ಸ್ವಾಮಿಯನ್ನೇ ಹಿಂಬಾಲಿಸುತ್ತಿದ್ದ ಹಂದಿಯನ್ನು ಕಂಡು ಜನರೆಲ್ಲರೂ, ''ಅದು ಯಾರ ಹಂದಿ? ಇಷ್ಟು ಚೆಂದ ಪಾಠವಾಗ್ಯೆತೆ? ಮನುಷ್ಯರಂದ್ರೆ ಕ್ಯಾರೇ ಅನ್ನಲ್ಲ!'' ಎಂದುಕೊಂಡರು. ಜೀತಕ್ಕೆ ಕರೆಯುವಾಗ ಮಾತ್ರ ಸಂತೆ, ಗುಡಿಸಲೆನ್ನದೆ ಅಂಡಲೆಯುತ್ತ ಮಗದೊಮ್ಮೆ ಕಂಡೂ ಕಾಣದಂತೆ ತಿರುಗುತ್ತಿದ್ದ ಸಾಹುಕಾರರಾದಿಯಾಗಿ ದೊಡ್ಡ ದೊಡ್ಡ ಮನುಷ್ಯರೆನಿಸಿಕೊಂಡವರು ಇಂದು ಸ್ವಾಮಿ ಕಡೆಗೆ ನೋಡಲಾರಂಭಿಸಿದರು. ''ಎಲಾ, ಇವ್ನ'', ಎಂದು ಮೂಗಿಗೆ ಬೆರಳಿಟ್ಟು ದಿಗ್ಭ್ರಾಂತರಾದರು. ಏನೇ ಆಗಲಿ, ಸ್ವಾಮಿನಾಥನ್ ಕಾಲಕ್ರಮೇಣ ಸ್ವಾಮಿಯಾಗಿ ಹಂದಿಯ ಪೋಷಕನಾದ ಮ್ಯಾಲೆ 'ಹಂದಿಸ್ವಾಮಿ' ಎಂದು ಊರಲ್ಲೆಲ್ಲಾ ಬಿರುದಾಂಕಿತನಾದನು.

ಭಟ್ಟಿಸಾರಾಯಿ, ಚಿಪರು, ಬ್ರಾಂಡಿ, ಅಪರೂಪಕ್ಕೊಮ್ಮೆ ರಮ್ಮು, ಬೀರು ಇತ್ಯಾದಿ ಮದ್ಯಸಾರಗಳನ್ನೆಲ್ಲ ಜೊತೆಗೆ ಸೇರಿ ಚಪ್ಪರಿಸಿ ಪಾರ್ಟಿಯಲ್ಲಿ ಕುಟುಂಬದವರಿಗೆ ಕಂಪನಿ ಕೊಡುತ್ತಿದ್ದ ಹಂದಿಪುಟ್ಟಿಯನ್ನು ''ಮರದವ್ವನಿಗೆ ಹೆಂಗೆ ಕುಯ್ಯಿಸೋದು ನಾಗಿ?'' ಎಂದು ಆತಂಕಗೊಂಡನು ಸ್ವಾಮಿ. ''ಬೇರೆ ಹಂದಿ ತಂದು ಬದಲಿ ಹರಕೆ ಕೊಟ್ರಾಯ್ತು ಬುಡಿ; ಈಗ ಅದೆಲ್ಲಾ ಮಾತೇಕೆ, ಬಿದ್ಕೊಳ್ಳಿ'' ಎಂದು ಕಂಬಳಿ ಹೊದ್ದು ತಡಿಕೆ ಕಡೆಗೆ ಒರಗಿದಳು ನಾಗಿ. ತನ್ನ ಹೆಣ್ಣುಮಕ್ಕಳಿಗಿಂತಲೂ ಒಂದು ಕೈ ಮೇಲೆ ಪುಟ್ಟಿಯನ್ನು ಪ್ರೀತಿಸುತ್ತಿದ್ದ ಸ್ವಾಮಿ ಹಂದಿಯ ಒಂದೂವರೆ ಕ್ವಿಂಟಾಲ್ ದೇಹವನ್ನು ತಬ್ಬಿ ಮಲಗಿ ಕಂಬಳಿ ಮುಸುಗು ಎಳೆದುಕೊಂಡನು.

ಸ್ವಾಮಿಗೆ ಮತ್ತೆ ನಿದ್ದೆ ಬರಲಿಲ್ಲ. ನೂರಾರು ಯೋಚನೆಗಳು ತಲೆ ಕೊರೆಯಲಾರಂಭಿಸಿದವು. ಕೈಗೆಟುಕುವ ಡಾಕ್ಟ್ರುಗಳಿಗೆಲ್ಲ ತೋರಿಸಿದರೂ ಹೊಟ್ಟೆಬ್ಯಾನೆ ವಾಸಿಯಾಗದ ಹೆಂಡತಿ. ಮೂರು-ಎರಡು ವರ್ಷದ ಹಿಂದೆ ದೊಡ್ಡವ ರಾದ ಹುಡುಗಿಯರಿಬ್ಬರು ತಿಂಗಳು ಬಂತೆಂದರೆ ಸಾಕು, ಹೊಟ್ಟೆನೋವೆಂದು ಹೊರಳಾಡುವುದು; ಅಯ್ಯೋ! ಎಂದು ಉಸಿರು ಬಿಗಿಹಿಡಿದು ತಮ್ಮವ್ವನ ಹರಿದ ಕಾಟನ್ ಸೀರೆ ಅಥವಾ ತನ್ನ ಲುಂಗಿ ತುಂಡನ್ನು ಬಿಗಿದು ಹೊಟ್ಟೆ ಸೇದಿಕೊಳ್ಳು ವುದನ್ನು ನೋಡಿ - ಕೇಳಿ ತನ್ನಿಂದ ಏನೂ ಮಾಡುವುದಕ್ಕೆ ಆಗ್ತಿಲ್ಲವಲ್ಲ ಎಂಬ ಚಿಂತೆಗಳೆಲ್ಲ ಒಟ್ಟಾಗಿ ಆವರಿಸಿದವು. ಹುಟ್ಟೂರಿನಲ್ಲಿ ಬಾಳಲಾಗದೆ ಅನಾಮಿಕ ಈ ಊರಲ್ಲಿ ಅನಾಥ ಪ್ರಜ್ಞೆಯಿಂದ ಕಾಲ ದೂಡುತ್ತಿರುವ ತನ್ನ ಕಷ್ಟಕ್ಕಾಗುವ ಬಂಧುಗಳು ಯಾರೆಂದು ಪಕ್ಕದಲ್ಲಿ ಕುಕ್ಕರಗಾಲಿನ ಭಂಗಿಯಲ್ಲಿ ಕಣ್ಮುಚ್ಚಿ ಸುಯ್ ಸುಯ್ ಅಂತ ನಿದ್ದೆ ಹೊಡೆಯುತ್ತಿದ್ದ ಹಂದಿ ಪುಟ್ಟಿಯ ಬೆನ್ನಿನ ಮ್ಯಾಲೆ ಕೈ ಇಟ್ಟನು. ಕಣ್ಣಂಚಿನಲ್ಲಿ ಪಳಕ್ಕನೆ ನಾಲ್ಕು ಹನಿ ಉದುರಿದವು.

...ಹೀಗೆ ಬೆಳಗ್ಗೆ ನೋವು. ಸಾಯಂಕಾಲ ಮರೆವು ಸ್ವಾಮಿ ಬಾಳು ಗೋಳಿನ ದಿನಚರಿಯಾಗಿತ್ತು. ಹೆಂಡತಿ ಮಕ್ಕಳೊಂದಿಗೆ ಕಾಫಿ ತೋಟದ ಇತರೆ ಕೆಲಸಗಳಲ್ಲೆಲ್ಲ ಪರಿಣತನಾಗಿದ್ದ ಸ್ವಾಮಿ, ಪಾಲೇಗೌಡ ಆದಿಯಾಗಿ ಊರಿನ ಗೌಡ ಮಕ್ಕಳಿಗೆಲ್ಲ ಆಪ್ತ ಬಂಧುವಂತೆ ಮುಖವಾಡದ ಕಣ್ಣುಗಳಿಗೆ ಆಹಾರವಾದನು. ಅತ್ತ ಗೌಡ ಮಕ್ಕಳ ತೋಟಕ್ಕೆ ತನ್ನವರು ತೆರಳುತ್ತಿದ್ದಂತೆ ಇತ್ತ ರಸ್ತೆ ಬದಿ ಅದ್ಯಾರೋ ಮನೆ ಕಟ್ಟಿಸಲು ತಂದು ಸುರುವಿಕೊಂಡಿದ್ದ ಮರಳು ರಾಶಿಯ ಮೇಲೆ ಬಿದ್ದು ಹುಡಿಮಣ್ಣಾಡುತ್ತಿದ್ದ ಹಂದಿ ಪುಟ್ಟಿ ಮಾಂಸಪ್ರಿಯರ ಬಾಯಲ್ಲಿ ನೀರು ಸುರಿಸುತ್ತಿತ್ತು. ಯಾರಾದರೂ ಗದರಿದರೆ ''ಗಟ್ರೂ... ಗುರುಕ್...ಗುರ್ರ್'' ಎಂದು ನನ್ನ ಪಾಡಿಗೆ ಇರಲು ಬಿಡ್ರೋ ಎಂದು ಕೂಗಿ ಹೇಳಿದರೂ ಅರ್ಥವಾಗದ ಮಂದಿ ಕಲ್ಲು ತೂರಿ ಚಪಲ ತೀರಿಸಿಕೊಳ್ಳುತ್ತಿದ್ದರು. ಒಂದು ದಿನ ಅದ್ಯಾವನೋ ಬೀಸಿದ ಕಲ್ಲು ಆಯಾಗೆನ್ನೆಗೆ ಬಡಿದು ಪ್ರಜ್ಞೆ ಕಳೆದುಕೊಂಡ ಪುಟ್ಟಿ ಮೇಲೇಳಲೇ ಇಲ್ಲ, ಅಲ್ಲೇ ಪ್ರಾಣ ಬಿಟ್ಟಳು. ಕೆಲಸ ಬಿಟ್ಟು ಗುಡಿಸಲಿಗೆ ಬಂದ ಸ್ವಾಮಿಯ ಹೆಣ್ಣುಮಕ್ಕಳು ''ಪುಟ್ಟಿ, ಪುಟ್ಟಿ, ಬಾ... ಬಾ...'' ಎಂದರೂ ಹಂದಿ ಪುಟ್ಟಿ ಸುಳಿಯಲಿಲ್ಲ, ಮರಳ ರಾಶಿಯ ಮೇಲೆ ಚಿರನಿದ್ರೆಗೆ ಜಾರಿದ್ದ ಪುಟ್ಟಿಯ ಮೂಗಿನಲ್ಲಿ ರಕ್ತ ವಸರುತ್ತಿದ್ದುದನ್ನು ಕಂಡ ಜನ, ''ಹಂದಿಗೆ ವಯಸ್ಸಾಗಿತ್ತು ನೋಡು.. ಕೊಬ್ಬು ಬೇರೆ ಬೆಳೆದಿತ್ತಲ್ಲ, ಉಸಿರುಗಟ್ಟಿ ಸತ್ತಿದೆ ಬಿಡು'' ಎಂದರೆ, ಇನ್ನೂ ಕೆಲವರು, ''ಛೇ! ಹೀಗಾಗಬಾರದಿತ್ತು. ಎದೆ ಒಡೆದಿರಬೇಕು. ಮೂಗಲ್ಲಿ ಬ್ಯಾರೆ ರಕ್ತ ಸುರೀತೈತೆ ನೋಡು ಸ್ವಾಮಿ.. ಹೆಂಗೂ ಸತ್ತದೆ. ಕಡ್ದು ಮಾರಿದ್ರೆ ದುಡ್ಡಾದ್ರೂ ಆಗ್ತಾವೆ'' ಎಂದು ಬಾಯಿ ಚಪ್ಪರಿಸಿದರು. ಸ್ವಾಮಿ ಮಾತ್ರ ಮಾತನಾಡದೆ ನೀರು ಸುರಿಯುತ್ತಿದ್ದ ಕಣ್ಣು- ಮೂಗನ್ನು ಒರೆಸಿಕೊಳ್ಳುತ್ತ ಕುಳಿತಿದ್ದ.

...ಕೊನೆಗೂ ಸ್ವಾಮಿ ಒಂದು ನಿರ್ಧಾರಕ್ಕೆ ಬಂದನು. ''ಹಂದಿ ಪುಟ್ಟಿ ನನ್ನ ಮಗಳು ಇದ್ದಂಗೆ... ಅವಳ ಹೆಣ ಕಡಿದು ಮಾರಿದ ಪಾಪ ನಾ ಹೆಂಗೆ ತೊಳೆದುಕೊಳ್ಳಲಿ? ಬ್ಯಾಡ, ಅವಳನ್ನು ಹೂಳಿ ಸಮಾಧಿ ಕಟ್ಟಿ ಪೂಜಿಸುತ್ತೇನೆ'' ಎಂದು ಹಟ ಹಿಡಿದನು. ನೆರೆದ ಜನ, ''ಸ್ವಾಮಿಗೆ ಹೂಳೋದಕ್ಕೆ ಜಾಗ ಎಲ್ಲೈತೆ? ನಡಿರಲೇ, ದುಃಖ ಕಮ್ಮಿ ಆದ ಮ್ಯಾಲೆ... ಅವನೇ ಸಾಯಂಕಾಲ ಕಡಿದು ನಾಳೆ ಸೋಮವಾರ ಬಣಕಲ್ ಸಂತೇಲಿ ಮಾರ್‍ತಾನೆ. ಕೊಂಡುಕೊಳ್ಳುವ'' ಎಂದು ಗೊಣಗುತ್ತ ತೆರಳಿದರು.

ಹೆಂಡತಿ-ಮಕ್ಕಳನ್ನು ಹೇಗೋ ಒಪ್ಪಿಸಿದ ಸ್ವಾಮಿ ರಾತ್ರೋ-ರಾತ್ರಿ ತನ್ನ ಗುಡಿಸಲ ಒಳಗೆ ತಡಿಕೆ ಮುಂಬಾಗಿಲಿನ ಬಳಿ ಸೊಂಟದುದ್ದದ ಗುಂಡಿ ತೋಡಿದನು. ಹಂದಿ ಹೆಣವನ್ನು ಎಳೆಯಲಾರದೆ ಎಳೆದುಕೊಂಡು ಬಂದು ಬಚ್ಚು ಮಗ್ಗಲು ಮಲಗಿಸಿ ''ಹೋಗಿ ಬಾ ಪುಟ್ಟೀ! ನಿನ್ನ ಋಣ ಹೆಂಗೆ ತೀರಿಸಲೀ'' ಎನ್ನುತ್ತ ಗೋಳೋ ಎಂದು ಅತ್ತನು. ಹೆಂಡತಿ ಮಕ್ಕಳು. ''ಇನ್ನೂ ಎಷ್ಟೊತ್ತು ಜಾಗ್ರಣೆ ಮಾಡ್ತೀಯೋ ಮಾಡ್ಕೋ ನಾವು ಮಕ್ಕೋಬೇಕು.'' ಎಂದು ಗೋಗರೆಯಲು, ಹೆಣವನ್ನು ಮಣ್ಣು ಮುಚ್ಚಿ ನೆಲಸಮ ಮಾಡಿದನು. ''ನಾಳೆ ಬೆಳಿಗ್ಗೆ ಗೌಡರ ಮನೆಗೆ ಹೋದವಳು ಎರಡು ಉಂಡಿ ಎಮ್ಮೆ ಸಗಣಿ ಎತ್ಕೊಂಡು ಬಾ. ನೆಲ ಸಾರಿಸಿ ಬಿಡುವ'' ಎಂಬ ಸೂಚನೆ ಹೆಂಡತಿಗೆ ಕೊಟ್ಟನು. ಪುಟ್ಟದೊಂದು ಸ್ಟೀಲು ಚೊಂಬಿಟ್ಟು ಅದರ ಮೇಲೆ ತೆಂಗಿನ ಕಾಯಿಯ ಕಲಶ, ಪೂಜಿ ಹೂ ಇಟ್ಟು, ಊದುಗಡ್ಡಿ ಬೆಳಗಿ ಅಶ್ರುತರ್ಪಣ ಅರ್ಪಿಸಿದನು. ಹೆಂಡತಿ ಮಕ್ಕಳು ನಿದ್ದೆಗೆ ಜಾರಿದ್ದನ್ನು ನೋಡಿ ತನ್ನ ಕಣ್ಣುಗಳು ಎಳೆಯಲಾರಂಭಿಸಿದ್ದನ್ನು ಅರಿತು ತಡಿಕೆ ಕಂಬಕ್ಕೆ ತಲೆಕೊಟ್ಟು ಒರಗಿದನು.

ಮರುದಿನ ಸೋಮವಾರದ ಸಂತೆಗೆ ನನ್ನೂರಿನ ಜನ ಹಂದಿ ಮಾಂಸದ ಅಂಗಡಿ ಮುಂದೆ ರಣಹದ್ದುಗಳಂತೆ ನೆರೆದರು. ತಮಗೆ ಹಂದಿಸ್ವಾಮಿ ಹಂದಿ ಮಾಂಸವೇ ಬೇಕೆಂದು ಪಟ್ಟುಹಿಡಿದರು. ಜೋಗಿ ರಾಮಣ್ಣನಂತೂ, ''ನನ್ನ ಮಗ ಲೋಕಾಯುಕ್ತ ಪೊಲೀಸ್. ಮರ್‍ಯಾದೆಯಿಂದ ನಂಗೊಂದು ಕೆ.ಜಿ.ನಾದ್ರೂ ಕೊಟ್ರೆ ಕೊಟ್ಟಂಗೆ. ಇಲ್ಲಾ ಅಂತಂದ್ರೆ, ನಾಳೆಯಿಂದಲೇ ನಿನ್ನ ಅಂಗಡೀನ ಮೇಲೆಳ್ಳಿ ಸ್ಟೇಷನ್‌ನಲ್ಲಿ ಬೆಂಡು ಎಬ್ಬಿಸ್ತೀನಿ!'' ಎಂದು ಬಾಯಿಗೆ ಬಂದಂಗೆ ವದರಿದನು. ಹಂದಿ ಅಂಗಡಿ ಮಾಲಿಕ ಮೋರೇಶ್ ಪರ್ಬುಗೆ ಒಂದಿಷ್ಟು ಮಾತನಾಡಲು ಅವಕಾಶ ಇಲ್ಲ ಎಂದೆನಿಸಿದಾಗ, ''ಆಯ್ತು ಇದೆಲ್ಲ ಹಂದಿಸ್ವಾಮಿದೇ. ಎಲ್ಲರಿಗೂ ಹಂಚಿಕೊಡ್ತೀನಿ. ಕ್ಯಾತೆ ಮಾಡ್ಬೇಡಿ'' ಎಂದೇಳಿ ಸಾಗಹಾಕಿದನು.

ಊರಿಗೆ ಮರಳಿದವರು ಖಾರಾಪುಡಿ-ಬೆಳ್ಳುಳ್ಳಿ, ಈರುಳ್ಳಿ ಒಗ್ಗರಣೆ ಕೊಟ್ಟು ತುಂಡು ಹುರಿಯುತ್ತಲೇ ಜೊಲ್ಲು ಸುರಿಸಿದರು. ಜಗಿಯುವ ಬಾಯಿಗಳೆಲ್ಲವೂ ಹಂದಿಸ್ವಾಮಿ... ಹಂದಿಸ್ವಾಮಿ... ಎಂದು ಜಪಿಸಿ, ಸ್ಮರಿಸಿ ಗಂಟಲು ನಿವಾಳಿಸಿಕೊಂಡವು.

ಮಂಗಳವಾರ ಇಳಿಮೊಗ ಹೊತ್ತು ಎಂದಿನ ಚಾಕರಿಗೆ ಬಂದ ಹಂದಿಸ್ವಾಮಿಗೆ, ''ಸ್ವಾಮಿ... ಹಂದಿ ಅಂದ್ರೆ ಹಂದಿ ಮಾರಾಯ, ಬಾರಿ ಚರ್ಬಿ-ಸೆಳ್ಳಿ ಬೆಳೆದಿತ್ತು ಅಂತ ಕಾಣ್ತದೆ. ಅದಕ್ಕೇ ಉಸುರುಗಟ್ಟಿ ಸತ್ತದೆ. ನೀನೇನೂ ಬೇಜಾರು ಮಾಡ್ಕೋಬ್ಯಾಡ. ಅದು ಹೋದ್ರೆ ಇನ್ನೊಂದುಹಂದಿ ಸಾಕಿದ್ರಾಯ್ತು'' ಎಂದು ಹೆಂಡದಂಗಡಿ ಪಾಲೇಗೌಡ ಸಮಾಧಾನ ಹೇಳಿದ್ದು ಸ್ವಾಮಿ ಹೃದಯಕ್ಕೆ ಇರಿದಂತಾಯಿತು. ''ಒಂದು ಕ್ವಾಟ್ರು ಚಿಪರಿದ್ರೆ ಕೊಡಿ'' ಎಂದೇಳಿ, ''ಇವತ್ತು ಕೆಲಸ ಮಾಡಕ್ಕೆ ತಲೇನೇ ಓಡ್ತಿಲ್ಲ, ನಾಳೆ ಮಾಡ್ತೀನಿ. ಮಕ್ಳು, ಅವಳು ಬ್ಯಾರೆ ಜ್ವರ ಅಂತ ಮಲಕೊಂಡವರೆ'' ಎಂದು ಕ್ವಾಟ್ರು ಏರಿಸಿದವನೇ 'ನಿಜವಾಣಿ' ಪತ್ರಿಕೆಯ 'ಹಳ್ಳಿ ದರ್ಶನ' ಸಾಪ್ತಾಹಿಕ ಪುಟದಲ್ಲಿ ಪ್ರಕಟವಾಗಿದ್ದ ಹಂದಿ ಚಿತ್ರಗಳನ್ನು ಕಣ್ಣಿಳಿಸಿ ವೀಕ್ಷಿಸಿದನು.

ತನ್ನ ಗುಡಿಸಲು ಪಕ್ಕದ ಅಣ್ಣೇಗೌಡರ ಮಗ ಮಂಜುನಾಥ ಹಂದಿಪುಟ್ಟಿಯ ಜತೆ ನಿಂತು ಫೋಟೋ ತೆಗೆಸಿ, ''ಮಲೆನಾಡಿನಲ್ಲಿ ಬ್ರೆಜಿಲ್ ತಳಿಯ ಹಂದಿ ಸಾಕಿ ಯಶಸ್ವಿಯಾದ ಸಾಧಕ'' ಎಂದು ಬರೆಸಿಕೊಂಡದ್ದನ್ನು ಓದಿ, ಕುಸಿದು ಕುಳಿತನು. ಮೊದಲೇ ಪುಟ್ಟಿ ಸಾವಿನಿಂದ ಶೋಕತಪ್ತನಾಗಿದ್ದ ಸ್ವಾಮಿಯ ಹೃದಯ ಕಿತ್ತುಬಂದ ಅನುಭವವಾಯಿತು. ಸ್ವಾಮಿಯನ್ನೇ ತದೇಕಚಿತ್ತನಾಗಿ ನೋಡಿ ಕರುಣಾಭರಿತ ನಾಟಕ ತೋರುತ್ತಿದ್ದ ಪಾಲೇಗೌಡ, ''ಸ್ವಾಮಿ ಏನಾಯ್ತೋ, ಸ್ವಲ್ಪ ನೀರು ಬೆರೆಸಿ ಕುಡಿ ಅಂದ್ರೆ, ನನ್ನಂತ ಕುಡಿಯೋನೆ ಇಲ್ಲಾ... ಅನ್ನಂಗೆ ಪೋಸು ಕೊಡ್ತೀಯ, ತಗ ಮಾರಾಯ ನೀರು ಕುಡಿ'' ಎಂದು ಗಾಜಿನ ಲೋಟಕ್ಕೆ ಗಳಗಳನೆ ನೀರು ಸುರಿದನು. ಆದರೆ ಸ್ವಾಮಿಯ ಕಣ್ಣಿನಿಂದ ಉರಿಭರಿತ ಬಿಸಿ ಹನಿಗಳು



ತೊಟ್ಟಿಕ್ಕಿದವು. ''ಅಲ್ಲಾ ಗೌಡ್ರೇ, ಈ ಬೇವರ್ಸಿ ನನ್ಮಗ'' ಹಿಂಗಾ ಮಾಡೋದು ? ನನ್ನಂದಿ ಜೊತೆ ನಿಂತು ಫೋಟೋ ತೆಗೆಸಿ ಪೇಪರ್‌ನಾಗೆ ಬರೆಸಿಕೊಂಡಿದ್ದಾನೆ. ಹಲ್ಕಟ್ ನನ್ಮಗ ಎಂದು ಕಣ್ಣೊರೆಸಿಕೊಂಡನು.

ನಾಲ್ಕನೇ ಕ್ಲಾಸಿನವರೆಗೆ ಓದಿದ್ದ ಸ್ವಾಮಿಗೆ ಪಾಲೇಗೌಡನ ಅಂಗಡಿಯಲ್ಲಿ ಹೆಂಡ ಕುಡೀತಾ ಪೇಪರ್ ಓದೋದು ಒಂದು ಹವ್ಯಾಸವಾಗಿತ್ತು. ಪುಟ್ಟಿ ಬಂದ ಮೇಲೆ ಪೇಪರ್‌ನ ಬದಲಾಗಿ ಪುಟ್ಟಿಯೊಂದಿಗೆ ಪೆಗ್ ಏರಿಸುವುದೇ ಖಯಾಲಿಯಾಗಿತ್ತು. ಆದರಿಂದು ಪುಟ್ಟಿಯೊಂದಿಗಿನ ಭಾವನಾತ್ಮಕ ಕಥನಗಳನ್ನು ಮರೆಯುವ ಸಲುವಾಗಿ ಮತ್ತದೇ ಹಳೇ ಚಾಳಿ. ಪೇಪರ್ ತೆರೆದರೆ; ಹಂದಿಪುಟ್ಟಿ ಮತ್ತು ಅಣ್ಣೇಗೌಡನ ಮಗ ಮಂಜುನಾಥನ ಚಿತ್ರ ಹೃದಯವನ್ನು ಛಿದ್ರಗೊಳಿಸಿ ಕೆರಳುವಂತೆ ತೋರುತ್ತಿತ್ತು. ಆದರೆ ಮಂಜುನಾಥನ ಮೇಲೆ ಹರಿಹಾಯುವಷ್ಟು ಹಿನ್ನೆಲೆಯಾಗಲೀ ಧೈರ್ಯವಾಗಲೀ ಸ್ವಾಮಿಗೆಲ್ಲಿಂದ ಬರಬೇಕು ? ಅನಾಮಿಕ ಈ ಊರಲ್ಲಿ ಅನಾಥ ಶಿಶುವಂತೆ ಬದುಕು ಕಂಡುಕೊಂಡಿರುವ ಈತ ಸಾಹುಕಾರ ಅಣ್ಣೇಗೌಡರ ವಿರುದ್ಧ ಸೆಟೆದು ನಿಲ್ಲಲು ಸಾಧ್ಯವೇ ? ಖಂಡಿತ ಇಲ್ಲ! ಪಾಲೇಗೌಡ ಸ್ವಾಮಿಯ ಪರಿಸ್ಥಿತಿಯನ್ನು ನೆನೆ-ನೆನೆದು ಮುಸಿಮುಸಿ ಕಿಸುಗುಟ್ಟಿದನು.

ನನ್ನೂರಿನ ಯುವ ಬರಹಗಾರನೊಬ್ಬ ಪತ್ರಿಕೆಗಳಿಗೆ ಅದು-ಇದು ಅಂತ ಬರೆಯುತ್ತ 'ಸಾಹಿತಿ' ಎಂಬ ಪೆನ್‌ನೇಮ್ ಪಡೆದಿದ್ದ. ತನ್ನ ಅಂಗಡಿಯ ಮುಂದೆ ಆತ ಬಸ್‌ಸ್ಟಾಪಿನೆಡೆಗೆ ಹೆಜ್ಜೆ ಹಾಕುವುದನ್ನು ಕಂಡ ಪಾಲೇಗೌಡ, ''ನೋಡು ಮಾರಾಯ ? ಆ ಸಾಹಿತಿಗೆ ಹೇಳಿದ್ರೆ ಎಲ್ಲಾ ಸರಿ ಮಾಡ್ತಾನೆ'' ಎನ್ನಲು ಹಂದಿಸ್ವಾಮಿಗೂ ಸರಿ ಎನಿಸಿತು.

ನವ ಸಾಹಿತಿಯನ್ನು ಮಾರನೇ ದಿನವೇ ಭೇಟಿ ಮಾಡಿದ ಸ್ವಾಮಿಯು ತನ್ನ ಒಡಲಾಳದ ಬ್ಯಾನೆಯನ್ನೆಲ್ಲಾ ಕಕ್ಕುಲಾತಿಯಿಂದ ವದರಿದನು. ಬಹುದಿನಗಳಿಂದಲೂ ಪತ್ರಿಕೆಗೆ ಏನು ಬರೆಯಲಿ, ಎಂದು ತವಕಿಸುತ್ತಿದ್ದ ಸಾಹಿತಿಗೆ ಸ್ವಾಮಿಯ ಕಥೆ ಕಣ್ಣಿಗೆ ಕಟ್ಟಿದಂತಿದೆ, ಖಂಡಿತ ರಾಜ್ಯ ಮಟ್ಟದ ಪತ್ರಿಕೆಯಲ್ಲಿ ಪ್ರಕಟವಾದರೆ ತನಗೂ ಹೆಸರು ಬರುತ್ತದಲ್ಲವೇ, ಯಾಕೆ ಇಂತಹ ಅವಕಾಶ ದೂರ ತಳ್ಳಬೇಕು! ಎಂದೆನಿಸಿತು. ''ನೋಡು ಸ್ವಾಮಿ, ಈಗೆಲ್ಲಾ ಇ-ಮೇಲ್ ಅಂತ ಕಂಪ್ಯೂಟರ್‌ನಾಗೆ ಟೈಪ್ ಮಾಡಿ ಕಳ್ಸಬೇಕು. ಇಲ್ಲಾಂದ್ರೆ ಪೇಪರ್‌ನೋರು ಹಾಕಲ್ಲ! ಒಂದು ನೂರು ರೂಪಾಯಿ ಖರ್ಚಾಗುತ್ತೆ'' ಎಂದಿದ್ದೇ ತಡ, ಸ್ವಾಮಿಯೂ, ''ನೂರಲ್ಲ, ಇನ್ನೂರು ರೂಪಾಯಿ ಖರ್ಚಾಗ್ಲಿ, ನನ್ ಪುಟ್ಟೀದು ಪೇಪರ್‌ನಾಗೆ ಬರ್ಲಿ'' ಅಂತೇಳಿ ನೂರರ ಗರಿ ಗರಿ ನೋಟನ್ನು ಹಿರಿದು ಕೊಟ್ಟನು.

ಒಂದೆರಡು ವಾರಗಳು ಕಳೆದವು. ಸ್ವಾಮಿಗಿಂತಲೂ ಸಾಹಿತಿಗೆ ಈ ಸಂಗತಿ ಪ್ರತಿಷ್ಠೆಯ ವಿಷಯವಾಗಿತ್ತು. ಪಾಲೇಗೌಡನ ನಿರ್ದೇಶನದಂತೆ ಸ್ವಾಮಿ ನನ್ನ ಬಳಿ ಬಂದಿದ್ದಾನೆ ಅಂದರೆ ಹೇಗಾದರೂ ಮಾಡಿ ಅದನ್ನು ಪ್ರಕಟವಾಗುವಂತೆ ನೋಡಿಕೊಳ್ಳಬೇಕು. ಇಲ್ಲಾ ಅಂತಂದ್ರೆ, ಊರಿನಾಗೆ ನನ್ನ ಜನ ''ಏನ್ ಸಾಹಿತಿಗಳೇ'' ಅಂತ ಕರೆದಿದ್ದಕ್ಕಾದ್ರೂ ಬೆಲೆ ಎಲ್ಲಿಂದ ಉಳಿದೀತೆಂದು ಎರಡೆರಡು ಬಾರಿ ಇ-ಮೇಲ್ ಮಾಡಿಸಿದನು.

ಒಂದು ಮುಂಜಾನೆ ಪುಟ ತೆರೆದರೆ 'ನಿಜವಾಣಿ' ಪತ್ರಿಕೆಯ ಹಳ್ಳಿಚಿತ್ರ ಅಂಕಣಪುಟದಲ್ಲಿ 'ಹಂದಿಮಿತ್ರ ಸ್ವಾಮಿ' ಎಂಬ ಸುದ್ದಿಯೊಂದು ರೇಖಾಚಿತ್ರದೊಂದಿಗೆ ಸ್ವಾರಸ್ಯಕರವಾಗಿ ಪ್ರಕಟವಾಗಿತ್ತು. ಸ್ವಾಮಿಗಿಂತಲೂ ಸಾಹಿತಿಗೆ ಖುಷಿಯೋ ಖುಷಿ. ತನ್ನದೊಂದು ಬರಹ ಈ ರೀತಿ ಪ್ರಕಟಗೊಳ್ಳುತ್ತೆ ಅಂತ ಅವನು ಕನಸುಮನಸಿನಲ್ಲೂ ಎಣಿಸಿರಲಿಲ್ಲ. ಪಾಲೇಗೌಡನ ಅಂಗಡಿಗೆ ಮುಂಜಾನೆ ಸಾರಾಯಿ ಹೀರಲು ಬಂದ ಸ್ವಾಮಿ ನಿರಾಸೆಯಿಂದಲೇ ಪೇಪರ್ ತೆರೆದರೆ ಹಂದಿಮಿತ್ರ ಸ್ವಾಮಿ ಸುದ್ದಿಚಿತ್ರವನ್ನು ನೋಡಿದವನೇ, ''ಗೌಡ್ರೇ... ಗೌಡ್ರೇ... ಇಲ್ನೋಡಿ'' ಎಂದು ಕುಣಿದಾಡಿದನು. ಪಾಲೇಗೌಡನಿಗೂ ಹೆಮ್ಮೆ ಎನಿಸಿತು. ''ನಾನು ಹೇಳಲಿಲ್ವೇ ಸ್ವಾಮಿ, ಸಾಹಿತಿಗೆ ಕೊಟ್ರೆ ಅದು ಹೆಂಗಾದ್ರೂ ಪೇಪರ್‌ನಾಗೆ ಬಂದೇ ಬರುತ್ತೆ ಅಂತ. ಈ ಖುಷಿಯಾಗೆ ಇನ್ನೊಂದು ಕ್ವಾಟ್ರೂ ಕುಡೀಲಾ ಸ್ವಾಮಿ, ಕುಡೀಲಾ'' ಎಂದು ಗಳಗಳನೆ ಲೋಟಕ್ಕೆ ಬಾಟಲಿ ಬಗ್ಗಿಸಿದನು.

ಸಾಹಿತಿಗೆ ಒಂದು ರೀತಿಯಲ್ಲಿ ಇಮೇಜ್ ದೊರೆತರೆ, ಸ್ವಾಮಿಗೆ ಒಂದಿಷ್ಟು ಆತ್ಮತೃಪ್ತಿ ದೊರೆತಂತೆ ಅನಿಸಿದರೂ ಯಾಕೋ ಸಮಾಧಾನ ದೊರಕಲಿಲ್ಲ. ತನ್ನ ಪುಟ್ಟೀದು ನಿಜ ಚಿತ್ರ ಬಂದಿದ್ರೇ ಚೆಂದಾಗಿರ್ತಿತ್ತು ಎಂಬ ಯೋಚನೆ ಸುಳಿದೊಡನೇ ಸಾಹಿತಿಯ ಬಳಿ ಬಂದು, ಅಣ್ಣೇಗೌಡರ ಮಗನ ಜೊತೆ ಇರುವಂತೆ ಪ್ರಕಟವಾಗಿದ್ದ ಹಂದಿ ಚಿತ್ರ ತನ್ನ ಪುಟ್ಟಿಯದೆಂದು, ಅದನ್ನು ಹೇಗಾದ್ರೂ ಮಾಡಿ ಕತ್ತರಿಸಿ ಇನ್ನೊಮ್ಮೆ ಪೇಪರ್‌ನಾಗೆ ಬರೋಹಂಗೆ ಮಾಡಬೇಕೆಂದು ಅಲವತ್ತುಗೊಂಡನು. ಸಾಕ್ಷಿಗಾಗಿ ಪುಟ್ಟಿಯನ್ನು ತನ್ನ ಮನೆಯೊಳಗೆ ಹೂತಿಟ್ಟಿರುವ ಸತ್ಯವನ್ನು ಬಿಡಿಬಿಡಿಯಾಗಿ ಬಿಚ್ಚಿಟ್ಟನು.

ಸಾಹಿತಿಗೆ ತನ್ನ ಜೀವಮಾನದಲ್ಲಿ ಈ ಸುದ್ದಿ ರಾಜ್ಯ ಮಟ್ಟದ ಪತ್ರಿಕೆಯಲ್ಲಿ ಇನ್ನೊಮ್ಮೆ ಪ್ರಕಟವಾಗುತ್ತೆ ಅಂತ ಅನಿಸಲಿಲ್ಲ. ಹರಸಾಹಸ ಮಾಡಿದ್ದರ ಫಲವೋ, ಅದೃಷ್ಟದಾಟವೋ, ಹೇಗೋ ಅದು ಪ್ರಕಟವಾಗಿದ್ದೂ ತನ್ನ ಪೂರ್ವಜನ್ಮದ ಪುಣ್ಯವೋ ಎಂದು ಬಗೆದನು. ಆದರೂ ಸ್ವಾಮಿಯ ಸಮಾಧಾನಕ್ಕೆ, ''ನೋಡು ಸ್ವಾಮಿ, ಒಂದೇ ಪೇಪರ್‌ನಾಗೆ ಬಂದ್ರೇ ಜನ ನಂಬಕಿಲ್ಲ, ನೀನೊಂದು ಕೆಲ್ಸಾ ಮಾಡು. ಫೋಟೋಗ್ರಾಫರ್‌ನ ಕರೆಸಿ ಹಂದಿ ಸಮಾಧಿ ಪಕ್ಕದಲ್ಲಿ ಕುಳಿತು ಫೋಟೋ ತೆಗೆಸಿಕೊಂಡು ಬಾ! ಬೇರೆ ಪೇಪರ್‌ನಾಗೆ ನನ್ಮಗ ಮಂಜುನಾಥನ ಕತೆನೂ ಸೇರ್ಸಿ ಬರೀತೀನಿ. ಗ್ರಾಮ ಪಂಚಾಯಿತಿ ಸದಸ್ಯ ಅಂತ ಭಾರಿ ಧಿಮಾಕು ತೋರ್‍ತಾನೆ, ನನ್ಮಗನಿಗೆ ಮಾಡ್ತೀನಿ ತಾಳು'' ಎಂದು ಭರವಸೆ ತುಂಬಿದನು.

ಹಿರಿ ಹಿರಿ ಹಿಗ್ಗಿದ ಸ್ವಾಮಿ ಒಂದೆರಡು ದಿನಗಳಲ್ಲಿ ಆ ಕೆಲಸ ಮಾಡಿದನು. ಸಾಹಿತಿಗೆ ಹಂದಿಸ್ವಾಮಿಯ ಸಮಾಧಿ ಚಿತ್ರಗಳು ದೊರೆತಿದ್ದೇ ತಡ 'ನನ್ನೂರು ಮಂಜುನಾಥನ ಕಥೆ - ಹಂದಿಸ್ವಾಮಿಯ ವ್ಯಥೆ' ಎಂದು ಸುದ್ದಿ ಬರೆದು ತಾಲ್ಲೂಕಿನ 'ಗಿಲ್ಲಿ' ಪತ್ರಿಕೆಯ ಸಂಪಾದಕನ ಕೈಗೆ ಕೊಟ್ಟು ಅವನ ಜತೆ ಕ್ಯಾಂಟೀನ್‌ಗೆ ಹೋಗಿ ಒಂದು ಮಸಾಲೆ ದೋಸೆ ತಿಂದು ಟೀ ಕುಡಿದನು.

ಹದಿನೈದು ದಿನಗಳು ಕಳೆದವು. ನನ್ನೂರಿನ ತುಂಬೆಲ್ಲಾ ಒಂದು ಗುಸುಗುಸು ಹರಿದಾಡ ತೊಡಗಿತು. ''ಹಂದಿಸ್ವಾಮಿ ಮನೆಯೊಳಗೆ ಹಂದಿ ಹೂಣಿಕೊಂಡಿದ್ದಾನಂತೆ. ಎಂಥಾ ದರಿದ್ರ ಸೂಳೇಮಗ ಅವನು ?'' ನೀನೇ ಹೇಳು ಮಾರಾಯ, ಯಾರಾದ್ರೂ ಮನುಷ್ಯ ಅನಿಸಿಕೊಂಡವನು ಹಂದಿಯನ್ನು ಮನೆಯೊಳಗೆ ಹೂಳ್ತಾನಾ ?'' ಎಂಬ ಊಹಾಪೋಹಗಳು ಮುಗಿಲುಮುಟ್ಟಿದವು. ಪಾಲೇಗೌಡನಿಗೆ ಮಾತ್ರ ಸಿಟ್ಟು ಸುಟ್ಟುಕೊಳ್ಳುವಂತೆ ಮಾಡಿತು. ''ಹಾಗಾದ್ರೆ ಬಣಕಲ್ ಸಂತೆಯ ಹಂದಿ ಮಾರುಕಟ್ಟೆಯಲ್ಲಿ ತಂದು ತಿಂದ ಹಂದಿಮಾಂಸ ಸ್ವಾಮಿ ಪುಟ್ಟಿಯದಲ್ಲ! ನಂಗೆ ಒಂದು ಮಾತು ಹೇಳಿಲ್ಲ, ಬಡ್ಡೀಮಗಾ ! ದಿನಾ ಕುಡಿಯೋದಕ್ಕೆ ಮೈ-ಕೈ ಕೆರಕೊಂಡು ಬರ್‍ತಾನೆ, ಇವತ್ತು ಬರ್ಲಿ ಕೊರಳು ಹಿಡಿದು ಆಚೆ ದಬ್ಬೀನಿ'' ಎಂದು 'ಗಿಲ್ಲಿ' ಪತ್ರಿಕೆಯ ಪುಟ ತಿರುವಿ ಹಾಕಿದನು.

ಏನಾದ್ರೂ ನೆಪಕ್ಕಾಗಿ ಕಾಯುವ, ಸಿಕ್ತು ಅಂತಂದ್ರೆ ಅದನ್ನೇ ಕಜ್ಜಿ ಕೆರೆದಂತೆ ಕೆರೆದು ಘಾಸಿಗೊಳಿಸುವ ನನ್ನೂರಿನ ಜನಕ್ಕೆ ಸದ್ಯಕ್ಕೆ ಸ್ವಾಮಿ ಮನೆಯೊಳಗೆ ಹಂದಿ ಹೂಳಿ ಕೊಂಡಿರುವುದರಿಂದಲೇ ಈ ಊರಿಗೆ ಜುಲೈ ತಿಂಗ್ಳು ಕಳೆದ್ರೂ ಮಳೆ ಬಂದಿಲ್ಲ! ಎಂಬ ನಂಬಿಕೆಯ ನೆಪ ದೊರೆತು ಮಾತಿಗೊಂದು ಬೆಂಕಿಕಡ್ಡಿ ಗೀರಲು ಪ್ರೇರೇಪಣೆಯಾಯಿತು. ಗ್ರಾಮ ಪಂಚಾಯಿತಿ ಸದಸ್ಯ ಅಣ್ಣೇಗೌಡರ ಮಗ ಮಂಜುನಾಥನ ಪಿತ್ತವೂ ನೆತ್ತಿಗೇರಿತು. ''ಬೇರೆ ಊರಿಂದ ಬಂದ ನಾಯಿ ಹಂದಿಸ್ವಾಮಿಯೇ ಇಷ್ಟು ಧಿಮಾಕು ಹೊಡೆಯಬೇಕಾದ್ರೆ ನಾವಿಲ್ಲಿ ಹುಟ್ಟಿ ಬೆಳೆದೌವ್ರು... ಥೆ !'' ಎಂದು ತೋಳು ಮಡಚಿದನು. ಏನಾದ್ರೂ ಆಗ್ಲೀ ಹಂದಿ ಹೊರಗೆ ತೆಗ್ದು... ಸುಟ್ಟುಹಾಕಬೇಕೆಂದು ಗ್ರಾಮ ಮುಖಂಡರು ನಿರ್ಧರಿಸಿದರು.

ಎಂದಿನಂತೆ ಬೆಳಗಾಯಿತು. ಹಂದಿಸ್ವಾಮಿ ತಡಿಕೆ ಬಾಗಿಲು ಮುಚ್ಚಿದವನೇ, ''ಹಂಗೆಲ್ಲ ಏನೂ ಆಗಕಿಲ್ಲ ನಾಗಿ, ಬಾ ಆಸ್ಪತ್ರೆಗೆ ಹೋಗಿ ಬರುವ. ಬಾಯಲ್ಲಿ ರಕ್ತ ಅಂದ್ರೆ

# ಅಜ್ಜನ ಕೋಟು



**ನ**ಮ್ಮಜ್ಜ
ಸತ್ತು ಏಸೋ ದಿನಾ ಆತು
ಒಂದ ಕಾಲದೊಳಗ ನಮ್ಮಜ್ಜನ ಮಾತು
ಆಗಿತ್ತು ಮುತ್ತು
ಅಂತ ಹೇಳತಾರ ನಮ್ಮೂರ ಜನಾ
ಇವತ್ತೂ
ನಮ್ಮಜ್ಜನ ಪರಾಕ್ರಮಾ
ಅವನ ಮಂತ್ರಾ, ಜನಿವಾರಾ,
ಹಣೀ ಮ್ಯಾಲಿನ
ಗಂಧದ ಬೊಟ್ಟು
ಮತ್ತ ದಿಮಾಕಿನಿಂದ ತೊಟಗೋತಿದ್ದ
ಅವನ ಕೋಟು
ಹೇಳತಾರ ಬಣ್ಣಾ ಕೊಟ್ಟು

ಅಜ್ಜ
ಸಾಯೋವಾಗ ತನ್ನ ಕೋಟು
ಪಡಸಾಲೆ ಗೂಟಕ್ಕ
ನೇತ ಹಾಕಿದ್ದು ಅಲ್ಲೇ ಅದ.
ಅಪ್ಪ
ಅದು ಅಲ್ಲೇ ಇರಲಿ ಅಂದ
ತಾನೂ ಸಾಯೋವಾಗ
ಅದರ ಪಕ್ಕಕ್ಕ ತನ್ನ
ಕೋಟು
ನೇತ ಹಾಕಿ ಸತ್ತ

ಎಷ್ಟೋ ದಿನದಿಂದ
ಆ ಕೋಟು
ಅಲ್ಲೇ ಅದಾವ, ಅದರೊಳಗ
ಹುಟಗೊಂಡಾವ ಹುಳಾ ಹುಪ್ಪಡಿ
ಕಿಸೇದಾಗ ಹೊಕ್ಕೊಂಡ ಕುಂತಾವ ಇಲಿ -
ಹೆಗ್ಗಣಾ, ಕೊಡತಾವ ಕಾಟ
ಗದ್ದಲಾ ಮಾಡಿ
ಕೆಡಸತಾವ ಆರೋಗ್ಯ
ಅಂದ ಒಬ್ಬ ವೈದ್ಯ

ಅದಕ ಕೋಟು
ಸುಟ್ಟ ಹಾಕಬೇಕು ಅಂದೆ
ಚಿಮಣಿ ಎಣ್ಣಿ ಕಡ್ಡಿ ಪೆಟಿಗಿ ತಂದೆ
ಆದರ ಮತ್ತೊಬ್ಬ ಬಂದ
ಕೋಟಿನ ಕಿಸೇದಾಗ
ಹೊಕ್ಕಿರತಾವ ಮಿಡಿನಾಗರ ಅಂದ

ಇಂದ
ಕೆಟ್ಟರೂ ನಮ್ಮ ಆರೋಗ್ಯ
ಆಗತಾ ಇಲ್ಲ ಕೋಟ ಮುಟ್ಟೋ ಧೈರ್ಯ
ಇನ್ನೇನ ಮಾಡೋದು ಅಂತ
ಗೊಂದಲದೊಳಗ ಮುಗೀತ ಬಂತು
ನನ್ನ ಆಯುಷ್ಯ
ನಾನೂ ಸಾಯೋವಾಗ
ಅವುಗಳ ಪಕ್ಕಕ್ಕ ಜಡದು ಒಂದ ಗೂಟ
ನೇತ ಹಾಕಬೇಕು ಅಂತ ಮಾಡೇನಿ
ನನ್ನ ಕೋಟು

**ಪ್ರೊ॥ ಧರಣೇಂದ್ರ ಕುರಕುರಿ**
ಉದಾಸಿ ನಗರ, ಶಿವಾನಿ ಹೊಟೇಲ್ ಹತ್ತಿರ
ಶಿರಸಿ - ೫೮೧ ೪೦೨

ಹುಡುಗಾಟವ? ಮೂಡಿಗೆರೆ ಡಾಕ್ಟ್ರ ಸರಿ, ಈ ಬಣಕಲ್ ಡಾಕ್ಟ್ರು ನಂಬಿದ್ರೆ ಆಗಕಿಲ್ಲ ನಡಿ'' ಎಂದು ಸಮಾಧಾನ ಹೇಳಿದನು. ತನ್ನ ಹೆಣ್ಣು ಮಕ್ಕಳಿಬ್ಬರಿಗೆ, ''ನೀವು ಅದೆಂತದೋ ಹೊಟ್ಟೆನೋವು ಅಂತಿರ್ತಿರಲ್ಲ? ಬನ್ನಿ, ದೊಡ್ಡಾಕ್ಟ್ರಿಗೆ ತೋರಿಸ್ದ್ರೆ ಸರಿ ಹೋಗ್ತದೇನೋ'' ಎಂದನು. ವರ್ಷವಿಡೀ ದುಡಿದು ಮಿಗಿಸಿದ ಹಣದಲ್ಲಿ ಹೊಸ ಬಟ್ಟೆ ಬರೆ ತೆಗೆದುಕೊಳ್ಳುವುದಕ್ಕೆ ಪ್ಯಾಟೆಗೆ ಹೋಗುವ ಕುಟುಂಬದ ಪರಿಯಂತಿತ್ತು ಈ ಹಂದಿ ಸ್ವಾಮಿಯ ಅನಾರೋಗ್ಯದ ಪ್ಯಾಟೆ ಪಯಣ.

''ಸ್ವಾಮಿನಾಥನ್, ಎರಡು ದಿನವಾದ್ರೂ ಅಡ್ಮಿಟ್ ಮಾಡಿ. ರಕ್ತ ಕ್ಯಾನ್ಸರ್ ಅಂತ ತೋರ್ತದೆ. ನಾವೆಲ್ಲ ಟೆಸ್ಟಿಂಗ್ ರಿಪೋರ್ಟ್ ಬಂದ ಮೇಲೆ ಟ್ರೀಟ್‌ಮೆಂಟ್ ಕೊಡಬಹುದೇ ವಿನಾ ಹಾಗೆಲ್ಲಾ ಟೆಸ್ಟ್ ಮಾಡಿದ ಕೂಡ್ಲೇ ಚಿಕಿತ್ಸೆ ಕೊಡೋದಿಕ್ಕೆ ಬರೋದಿಲ್ಲ'' ಎಂಬ ವೈದ್ಯರ ಅಭಿಪ್ರಾಯದಿಂದ ನಿಂತಲ್ಲೇ ಮರಗಟ್ಟಿದನು ಹಂದಿಸ್ವಾಮಿ. ''ಅಯ್ಯ, ಅವ್ವನ ಹೇಗಾದ್ರೂ ಮಾಡಿ ಉಳಿಸಿಕೊಳ್ಳುವ. ನಾವಿಬ್ರೂ ಜೊತೆಗಿರ್‍ತೀವಿ, ಎರಡು ದಿನ ಮಾತ್ರ ತಾನೇ? ನೀನು ಹೋಗಿ ಸಾಹುಕಾರ್‍ರ ಮನೇಲಿ ಸಾಲ ತಕ್ಕೊಂಡು ನಾಳೆ ಬಾ ಹೋಗು. ಗೇದು ತೀರಿಸಿದ್ರಾಯ್ತು'' ಎಂದು ಭಂಡ ಧೈರ್ಯ ತುಂಬಿದಳು ಹಿರಿಮಗಳು.

ಹಂದಿಸ್ವಾಮಿ ಎರಡು ಗಂಟೆಗೆ ಕೆಎಸ್ಆರ್‌ಟಿಸಿ ಬಸ್ಸಿನಿಂದ ಇಳಿದಿದ್ದೇ ತಡ, ''ಸ್ವಾಮಿ, ನಿನ್ನ ಹಂದಿ ಹೊರತೆಗೆದು ಸುಟ್ಟುಹಾಕಿದ್ರು ಮಾರಾಯ. ನೀರು ಗೀರು ಬೀಳ್ದಲೇ ಬೆಚ್ಚಗೆ ಮಣ್ಣು ಒಳಗೆ ಇತ್ತಲ್ಲ, ಅದಕ್ಕೇನೋ ಒಳ್ಳೇ ಒಣಗಿ ಒಣಗಿ ರಟ್ಟಂಗೆ ಗಟ್ಟಿಯಾಗಿತ್ತು. ಆ ಪಂಚಾಯಿತಿಯವ್ರಿಗೆ ಕರುಣೆ ಐತೋ, ಹೆಂಗೆ ಅಂತೀನಿ? ನಿನ್ನ ಪಾತ್ರೆ ಪಗಡ ಎಲ್ಲಾ ಹೊರಗೆ ಹಾಕಿ, ತಡಿಕೆ ಮನೆಗೂ ಬೆಂಕಿ ಇಟ್ಟಾರೇ ಕನ್ಲ... ನಾ ಹೇಳಿದ್ದು ಅಂತ ಯಾರಿಗೂ ಹೇಳ್ಬೇಡ. ಅತ್ಲಾಗೆ ಹೋಗ್ಬೇಡ, ಸಾಹಿತಿ ಗೌಡ್ರು ಅಂತೀಯಲ್ಲ. ಅವರನ್ನ ಹಿಡ್ಕೊಂಡು ಪೊಲೀಸ್ ಕಂಪ್ಲೇಂಟ್ ಕೊಡು. ಬಡ್ಡಿಮಕ್ಳು... ಪೊಲೀಸ್‌ನೋರು ಅರೀತಾರೆ!'' ಎಂದವನೆ ಹೊಲೇರ ಕೆಂಚ ಎಡಕ್ಕೆ-ಬಲಕ್ಕೆ ಕಣ್ಣಾಡಿಸಿ ಯಾರು ನೋಡಿಲ್ಲ ಎಂಬುದನ್ನು ಖಾತರಿ ಪಡಿಸಿಕೊಂಡವನೇ ಕಾಲುಕಿತ್ತನು.

ಸ್ವಾಮಿಗೆ ಜಂಘಾಬಲವೇ ಉಡುಗಿದಂತಾಯ್ತು. 'ಅಯ್ಯೋ!' ಎಂದು ಕೂಗಲೂ ಆಗದೆ ಗಂಟಲು ಒಣಗಿತು. ತತ್ತರಿಸಿ ಮುಗ್ಗರಿಸಿ ಮುನ್ನಡೆದನು. ತಡಿಕೆ ಮನೆಯ ಬಿದಿರಿನ ಬೊಂಬುಗಳು ಪಟಪಟ ಕಟಾರೆಂದು ಉರಿದು ಬೂದಿ ಮೇಲೆದ್ದು ಹೆಣದ ಈಡಿಗೆ ಬೆಂಕಿ ಇಟ್ಟಂಗೆ ಹೊಗೆ ಮುಗಿಲೇರುತ್ತಿತ್ತು. ಚ್ವಯೀ... ಎಂದು ಸುಟ್ಟುಹೋಗುತ್ತಿದ್ದುದು ತನ್ನ ಹಂದಿಪುಟ್ಟಿಯೇ ಇರಬೇಕೆಂದು ಸ್ವಾಮಿ ಊಹಿಸುತ್ತಲೇ ಕುಸಿದುಬಿದ್ದನು. ಕಣ್ಣಿನಲ್ಲಿ ರಕ್ತ ಸೋತಂತ ಅನುಭವ. ಕಷ್ಟವೆಂಬಂತೆ ಕಣ್ಣೀರು ತೊಟ್ಟಿಕ್ಕಿದವು. ಬಿಳಿ ಮುಗಿಲು ಹಂದಿಸ್ವಾಮಿ ಮನೆಯ ಉರಿಯಿಂದ ಎದ್ದ ಹೊಗೆಯಿಂದ ಕಪ್ಪಾದಂತೆ ತೋರಿತು. ಗುಡು... ಗುಡು... ಗುಡುಗಿ ಮುಂಗಾರು ಭೋರ್ಗರೆಯಿತು. ಹಂದಿಸ್ವಾಮಿ ಮಕಾಡೆ ಡಾಂಬರು ರಸ್ತೆ ಬದಿ, ಅದೇ... ಪುಟ್ಟಿ ಈ ಹಿಂದೆ ಹುಡಿ ಮಣ್ಣಾಡುತ್ತಿದ್ದ ಮರಳ ರಾಶಿಯ ಮೇಲೆ ಕಪ್ಪರಿಸಿಕೊಂಡನು. ಜೋರಾಗಿ ಸುರಿಯುತ್ತಿದ್ದ ಮಳೆಯ ನಡುವೆ ಇಳೆಯ ಮೂಕವೇದನೆ ಮರೆಮಾಚಿ ನಾಚಿತು. ಜನರ ಕೇಕೆ, ಸಂಭ್ರಮ ಮರುದಿನ ಪ್ರಮುಖ ಸುದ್ದಿಪತ್ರಿಕೆಗಳ ಮುಖಪುಟದಲ್ಲಿ ಮಿಂಚಿದವು.

**ಸಂಪತ್ ಬೆಟ್ಟಗೆರೆ**
ಕನ್ನಡ ಉಪನ್ಯಾಸಕರು, ಬೆಟ್ಟಗೆರೆ ಅಂಚೆ ಮತ್ತು ಗ್ರಾಮ
ಬಣಕಲ್ ಹೋಬಳಿ, ಮೂಡಿಗೆರೆ ತಾಲೂಕು, ಚಿಕ್ಕಮಗಳೂರು ಜಿಲ್ಲೆ

# ನೆಲಮೂಲ ಬದುಕಿನ ಹುಡುಕಾಟದ 'ಬುದ್ದಣ್ಣ'

ಡಾ॥ ಕೆ. ಎನ್. ದೊಡ್ಡಮನಿ

**ಡಾ॥** ಬುದ್ದಣ್ಣ ಹಿಂಗಮಿರೆಯವರು ಅಪ್ಪಟ ನೆಲಮೂಲ ಸಂವೇದನೆಯ ಕವಿ-ಚಿಂತಕ. ಸಮಗ್ರ ಸಾಹಿತ್ಯ ಕೃಷಿ ನೆಲಮೂಲ ಬದುಕಿನ ಕೊಂಡಿಯನ್ನು ಬೆಸೆದಿರುವಂತೆ, ಅವರ ಬದುಕೂ ಸಹಿತ ಸಾಂಸ್ಕೃತಿಕ ಸೇತುವೆ ಮೂಲಕ ರಚನೆ ಪಡೆದದ್ದು. ಅವರದು ಅಪ್ಪಟ ಜಾನಪದೀಯ ಬದುಕು. ಹೀಗಾಗಿ ಅವರ ಸಾಹಿತ್ಯದಿಂದ ಮಣ್ಣಿನ ಅಸಲಿ ವಾಸನೆ. ಬುದ್ದಣ್ಣ ಹಿಂಗಮಿರೆಯವರು ಈಗಿನ ಮಹಾರಾಷ್ಟ್ರದ ಕೊಲ್ಲಾಪೂರ ಜಿಲ್ಲೆ, ಶಿರೋಳ ತಾಲೂಕಿನ 'ರಾಜಾಪೂರ' ಎಂಬ ತೀರ ಹಿಂದುಳಿದ ಗ್ರಾಮದಲ್ಲಿ ಜನಿಸಿದವರು. ಕೃಷ್ಣಾ ನದಿಗೆ ಎದೆಯೊಡ್ಡಿರುವ ಈ ಗ್ರಾಮ ಈ ಮೊದಲು, ಅಂದರೆ ಭಾಷಾವಾರು ಪ್ರಾಂತಗಳ ರಚನೆಯ ಪೂರ್ವದಲ್ಲಿ, ಅಥಣಿ ತಾಲೂಕಿಗೆ ಒಳಪಟ್ಟ ಕನ್ನಡ ನಾಡಿನದೇ ಆಗಿತ್ತು. ಈ ಗ್ರಾಮ ಇಂದು ಮಹಾರಾಷ್ಟ್ರದ ಸೆರಗಿನಲ್ಲಿ ಮಲಗಿದ್ದರೂ ಇದರ ಉಸಿರಾಟ ಮಾತ್ರ ಇನ್ನೂ ಕನ್ನಡದ್ದೇ ಆಗಿದೆ. ಇಂಥ ಸೆರಗಿನ ಮಧ್ಯ ಬೆಚ್ಚಗಿನ ಭಾವನೆಗಳನ್ನು ಕಟ್ಟಿಕೊಂಡು ಕೃಷ್ಣಾ ನದಿಗೆ ಎದೆಯೊಡ್ಡಿ ಈಜಿ ಬಂದ ಬುದ್ದಣ್ಣ ಬಾಲ್ಯದಿಂದಲೇ ಉಭಯ ಸಂಸ್ಕೃತಿಗಳನ್ನು ಮೈಗೂಡಿಸಿಕೊಂಡು ಬೆಳೆದವರು. ಕೃಷ್ಣಾ ನದಿಯ ಆ ಕಡೆಯ ಊರು ಬುದ್ದಣ್ಣ ಅವರ ರಾಜಾಪೂರ, ಈಕಡೆಯ ಊರು ವಿಚಿತ್ರ ಹೆಸರಿನ ಮಂಗಾವತಿ. ಈ ಎರಡೂ ಊರುಗಳಲ್ಲಿ ಮೊದಲಿನಿಂದಲೂ ಸಾಂಸ್ಕೃತಿಕ ಅವಿನಾಭಾವ ಸಂಬಂಧ. ದೂರದ ಬೆಳಗಾವಿ ಕನ್ನಡ-ಮರಾಠಿಗರ ಸಂಘರ್ಷದಿಂದ ಹೊತ್ತಿ ಉರಿದರೂ ಈ ಭಾಗದ ಇಂಥ ಊರುಗಳು ಮಾತ್ರ ಉಕ್ಕಿ ಹರಿಯುವ ಕೃಷ್ಣೆಯ ಎದೆಯ ಮೇಲೆ 'ದೋಣಿ ಸಾಗಲಿ, ಮುಂದೆ ಹೋಗಲಿ, ದೂರ ತೀರವ ಸೇರುತ' ಎಂದು ಮಧುರವಾಗಿ ಉಲಿಯುತ್ತವೆ. 'ಕೃಷ್ಣಬಾಯಿ ನಾವಾನೆ ಚಾಂಗಬಲೊ' ಎಂದು ಉದ್ಘೋಷ ಹೇಳುತ್ತಿರುತ್ತವೆ. ಇಂತಹ ವಿಶಿಷ್ಟವಾದ ಸಾಂಸ್ಕೃತಿಕ ಒಡಲಿನಿಂದ ಬೆಳೆದು ಬಂದ ಬುದ್ದಣ್ಣ ಕೊನೆಯವರೆಗೆ ಆ ಸಂಸ್ಕೃತಿಯ ಪ್ರತಿರೂಪವಾಗಿ ಬದುಕಿದರೇ ಹೊರತು ಅಸಹಜತೆಗೆ ಅವಕಾಶ ನೀಡಲಿಲ್ಲ. ಕೃಷ್ಣಾ ನದಿ ತೀರದ ಆ ಧಾಡಿಸಿತನ, ಸಾಂಸ್ಕೃತಿಕ ಸಾಚಾತನ ಬುದ್ದಣ್ಣನವರಲ್ಲಿ ಯಾವತ್ತೂ ಜಾಗೃತಸ್ಥಿತಿಯಲ್ಲಿದ್ದು ಸೃಜನಶೀಲ ರೂಪ ಪಡೆದಿದೆ.

ಆ ಊರು ರಾಜಾಪೂರ, ಈ ಊರು ಮಂಗಾವತಿ. ಕೃಷ್ಣಾ ನದಿ ಈ ಎರಡೂ ಊರುಗಳಿಗೆ ಅಗಮ್ಯ ಚೇತನ. ಬುದ್ದಣ್ಣನವರ ಬಾಲ್ಯ, ಯೌವ್ವನ ಮತ್ತು ಒಂದಿಷ್ಟು ಮುಂದಿನ ದಿನಗಳ ಬದುಕು ಈ ಜೀವ ನದಿಯಲ್ಲಿಯೇ ಜೀವಂತಿಕೆ ಪಡೆದದ್ದು. ಮೂವತ್ತು ವರ್ಷಗಳ ಹಿಂದೆ ಈ ಎರಡೂ ಊರುಗಳ ಮಧ್ಯ ಈಗಿನಂತೆ ಸೇತುವೆ ಇರಲಿಲ್ಲ. ಆವಾಗ ಬೇಸಿಗೆಯಲ್ಲಿ ಈ ನದಿ ಮೈತೆರೆದುಕೊಂಡಾಗ ಎರಡೂ ಊರಿನವರು ನದಿಯ ಒಡಲೊಳಗೆ ಇಳಿದು ಕಲ್ಲು, ಉಸುಕುಗಳ ಮಧ್ಯ ಓಲಾಡಿ, ಹರಿಯುವ ಏಡಿಗಳನ್ನು, ಸುಳಿಯುವ ಮೀನುಗಳನ್ನು ಹಿಡಿದವರು. ಉಸುಕಿನೊಳಗಿನ ಚಿಪ್ಪುಗಳನ್ನು ಆಯ್ದುಕೊಂಡವರು. ಉಸುಕಿನ ಮೇಲೆ ಮನುಷ್ಯನ ಚಿತ್ತಾರ ಬರೆದವರು. ಈ ಊರಿನ ಹೆಣ್ಣುಮಕ್ಕಳು ಆ ದಡದಲ್ಲಿ, ಆ ಊರಿನ ಹೆಣ್ಣುಮಕ್ಕಳು ಈ ದಡದಲ್ಲಿ ನೀರಿಗೆ ಬಂದಾಗ - ಬಟ್ಟೆ ತೊಳೆಯುವಾಗ ತವರೂರಿನ ಉಭಯ ಕುಶಲೋಪರಿಯೊಂದಿಗೆ ಎದೆಭಾರ ಹಗುರಾಗಿಸಿಕೊಳ್ಳುತ್ತಿದ್ದರು. ಈ ಊರಿನ ಪಾರಿಜಾತ, ಸಣ್ಣಾಟ, ದೊಡ್ಡಾಟ, ಭಜನಿ ಆ ಊರಿನಲ್ಲಿ, ಆ ಊರಿನ ತಮಾಶ್ಯಾ, ವೇಳಾವಾ, ಲಾವಣಿಗಳು ಈ ಊರಿನಲ್ಲಿ ಪ್ರದರ್ಶನಗೊಂಡು ಇಬ್ಬರೂ ಚಪ್ಪಾಳೆ ತಟ್ಟುತ್ತಿದ್ದರು. ಕನ್ನಡ - ಮರಾಠಿಯ ಈ ಜನಪದ ಸಂಸ್ಕೃತಿಯ ಮಡಿಲಿನಲ್ಲಿಯೇ ಬುದ್ದಣ್ಣ ಅವರ ಕವಿ ಮನಸ್ಸು ಹದಗೊಂಡದ್ದು. ಈಗ ಎರಡೂ ಊರುಗಳ ನಡುವೆ ಸಾಂಸ್ಕೃತಿಕ ಕೊಂಡಿಯಾಗಿ ಸೇತುವೆ ಇದ್ದರೂ ಅಂದು ಇದ್ದ ಬೆಚ್ಚಗಿನ ಸಂಬಂಧಗಳು ಇಂದು ಉಳಿದಿಲ್ಲ. ತಡೆ ಹಿಡಿದ ನೀರಿನಲ್ಲಿ ಅಂದಿನ ಜೀವಂತಿಕೆ ಇಂದು ಉಳಿದಿಲ್ಲ. ಹೀಗಾಗಿ ಬುದ್ದಣ್ಣ ಇತ್ತೀಚೆಗೆ ಈ ಊರುಗಳಿಗೆ ಬಂದದ್ದು ತುಂಬ ಕಡಿಮೆ.

ಬೆಳ್ಳಿಚುಕ್ಕೆ ಮೂಡುವ ಮೊದಲು ಬುದ್ದಣ್ಣನವರ ತಾಯಿ ಬೀಸುವ ಕಲ್ಲಿನ ಮುಂದೆ ಕುಳಿತು ಪದಗಳನ್ನು ಕಟ್ಟಿ ಭಾವತುಂಬಿ ಹಾಡುತ್ತಿದ್ದರು. ಕೃಷಿಯ ವಿರಾಮದ ಸಮಯದಲ್ಲಿ ತಂದೆ ಊರಿನ ಮಹಾದೇವನ ಗುಡಿಯಲ್ಲಿ ಏಕತಾರಿಯ ತತ್ವಪದಗಳನ್ನು ಹೇಳುತ್ತಿದ್ದರು. ಕವಿ ಮನಸ್ಸಿನ ಬುದ್ದಣ್ಣನ ಮೇಲೆ ಈ ಜಾನಪದ ಧಾಟಿ, ಲಯ ಮತ್ತು ಸಂವೇದನೆಗಳು ಸಹಜವಾಗಿ ಪ್ರಭಾವ ಬೀರಿದ್ದವು. ಕವಿ ಮನಸ್ಸು ಜಾಗೃತಗೊಂಡಾಗ ಬಾಲಕ ಬುದ್ದಣ್ಣ ಊರ ಹೊರಗಿನ ಅಮೋಘಸಿದ್ಧನ ಗುಡಿಯ ಪ್ರಶಾಂತ ವಾತಾವರಣದಲ್ಲಿ ಏಕಾಂತನಾಗಿ ಕುಳಿತು ಆಗಲೇ ಕವಿತೆಗಳನ್ನು ರಚಿಸಲು ಪ್ರಾರಂಭಿಸಿದ್ದರು. ಈ ಕವಿಯಲ್ಲಿ ಮನಸ್ಸು ಬಾಲ್ಯದಲ್ಲಿಯೇ ಕಾವ್ಯ ಕಟ್ಟುವ ಸೃಜನಶೀಲತೆ ಪಡೆದುಕೊಂಡಿತ್ತು.

ಬುದ್ದಣ್ಣ ಹಿಂಗಮಿರೆಯವರು ಕರ್ನಾಟಕ ಮತ್ತು ಮಹಾರಾಷ್ಟ್ರದ ನೆಲದಲ್ಲಿ ಅಲೆದಾಡಿ ಉಭಯ ಸಂಸ್ಕೃತಿಯ ಸ್ವಾನುಭವ ಪಡೆದುಕೊಂಡಿದ್ದರು. ಪ್ರಾಥಮಿಕ ವಿದ್ಯಾಭ್ಯಾಸ ರಾಜಾಪೂರದ ಸರಕಾರಿ ಶಾಲೆಯಲ್ಲಿ, ಚಿಕ್ಕೋಡಿಯ ಮಾಧ್ಯಮಿಕ ಶಾಲೆಯಲ್ಲಿ, ಬೆಳಗಾವಿಯ ಲಿಂಗರಾಜ ಕಾಲೇಜಿನಲ್ಲಿ ಬಿ.ಎ., ಸಾಂಗ್ಲಿಯ ವಿಲಿಂಗ್ಟನ್ ಕಾಲೇಜಿನಿಂದ ಕನ್ನಡ ಎಂ.ಎ. ಪದವಿ ಪಡೆದುಕೊಂಡ ಇವರು, ಖ್ಯಾತ ವಿದ್ವಾಂಸರಾದ ರಂ. ಶ್ರೀ. ಮುಗಳಿ ಅವರ ಮಾರ್ಗದರ್ಶನದಲ್ಲಿ 'ಕನ್ನಡದಲ್ಲಿ ಶೋಕಕಾವ್ಯ' ಕುರಿತು ಸಂಶೋಧನೆ ನಡೆಸಿ ಪಿಎಚ್.ಡಿ. ಪಡೆದರು. ಕರ್ನಾಟಕ ವಿಶ್ವವಿದ್ಯಾಲಯದಿಂದ ರಶಿಯನ್ ಭಾಷೆಯಲ್ಲೂ ಎಂ.ಎ. ಪದವಿ ಪಡೆದುಕೊಂಡದ್ದು ವಿಶೇಷ. ಹೈಸ್ಕೂಲಿನಿಂದ ವಿಶ್ವವಿದ್ಯಾಲಯದವರೆಗೂ ಅಧ್ಯಾಪನ ವೃತ್ತಿ ನಿರ್ವಹಿಸಿದ ಬುದ್ದಣ್ಣ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ



**ರಶಿಯನ್ ಭಾಷೆಯಲ್ಲಿ ಪಾಂಡಿತ್ಯ ಪಡೆದ ಡಾ॥ ಬುದ್ದಣ್ಣ ಹಿಂಗಮಿರೆಯವರು ರಶಿಯಾದ ಮೈತ್ರಿ ವಿಶ್ವವಿದ್ಯಾಲಯದಲ್ಲಿ ೧೯೮೧ರಲ್ಲಿ ನಡೆದ ಅಂತರರಾಷ್ಟ್ರೀಯ ರಶಿಯನ್ ಭಾಷಾ ಸಮ್ಮೇಳನದಲ್ಲಿ ಭಾಗವಹಿಸಿದರು. ಯು.ಜಿ.ಸಿ.ಯ ಕಾರ್ಯಕ್ರಮದ ಮೇರೆಗೆ ೧೯೮೯ರಲ್ಲಿಯೂ ರಶಿಯಾ ದೇಶಕ್ಕೆ ಭೆಟ್ಟಿ ಕೊಟ್ಟರು. ರಶಿಯನ್ ಭಾಷೆಯ ಅಧ್ಯಯನದಿಂದಾಗಿ ಅವರಿಗೆ, ಟಾಲ್‌ಸ್ಟಾಯ್, ಗಾರ್ಕಿ, ಪುಷ್ಕಿನ್‌ರಂಥ ವಿಶ್ವವಿಖ್ಯಾತ ಸಾಹಿತಿಗಳ ಕೃತಿಗಳನ್ನು ಅವರ ಮೂಲಭಾಷೆಯಲ್ಲಿಯೇ ಓದಲು ಸಾಧ್ಯವಾಯಿತು. ಆ ಮೂಲಕ ಅವರು ಕೇವಲ ರಶಿಯನ್ ಭಾಷೆಯಿಂದ ಅನುವಾದಗಳನ್ನು ಮಾತ್ರ ಮಾಡದೆ ಅಲ್ಲಿನ ತತ್ವಸಿದ್ಧಾಂತಗಳಿಗೂ ಆಕರ್ಷಿತರಾದರು. ಹೀಗಾಗಿ ಅವರು ಬುದ್ಧ, ಬಸವನಿಂದ ಮಾರ್ಕ್ಸ್, ಲೆನಿನ್‌ವರೆಗೂ ಒಂದು ತಾತ್ವಿಕ ಸಂಬಂಧವನ್ನು ತಮ್ಮ ಚಿಂತನೆಗಳಲ್ಲಿ, ಕೃತಿಗಳಲ್ಲಿ ಅಭಿವ್ಯಕ್ತಗೊಳಿಸುತ್ತಾರೆ.**

ಅಧ್ಯಯನ ಪೀಠದಲ್ಲಿ ಪ್ರಾಧ್ಯಾಪಕರಾಗಿ, ಪೀಠದ ಅಧ್ಯಕ್ಷರಾಗಿ ನಿರಂತರ ೨೪ ವರ್ಷಗಳ ಅನುಭವ ಪಡೆದುಕೊಂಡರು.

ಬಾಲ್ಯದಿಂದಲೇ ಕನ್ನಡ-ಮರಾಠಿ ಭಾಷೆಗಳ ಪರಿಸರದಲ್ಲಿ ಬೆಳೆದ ಹಿಂಗಮಿರೆಯವರು ಮುಂದೆ ರಶಿಯನ್ ಭಾಷೆಯಲ್ಲಿ ಸ್ನಾತಕೋತ್ತರ ಪದವಿ ಪಡೆದು ಭಾರತದಿಂದ ಅಂದಿನ ಸೋವಿಯತ್ ಯೂನಿಯನ್‌ವರೆಗೆ ತಮ್ಮ ಅಧ್ಯಯನ, ಅನುಭವಗಳನ್ನು ವಿಸ್ತರಿಸಿಕೊಂಡರು. ಗ್ರಾಮೀಣ ರೈತ ಕುಟುಂಬದಿಂದ ಬಂದ ಬುದ್ದಣ್ಣ ಹಿಂಗಮಿರೆಯವರು ತಮ್ಮ ಬಾಲ್ಯದ ಮುಗ್ಧತೆಯನ್ನು ತಮ್ಮ ಬದುಕಿನುದ್ದಕ್ಕೂ ಉಳಿಸಿಕೊಂಡಿದ್ದರು. ಸದ್ದುಗದ್ದಲವಿಲ್ಲದೆ, ಗುಂಪು ಗಲಾಟೆಯಿಲ್ಲದೆ ಎರೆಹುಳುವಿನ ರೀತಿಯಲ್ಲಿ, ಇರುವೆ ಹುತ್ತ ಕಟ್ಟುವ ರೀತಿಯಲ್ಲಿ ತಮ್ಮ ಅಧ್ಯಯನ, ಅಧ್ಯಾಪನ ನಡೆಸಿಕೊಂಡು ಬದುಕಿದರು. ಅವರು ರಚಿಸಿದ ಸಾಹಿತ್ಯ ವೈವಿಧ್ಯತೆ ಹಾಗೂ ವಿಭಿನ್ನತೆಗಳಿಂದ ಕೂಡಿದೆ. ಅವರ ಆರು ಕವಿತಾ ಸಂಕಲನಗಳಲ್ಲಿ 'ಕೃಷ್ಣಾ ನದಿಯಿಂದ ವೋಲ್ಗಾ ನದಿಯವರೆಗೆ' ಎಂಬ ಇಂಗ್ಲಿಷ್ ಕವನಸಂಕಲನವೂ ಇದೆ. ಅವರ ಬಹುದಿನದ ಬಯಕೆಯಾಗಿದ್ದ 'ಬುದ್ಧ ಕಾವ್ಯದರ್ಶನ' ಎಂಬ ಕೃತಿಯೂ ಇದೆ. ಕರ್ನಾಟಕದ ಕೃಷ್ಣಾ ನದಿಯಿಂದ ರಶಿಯಾದ ವೋಲ್ಗಾ ನದಿಯವರೆಗಿನ ಪಯಣದಲ್ಲಿ ತಮ್ಮ ವೈವಿಧ್ಯಮಯ ಅನುಭವಗಳನ್ನು ಅಭಿವ್ಯಕ್ತಿಸಿದ್ದಾರೆ. ರಶಿಯನ್ ಭಾಷೆಯಿಂದ ಅನುವಾದಿಸಿದ ಏಳು ಕವನ ಸಂಕಲನಗಳನ್ನು ಪ್ರಕಟಿಸಿದ್ದಾರೆ. ಹತ್ತು ಅನುವಾದಿತ, ಸಂಪಾದಿತ ಕವನ ಸಂಕಲನ ಪ್ರಕಟಿಸಿದ್ದಾರೆ. 'ಕನ್ನಡದಲ್ಲಿ ಶೋಕ ಕಾವ್ಯ' ಎಂಬ ತಮ್ಮ ಸಂಶೋಧನಾ ಪ್ರಬಂಧವನ್ನೊಳಗೊಂಡು ನಾಲ್ಕು ವಿಮರ್ಶಾ ಕೃತಿಗಳನ್ನು ರಚಿಸಿದ್ದಾರೆ. ನಾಲ್ಕು ನಾಟಕಗಳು, ನಾಲ್ಕು ರೂಪಾಂತರ ನಾಟಕಗಳು ಹೀಗೆ ಒಟ್ಟು ೩೭ ಕೃತಿಗಳನ್ನು ರಚಿಸಿರುವ ಡಾ|| ಬುದ್ದಣ್ಣ ಹಿಂಗಮಿರೆಯವರು ಎಂದೂ ಪ್ರಚಾರಕ್ಕಾಗಿ ಪರದಾಡಿದವರಲ್ಲ, ಹಪಾಹಪಿಸಿದವರಲ್ಲ. 'ಯುಗಧ್ವನಿ ಪ್ರಕಾಶನ' ಎಂಬ ಪ್ರಕಾಶನವನ್ನು ಧಾರವಾಡದಿಂದಲೇ ಆರಂಭಿಸಿ ತಮ್ಮ ಕೃತಿಗಳಲ್ಲದೆ ಹೊಸ ಕವಿಗಳ ಕವಿತಾ ಸಂಕಲನಗಳನ್ನೂ ಪ್ರಕಟಿಸಿ ಪ್ರೋತ್ಸಾಹಿಸಿದ್ದಾರೆ.

ರಶಿಯನ್ ಭಾಷೆಯಲ್ಲಿ ಪಾಂಡಿತ್ಯ ಪಡೆದ ಡಾ|| ಬುದ್ದಣ್ಣ ಹಿಂಗಮಿರೆಯವರು ರಶಿಯಾದ ಮೈತ್ರಿ ವಿಶ್ವವಿದ್ಯಾಲಯದಲ್ಲಿ ೧೯೮೧ರಲ್ಲಿ ನಡೆದ ಅಂತರರಾಷ್ಟ್ರೀಯ ರಶಿಯನ್ ಭಾಷಾ ಸಮ್ಮೇಳನದಲ್ಲಿ ಭಾಗವಹಿಸಿದರು. ಯು.ಜಿ.ಸಿ.ಯ ಕಾರ್ಯಕ್ರಮದ ಮೇರೆಗೆ ೧೯೯೯ರಲ್ಲಿಯೂ ರಶಿಯಾ ದೇಶಕ್ಕೆ ಭೇಟಿ ಕೊಟ್ಟರು. ರಶಿಯನ್ ಭಾಷೆಯ ಅಧ್ಯಯನದಿಂದಾಗಿ ಅವರಿಗೆ, ಟಾಲ್‌ಸ್ಟಾಯ್, ಗಾರ್ಕಿ, ಪುಷ್ಕಿನ್‌ರಂಥ ವಿಶ್ವವಿಖ್ಯಾತ ಸಾಹಿತಿಗಳ ಕೃತಿಗಳನ್ನು ಅವರ ಮೂಲಭಾಷೆಯಲ್ಲಿಯೇ ಓದಲು ಸಾಧ್ಯವಾಯಿತು. ಆ ಮೂಲಕ ಅವರು ಕೇವಲ ರಶಿಯನ್ ಭಾಷೆಯಿಂದ ಅನುವಾದಗಳನ್ನು ಮಾತ್ರ ಮಾಡದೆ ಅಲ್ಲಿನ ತತ್ವ ಸಿದ್ಧಾಂತಗಳಿಗೂ ಆಕರ್ಷಿತರಾದರು. ಹೀಗಾಗಿ ಅವರು ಬುದ್ಧ, ಬಸವನಿಂದ ಮಾರ್ಕ್ಸ್, ಲೆನಿನ್‌ವರೆಗೂ ಒಂದು ತಾತ್ವಿಕ ಸಂಬಂಧವನ್ನು ತಮ್ಮ ಚಿಂತನೆಗಳಲ್ಲಿ, ಕೃತಿಗಳಲ್ಲಿ ಅಭಿವ್ಯಕ್ತ ಗೊಳಿಸುತ್ತಾರೆ.

ಡಾ|| ಬುದ್ದಣ್ಣ ಹಿಂಗಮಿರೆಯವರು ೧೯೭೪ರಲ್ಲಿಯೇ ದಲಿತ ಪತ್ರಿಕೆ ಆರಂಭಿಸುತ್ತಾರೆ. ರಾಜ್ಯದ ದಲಿತರ, ಶೋಷಿತರ, ಧ್ವನಿಯಾಗಿ ದಲಿತ ಪತ್ರಿಕೆ ಕೆಲಸ ಮಾಡುತ್ತದೆ. ೧೯೭೭ರಲ್ಲಿ 'ರಿಲೀಜ್' ಎಂಬ ಪತ್ರಿಕೆಯನ್ನೂ ಕೆಲವು ದಿನ ನಡೆಸಿದರು. ಒಟ್ಟು ಐದು ಸಂಶೋಧನಾ ಪ್ರಬಂಧಗಳಿಗೆ ಮಾರ್ಗದರ್ಶನ ಮಾಡಿದ ಹಿಂಗಮಿರೆಯವರ ಕುರಿತು ಎರಡು ಮಹಾಪ್ರಬಂಧಗಳು ರಚನೆಯಾಗಿವೆ.

ಕೃಷ್ಣಾ ನದಿ ದಡದಲ್ಲಿ ಕುಳಿತು ಮಗ್ಗಿ ಎಣಿಸುತ್ತಿದ್ದ ಬಾಲಕ ವಿಶ್ವವನ್ನೇ ಸುತ್ತಿ, ವಿವಿಧ ಅನುಭವ ಪಡೆದು ಅದನ್ನು ಕೃತಿಯಾಗಿಸಿ, ತಮ್ಮ ವಿದ್ಯಾರ್ಥಿಗಳಿಗೆ ಹಂಚಿ ಕಳೆದ ೧೯ನೇ ಆಗಸ್ಟ್, ೨೦೧೭ರಂದು ತನ್ನ ಎಂಬತ್ತನೇ ವಯಸ್ಸಿನಲ್ಲಿ ನಿಧನರಾದರು. ಅವರ ನಿಧನಕ್ಕೆ ಒಂದು ವರ್ಷ ಮುಂಚೆ ಅವರ ಪ್ರೀತಿಯ ಶಿಷ್ಯರು, ಸ್ನೇಹಿತರು ಬರೆದ ಅವರ ಕುರಿತ ಲೇಖನಗಳನ್ನೊಳಗೊಂಡ 'ಜನಪರ' ಎಂಬ ಅಭಿನಂದನ ಗ್ರಂಥವನ್ನು ಧಾರವಾಡದ ಸುಂದರ ಪ್ರಕಾಶನದ ಡಾ|| ಶಿವಾನಂದ ಗಾಳಿಯವರು ಪ್ರಕಟಿಸಿದ್ದಾರೆ. ಡಾ|| ಬುದ್ದಣ್ಣ ಹಿಂಗಮಿರೆಯವರು ನಿರಂತರ ಕ್ರಿಯಾಶೀಲತೆಗೆ ಮಾದರಿಯಾಗಿ ಬದುಕಿ ಹೋಗಿದ್ದಾರೆ.

ಡಾ|| ಕೆ. ಎನ್. ದೊಡ್ಡಮನಿ
ಕನ್ನಡ ಪ್ರಾಧ್ಯಾಪಕ, ಜೈನ ಮಹಾವಿದ್ಯಾಲಯ, ಪೀರನವಾಡಿ, ಮಚ್ಚೆ
ಬೆಳಗಾವಿ - ೫೯೦ ೦೧೪

## ಸೊತ್ತು

ಅನ್ನ ನೀಡುವ
ಭೂಮಿ ಕೊಟ್ಟು
ಮಣ್ಣು ತಿನ್ನಬೇಕೆ ?
ಹೇಳು ನೀರಾನಿ
ಯಾರಪ್ಪನ ಸೊತ್ತು
ಈ ಭೂಮಿ !

ಡಿ. ವಿ. ಬಡಿಗೇರ
ತೆಗ್ಗಿನಪೇಟೆ, ಗದಗ
ಬೆಟಗೇರಿ - ೫೮೨ ೧೦೨



## ಖುಷಿಯ ನೆನಪಿಂದ...

ಗೆಳತಿ, ನಿನ್ನ ನೆನಪಾಗಬಾರದೆಂದು
ಮನದೊಳಗಿನ ನಿನ್ನ ನೆನಪು ಕರಗಿಬಿಡಲೆಂದು
ಸುರಿವ ಮಳೆಗೆ ಮೈಯೊಡ್ಡಿದೆ,
ನಿನ ನೆನಪು ಕರಗಲಿಲ್ಲ, ನಿನ್ನ ಮರೆಯಲಾಗುತ್ತಿಲ್ಲ.

ಗೆಳತಿ, ನಿನ್ನ ನೆನಪಾಗಬಾರದೆಂದು
ಕಣ್ಣೊಳಗೆ, ನಿನ ಬಿಂಬ ತುಂಬದಿರಲೆಂದು,
ನಿನ ಕಂಡಾಗಲೆಲ್ಲಾ, ಕಣ್ಣ ಮರೆಮಾಚಿದೆ, ಕಣ್ಮುಚ್ಚಿದೆ,
ನಿನ ಬಿಂಬ ಮಾಸಲಿಲ್ಲ, ನಿನ್ನ ಮರೆಯಲಾಗುತ್ತಿಲ್ಲ.

ಗೆಳತಿ, ನಿನ್ನ ನೆನಪಾಗಬಾರದೆಂದು
ನಿನ ಕನಸು, ನನ್ನೊಳಗೆ ಮೂಡದಿರಲೆಂದು
ರಾತ್ರಿಯಿಡಿ ನಕ್ಷತ್ರಗಳ ಎಣಿಸಲು ಕುಳಿತೆ,
ನಕ್ಷತ್ರಗಳ ಎಣಿಕೆಯಿನ್ನೂ ಮುಗಿದಿಲ್ಲಾ, ನಿನ್ನನ್ನ ಮರೆಯಲಾಗುತ್ತಿಲ್ಲ.

ಗೆಳತಿ, ನಿನ್ನ ನೆನಪಾಗಬಾರದೆಂದು
ನೀನಿರುವ ಪುಟ್ಟ ಹೃದಯ ಸುಟ್ಟು ಹೋಗಿಬಿಡಲೆಂದು,
ಕುಡಿದೆ, ಕುಡಿದು ತೇಲಾಡಿದೆ,
ಉಹೂಂ, ನನ್ನೊಳಗಿನ ನೀನು ಸುಡಲಿಲ್ಲ, ಅದೇಕೋ ನಿನ್ನ ಮರೆಯಲಾಗುತ್ತಿಲ್ಲ.

ಧಣಾಪುರ ಕೃಷ್ಣಮೂರ್ತಿ
ಮನೆ ನಂ. ೧೧೭, ಹಿರೇಹಳ್ಳಿ ಅಂಚೆ, ತುಮಕೂರು ತಾಲೂಕು ಮತ್ತು ಜಿಲ್ಲೆ



# ಭಾಗೀರತಿ: ಮೌನರೋದನ ಸಂಕಟದ ಸಂಕಥನ

**ಕ**ನ್ನಡದಲ್ಲಿ ಅತಿ ಪ್ರಸಿದ್ಧವಾದ ಜನಪದ ಕಥನಗೀತೆ 'ಕೆರೆಗೆ ಹಾರ'ವನ್ನು ಆಧರಿಸಿ ತಯಾರಾದ 'ಭಾಗೀರತಿ' ಚಲನಚಿತ್ರ ಬಿಡುಗಡೆಯಾದ ಹಿಂದೆಮುಂದೆಯೇ 'ಕಠಾರಿ ವೀರ ಸುರಸುಂದರಾಂಗಿ', 'ಸ್ಪೈಡರ್‌ಮ್ಯಾನ್' ಮುಂತಾದ ಜನಪದ ಹಿನ್ನೆಲೆಯ ಚಿತ್ರಗಳು ಬಿಡುಗಡೆಯಾದವು. ಅನಂತರ 'ದಂಡು ಪಾಳ್ಯ' ಎಂಬ ಮಸಾಲೆಭರಿತ ಪಕ್ಕಾ ಕಮರ್ಷಿಯಲ್ ಚಿತ್ರ ಬಿಡುಗಡೆಯಾಯಿತು. ಒಂದೂವರೆ ತಿಂಗಳ ಅಂತರದಲ್ಲಿ ಮಂಗಳೂರಿನ ಮಾರ್ನಿಂಗ್ ಮಿಸ್ಟ್ ಹೋಂಸ್ಟೇ ಹೊಟೇಲಿನಲ್ಲಿ ಹಿಂದೂ ಧರ್ಮಸಂರಕ್ಷಕ ಗೂಂಡಾಗಳಿಂದ ಹೆಣ್ಣುಮಕ್ಕಳ ಮೇಲೆ ಅಮಾನುಷ ಹಲ್ಲೆ, ದೌರ್ಜನ್ಯದ ಪ್ರಕರಣ ನಡೆದು ನಾಗರಿಕ ಸಮಾಜ ತಲೆತಗ್ಗಿಸುವಂತಾಯಿತು. ಇಲ್ಲಿ ಹೆಣ್ಣುಮಕ್ಕಳ ಮಾನ ಮರ್ಯಾದೆಯನ್ನು ಬೀದಿಪಾಲು ಮಾಡಿದ ಹಿಂಸಾನಂದ ಘಟನೆ ನಡೆದಿದ್ದರೆ ಅದು 'ದಂಡು ಪಾಳ್ಯ' ಸಿನಿಮಾ ಪ್ರಭಾವದಿಂದ. ಸರ್ಜಾಪುರದಲ್ಲಿರುವ ಅಂಬೇಡ್ಕರ್ ಕಾಲನಿಯ ಶಶಿಕುಮಾರ್ ಎಂಬ ಹದಿನಾರು ವರ್ಷದ ಯುವಕ ಬರ್ಬರವಾಗಿ ಕೊಲೆಯಾಗಿದ್ದ. 'ಸ್ಪೈಡರ್‌ಮ್ಯಾನ್' ಮತ್ತು 'ಸುರಸುಂದರಾಂಗಿ' ಚಿತ್ರಗಳು ಜನಪದ ಸತ್ವ ಮತ್ತು ಮೌಲ್ಯವನ್ನು ಮಾರುಕಟ್ಟೆಯ ಸರಕನ್ನಾಗಿ ಪರಿವರ್ತಿಸಿದ್ದರೆ, 'ಭಾಗೀರತಿ' ಚಿತ್ರವು ಅದೇ ಜನಪದ ಸತ್ವ ಮತ್ತು ಮೌಲ್ಯವನ್ನು ಸಾಮಾಜಿಕ - ರಾಜಕೀಯ ಸಂದರ್ಭಕ್ಕೆ ಸಮಕಾಲೀನಗೊಳಿಸುವ ಪುನರ್ ಸೃಷ್ಟಿಯಾಗಿದೆ. ಮಹಿಳಾ ಸಂಕಷ್ಟಗಳ ಸಂಕಥನವಾಗಿದೆ.

ಬಿ. ಕೆ. ಶ್ರೀನಿವಾಸ್ ನಿರ್ಮಾಣದ 'ಭಾಗೀರತಿ' ಚಲನಚಿತ್ರವನ್ನು ಖ್ಯಾತ ಸಾಹಿತಿ, ನಾಡೋಜ, ಡಾ|| ಬರಗೂರು ರಾಮಚಂದ್ರಪ್ಪ ನಿರ್ದೇಶಿಸಿದ್ದಾರೆ. ಸುಂದರ ಹೊರಾಂಗಣ, ಪಾತ್ರಕ್ಕೆ ತಕ್ಕ ನಟರ ಆಯ್ಕೆ, ಉತ್ತಮ ಹಿನ್ನೆಲೆ ಸಂಗೀತ, ಇದೆಲ್ಲಕ್ಕೂ ಕಳಸವಿಟ್ಟಂತಹ ಛಾಯಾಗ್ರಹಣ, ಚಿಕ್ಕವೂ ಚೊಕ್ಕವೂ ಆದ ಮಾತುಗಳು ಮತ್ತು ಹಾಡುಗಳು ಚಿತ್ರದ ಅಂದವನ್ನು ಹೆಚ್ಚಿಸಿವೆ. ಮೂಢನಂಬಿಕೆಯ ಅಂಶವಿರುವ ಕತೆಯನ್ನು ಆಯ್ಕೆ ಮಾಡಿಕೊಂಡು ಅದನ್ನು ಸಮಕಾಲೀನ ಸಂದರ್ಭದಲ್ಲಿ ವಿಶ್ಲೇಷಿಸುವ ಪ್ರಯತ್ನ ಅಷ್ಟು ಸುಲಭದ್ದಲ್ಲ. ಇಂಥ ಸವಾಲಿನ ಕೆಲಸವನ್ನು ಬಹಳ ಸೂಕ್ಷ್ಮವೂ ಸಮರ್ಥವೂ ಆದ ರೀತಿಯಲ್ಲಿ ಬರಗೂರು ಅವರು ನಿರ್ವಹಿಸಿ ಜನಮೆಚ್ಚುಗೆ ಪಡೆದಿದ್ದಾರೆ. 'ಕೆರೆಗೆ ಹಾರ'ದ ಬದಲು 'ಭಾಗೀರತಿ' ಎಂಬ ಹೆಸರಿಟ್ಟು ಅದನ್ನು ಮರುಸೃಷ್ಟಿಗೊಳಿಸುವ ಪ್ರಯತ್ನಕ್ಕೆ ಸದಭಿರುಚಿಯ ಪ್ರೇಕ್ಷಕರು ಸಮ್ಮತಿಯ ಮುದ್ರೆ ಒತ್ತಿ ನೂರು ದಿನ ಪ್ರದರ್ಶನಗೊಳ್ಳಲು ಕಾರಣರಾಗಿದ್ದಾರೆ.

ನೂರು ದಿನ ಪ್ರದರ್ಶನಗೊಂಡಿದೆ ಎಂಬುದಷ್ಟೇ ಭಾಗೀರತಿಯ ಹೆಗ್ಗಳಿಕೆಯಲ್ಲ. ಸಿನಿಮಾದ ಆಂತರ್ಯದಲ್ಲಿ ಅಂತಃಸತ್ವವಿದೆ. ಅಭಿವ್ಯಕ್ತಿಗೊಂಡಿರುವ ಸಂಕಟದಲ್ಲಿ ತೀವ್ರತೆಯಿದೆ. ಸ್ತ್ರೀಪಾತ್ರಗಳು ತಮ್ಮ ತಮ್ಮ ಮಿತಿಯಲ್ಲೇ ಪುರುಷಪಾತ್ರಗಳ ವಿರುದ್ಧ, ವ್ಯವಸ್ಥೆಯ ವಿರುದ್ಧ ದನಿ ಎತ್ತುತ್ತವೆ. ಆಡುವ ಮಾತುಗಳು ಕಾವ್ಯಮಯವಾಗಿವೆ. ವ್ಯವಸ್ಥೆಯ ದೌರ್ಜನ್ಯವನ್ನು ಒಪ್ಪಿಕೊಳ್ಳುತ್ತಲೇ ಅದನ್ನು ಮೀರುವ ಪ್ರಯತ್ನವನ್ನು ಮಾಡುತ್ತವೆ. ಕಲ್ಲನ ಕೇರಿಯ ಮಲ್ಲನ ಗೌಡ ಕೂಡ ನೋವು-ಸಂಕಟಗಳನ್ನು ಅನುಭವಿಸುವುದರ ಮೂಲಕ ನಕಾರಾತ್ಮಕ ನೆಲೆಗೆ ತಲುಪಿದರೂ ಸಾವಿರಾರು ವರ್ಷಗಳ ನಂಬಿಕೆಗೆ ನಾಲಗೆಯಾದ ಜೋಯಿಸನ ಮಾತಿಗೆ ಒಪ್ಪಿಕೊಳ್ಳಲೇಬೇಕಾಗುತ್ತದೆ. ಜೋಯಿಸನೂ ಕೂಡ ಇರುವ ನಂಬಿಕೆಯ ವಿಷಯವನ್ನು ಮಾತ್ರ ಹೇಳುತ್ತಾನೆ. ಮೂಲ ಕತೆಯಲ್ಲಿಲ್ಲದ ಅನೇಕ ಅಂಶಗಳನ್ನು ಬರಗೂರರು ಈ ಸಿನಿಮಾದಲ್ಲಿ ವಿಸ್ತರಿಸಿದ್ದಾರೆ. ಮೂಲ ಕತೆಯಲ್ಲಿರುವ ಮಾದೇವರಾಯ ದಂಡಿನಲ್ಲಿದ್ದಾನೆ ಎಂಬ ಒಂದು ಸಾಲನ್ನೇ ವಿಸ್ತರಿಸಿ ಅರಮನೆಯ ದೃಶ್ಯಗಳನ್ನಾಗಿ ಮಾಡಿ ಅಲ್ಲಿ ಮಾದೇವರಾಯನ ಇರುವಿಕೆಯನ್ನು, ಅವನಿಗಿರುವ ಊರಿನ ಪ್ರೀತಿಯನ್ನು ಸಾಬೀತುಪಡಿಸುತ್ತಾರೆ. ಮೊದಮೊದಲು ಪಾಳೆಯಗಾರಿಕೆಯ ಪ್ರತಿರೂಪದಂತಿದ್ದ ರಾಜ ತನ್ನ ರಾಣಿಯ ಮಾತಿಗೆ ಓಗೊಟ್ಟು ಮಾದೇವರಾಯನ ಬಗ್ಗೆ ಮಾನವೀಯತೆಯಿಂದ ವರ್ತಿಸುತ್ತಾನೆ. ರಾಜನ ದರ್ಪದ ಬಗ್ಗೆ, ಅವನ ಅಧಿಕಾರದ ಅಹಮ್ಮಿನ ಬಗ್ಗೆ ಮೊದಲ ವಿರೋಧದ ದನಿ ರಾಣಿಯಿಂದಲೇ ಆರಂಭವಾಗಿ ನಂತರದ ದೃಶ್ಯಗಳಲ್ಲಿ ಎಲ್ಲಾ ಹೆಣ್ಣು ಪಾತ್ರಗಳು ತಮ್ಮತಮ್ಮ ಮಿತಿಯಲ್ಲೇ ಪುರುಷಪ್ರಧಾನ ವ್ಯವಸ್ಥೆಯ ವಿರುದ್ಧ ದನಿ ಎತ್ತುತ್ತವೆ. ಹೀಗಾಗಿ ಆರಂಭದ ದೃಶ್ಯದಿಂದಲೇ ಒಂದು ಪ್ರತಿರೋಧದ ಎಳೆ ಸಿನಿಮಾದಲ್ಲಿ ಸ್ಥಾಯಿಯಾಗಿ ಅಂತರ್ಗತವಾಗಿದೆ.

**ಡಾ|| ರಂಗಾರೆಡ್ಡಿ ಕೋಡಿರಾಂಪುರ**

ಮೂಲ ಕತೆಯಲ್ಲಿ ಕಲ್ಲನಕೇರಿ ಮಲ್ಲನಗೌಡ ಕೆರೆಯನ್ನು ಕಟ್ಟಿಸುತ್ತಾನೆ ಎಂಬ ವಿವರವಿದ್ದರೆ ಬರಗೂರರ ಈ ಸಿನಿಮಾದಲ್ಲಿ, ಕೆರೆ ಕಟ್ಟಿಸಲು ಭಾಗೀರತಿ ಮಾದೇವರಾಯನಿಗೆ ಪ್ರೇರಣೆಯಾಗುತ್ತಾಳೆ. ಮಾದೇವರಾಯನಿಗೆ ಯುದ್ಧ, ಕತ್ತಿ, ಆಕ್ರಮಣಗಳ ಬದಲು ಕೆರೆಯನ್ನು ಕಟ್ಟಿಸಿ ಬಡವರಿಗೆ ಉಪಕಾರವಾಗುತ್ತದೆ ಎಂಬ ಮಾತನ್ನು ಭಾಗೀರತಿ ಹೇಳಿದಾಗ ಆತನಿಗೆ ಅದು ಸರಿ ಎನ್ನಿಸಿ ಅದಕ್ಕೆ ತನ್ನ ತಂದೆಯ ಒಪ್ಪಿಗೆಯನ್ನು, ದೊರೆಗಳ ಅನುಮತಿಯನ್ನು ಪಡೆದು ಕೆರೆ

ಕಟ್ಟಿಸಲು ಆರಂಭಿಸುತ್ತಾನೆ. ಈ ಕೆರೆ ಕಟ್ಟಿಸುವ ಕೆಲಸದಲ್ಲಿ ಭಾಗೀರತಿಯೂ ಭಾಗವಹಿಸಿದಾಗ ಅವರಲ್ಲಿ ಪ್ರೇಮಾಂಕುರವಾಗಿ ಅದು ಮದುವೆಯ ಹಂತದವರೆಗೂ ಬಂದು ಮುರಿದುಬೀಳುತ್ತದೆ. ಆಗ ಪ್ರೇಮಿಗಳಿಬ್ಬರೂ ತಾವೇ ಕಟ್ಟಿದ ಕೆರೆಯಲ್ಲಿ ಪ್ರಾಣತ್ಯಾಗ ಮಾಡಲು ನಿರ್ಧರಿಸಿದಾಗ ಮಾದೇವರಾಯನ ತಂದೆ ಮತ್ತು ಭಾಗೀರತಿಯ ಮನೆಯವರು ಮದುವೆಗೆ ಒಪ್ಪಿಗೆ ನೀಡಿ, ದೊರೆಗಳನ್ನೂ ಆ ಮದುವೆಗೆ ಬರುವಂತೆ ಮಾಡಿ ಕೆರೆಯನ್ನೇ ಸಾಕ್ಷಿಯನ್ನಾಗಿಟ್ಟು ಕೆರೆಯಂಗಳದಲ್ಲೇ ಮದುವೆ ಮಾಡಿಬಿಡುತ್ತಾರೆ. ದೊರೆಗಳು ಊರಿಗೆ ಬಂದಾಗ ಅವರನ್ನು ಸ್ವಾಗತಿಸುವ ಹಾಡಿನ ಸಂದರ್ಭದಲ್ಲಿ ವಯಸ್ಸಾದ ಹೆಂಗಸೊಬ್ಬಳು ರಾಜನಿಗೆ ಆಶೀರ್ವಾದ ಮಾಡಲು ಬರುತ್ತಾಳೆ. ಆಗ ದೊರೆ ಆಕೆಗೆ ತನ್ನ ಕೈ ಬೆರಳಿನ ಉಂಗುರವನ್ನು ಉಡುಗೊರೆಯಾಗಿ ನೀಡಲು ಹೋದಾಗ ಆ ವೃದ್ಧ ಹೆಂಗಸು ಆ ಉಡುಗೊರೆಯನ್ನು ನಯವಾಗಿ ನಿರಾಕರಿಸುತ್ತಾಳೆ. ಇಡೀ ಸಿನಿಮಾದಲ್ಲಿ ಇದು ಎದ್ದು ಕಾಣುವಂಥ ಘಟನೆಯಲ್ಲದಿದ್ದರೂ ದೊರೆಯ ಶ್ರೀಮಂತಿಕೆಯ ದರ್ಪಕ್ಕೆ ತಣ್ಣನೆಯ ಪ್ರತಿಭಟನೆಯಾಗಿದೆ. ಹಳ್ಳಿಯವರಿಗೆ ಕೆರೆ-ಕುಂಟೆ, ಮಳೆ-ಬೆಳೆ ಇವುಗಳು ಮುಖ್ಯವೇ ಹೊರತು ಬಂಗಾರವಲ್ಲ ಎಂಬ ಧ್ವನಿ ಇದರಿಂದ ಹೊರಡುತ್ತದೆ. ಇವರಿಬ್ಬರ ಮದುವೆಗೆ ಆಗಮಿಸಿದ ದೊರೆಯೂ ಸರಳ ವಿವಾಹದ ಪ್ರಾಮುಖ್ಯತೆಯನ್ನು ಹೇಳಿ, ಪ್ರತಿ ಊರಿಗೂ ಕೆರೆ ಕಟ್ಟಿಸುವ ನಿರ್ಧಾರ ಕೈಗೊಳ್ಳುತ್ತಾನೆ. ಆರಂಭದಲ್ಲಿ ದರ್ಪದಿಂದಿದ್ದ ರಾಜ ಕೆರೆಯಲ್ಲಿ ಪ್ರೇಮಿಗಳಿಬ್ಬರ ಮದುವೆಯಾಗುವ ವೇಳೆಗೆ ಸಹನೀಯ ಮನುಷ್ಯನಾಗಿ ಮಾನವೀಯತೆ ಮೆರೆಯುತ್ತಾನೆ. ಯುದ್ಧದ ಭೀಕರ ದುರಂತಗಳನ್ನು ತೊರೆದು ಕೆರೆ-ಬಾವಿ ಮುಂತಾದ ಜನೋಪಯೋಗಿ ಕೆಲಸಗಳಲ್ಲಿ ದೊರೆಗಳು ತೊಡಗಬೇಕು ಎಂಬ ಆಶಯ ಈ ಸನ್ನಿವೇಶದಲ್ಲಿ ಎದ್ದುಕಾಣುತ್ತದೆ.




ಮೊದಲರ್ಧ ಭಾಗದ ಕತೆಯಲ್ಲಿ ಕೆರೆಯ ನಿರ್ಮಾಣ, ಅದರ ಅಂಗವಾದ ಪ್ರೇಮಾಂಕುರ, ಬಡತನ - ಶ್ರೀಮಂತಿಕೆಯ ಪ್ರತಿಷ್ಠೆಯಿಂದ ಮದುವೆಗೆ ವಿರೋಧ, ಪುರುಷಾಧಿಕಾರದ ದರ್ಪ, ಅಹಮಿಕೆಗಳು ತುಂಬಿದ್ದರೆ ಕೊನೆಯರ್ಧ ಭಾಗದ ಕತೆಯಲ್ಲಿ 'ಕೆರೆಗೆ ಹಾರ'ದ ಕತೆಯ ಒಳಗಿರುವ ಸೂಕ್ಷ್ಮಾತಿ ಸೂಕ್ಷ್ಮ ಅಂಶಗಳನ್ನು ಹೊರತೆಗೆಯಲಾಗಿದೆ. ಬಲಿಕೊಡಬೇಕು ಎಂಬ ನಂಬಿಕೆಯ ನೆಲೆಯಿಂದ ಹೊರಟ ಮೂಲ ಕತೆಯಲ್ಲಿ ಭಾಗೀರತಿ ಮತ್ತವಳ ಗಂಡ ಮಾದೇವರಾಯ ಮಾತ್ರ ದುಃಖ, ತಳಮಳ ವ್ಯಕ್ತಪಡಿಸುತ್ತಾರೆ. ಆದರೆ ಈ ಸಿನಿಮಾದಲ್ಲಿ ತಂದೆ ಮಲ್ಲನಗೌಡರಾದಿಯಾಗಿ ಮನೆ, ತವರುಮನೆಯಲ್ಲಿರುವವರೆಲ್ಲ ಮೂಕವೇದನೆ ಅನುಭವಿಸುತ್ತ ನಂಬಿಕೆಯ ನೇಣಿನಿಂದ ಹೊರಬರಲು ಪ್ರಯತ್ನಿಸುತ್ತಾರೆ. ಹಿರಿಸೊಸೆ ಮಲ್ಲವ್ವನನ್ನು ಹಾರ(ಬಲಿ) ಕೊಡಬೇಕು ಎಂದು ಜೋಯಿಸರು ಹೇಳಿದಾಗ ಅದಕ್ಕೆ ಗೌಡ - ಗೌಡತಿಯರು ಒಪ್ಪದೆ ಕಿರಿ ಸೊಸೆ ಭಾಗೀರತಿಯನ್ನು ಹಾರ ಕೊಡಲು ಒಲ್ಲದ ಮನಸ್ಸಿನಿಂದ ಮುಂದಾಗುತ್ತಾರೆ. ಹಿರಿಸೊಸೆ ಮಲ್ಲವ್ವನಿಗೆ ತಾನು ಹಾರವಾಗ ಬೇಕಾಗಿರುವ ವಿಷಯ ತಿಳಿಯುತ್ತಲೇ ಸಂಕಟ ಅನುಭವಿಸುತ್ತಲೇ ಮಾನಸಿಕವಾಗಿ ಸಿದ್ಧವಾಗುತ್ತಾಳೆ. ಅವಳಿಗೆ ತಾನು ಬಲಿಯಾಗಬೇಕಾದ ಜಾಗದಲ್ಲಿ ಭಾಗೀರತಿ ಬಲಿಯಾಗುತ್ತಿದ್ದಾಳೆ ಎಂಬುದು ತಿಳಿದಿರುವುದಿಲ್ಲ, ಶಾಸ್ತ್ರದ ಪ್ರಕಾರ ಅಕ್ಕ ಬಲಿಯಾಗ ಬೇಕಾಗಿತ್ತು ಎಂಬುದು ಭಾಗೀರತಿಗೆ ತಿಳಿದಿರುವುದಿಲ್ಲ, ಗೌಡ - ಗೌಡತಿ ಮಾತನಾಡುವಾಗ ಇಬ್ಬರೂ ತಮ್ಮತಮ್ಮ ವಿಷಯ ಬಂದಾಗ ಕೇಳಿಸಿಕೊಳ್ಳುತ್ತಾರೆ ಎಂಬ ದೃಶ್ಯ ಸಂಯೋಜನೆಯಿದೆ. ಇಲ್ಲಿಂದ ಸೊಸೆಯರಿಬ್ಬರೂ ಸಂಕಟದ ತುರೀಯಾವಸ್ಥೆಯನ್ನು ತಲುಪುತ್ತಾರೆ. ಭಾಗೀರತಿ ತೌರಿಗೆ ಹೋಗುವುದು, ಅಲ್ಲಿ ತಂದೆ ತಾಯಿಗೆ ವಿಷಯ ತಿಳಿಸದೆ ಮುಚ್ಚಿಟ್ಟು ಗೆಳತಿಯ ಹತ್ತಿರ ತನ್ನ ಅಂತರಂಗವನ್ನು ತೆರೆದು ತೋರಿಸುವುದು ಎಲ್ಲಾ ಮೂಲ ಕತೆಯಲ್ಲಿದ್ದಂತೆಯೇ ಇದೆ. ಇವಳ ನೋವಿನ ಅಂತರಾಳವನ್ನು ಕಂಡ ಗೆಳತಿ ಸಿಟ್ಟಿನಿಂದ ಹೆಣ್ಣನ್ನು ಬಲಿ ಕೇಳೋ ಈ ಕೆರೆ 'ಯಾವುದೋ ಗಂಡು ಕೆರೆಯೇ ಇರಬೇಕು' ಎಂದು ಸಂಕಟದ ತೀವ್ರತೆಯನ್ನೆಲ್ಲ ಸ್ಫೋಟಿಸುತ್ತಾಳೆ. ಮೂಲಕತೆಯಲ್ಲಿ ಇಂಥದ್ದೊಂದು ಬೆಳವಣಿಗೆ ಇಲ್ಲ.

ಮಾದೇವರಾಯನ ಅಣ್ಣ ಜೋಯಿಸರ ಬಳಿಗೆ ಹೋಗಿ ಭಾಗೀರತಿಯನ್ನು ಬಲಿಕೊಡುವಂತೆ ಮಾಡಿದ್ದು ಸರಿಯೆ ? ಎಂದು ಸಿಟ್ಟಿನಿಂದ ಕೇಳುತ್ತಾನೆ. ಅದಕ್ಕೆ ಜೋಯಿಸ ಸಿಟ್ಟಿನಿಂದ, ''ಇದು ನಂಬಿಕೆಯ ಪ್ರಶ್ನೆ. ನಂಬಿಕೆಗೆ ನಾನು ನಾಲಗೆಯಾಗಿದ್ದೇನೆ ಅಷ್ಟೆ'' ಎನ್ನುತ್ತಾನೆ. ''ನಾನು ಒಂದು ಸಲಹೆ ಕೊಟ್ಟೆ. ಅಷ್ಟೇ ಹೊರತು ಬಲಿಕೊಡಲೇಬೇಕು ಎಂದು ಒತ್ತಾಯವನ್ನೇನೂ ಮಾಡಲಿಲ್ಲ'' ಎನ್ನುವುದರ ಮೂಲಕ ಜೋಯಿಸರು ಇದರಲ್ಲಿ ತನ್ನ ತಪ್ಪೇನೂ ಇಲ್ಲ ಎಂದು ಪ್ರತಿಪಾದಿಸುತ್ತಾರೆ. ಈ ಸಂದರ್ಭದಲ್ಲಿ ಜೋಯಿಸರಿಗೆ ಸಾವಿನ ಸಂಕಟ, ತಳಮಳ, ನೋವಿನ ನೆಲೆಗಳು ಉಂಟಾಗುವುದಿಲ್ಲ, ಯಾಕೆಂದರೆ ಆತನ ಮನೆಯವರಾರೂ ಬಲಿಯಾಗುವ ಸಂದರ್ಭ ಒದಗಿಬಂದಿಲ್ಲವಲ್ಲ! ಆದ್ದರಿಂದ ಆತ ವಾದ ಮಂಡಿಸುತ್ತಾನೆಯೇ ಹೊರತು ಅವನೇನೂ ಖಳನಾಯಕನಲ್ಲ, ಕೆಲವು ಪ್ರಸಿದ್ಧ ವಿಮರ್ಶಕರಿಗೆ ಇದನ್ನು ಜೀರ್ಣಿಸಿಕೊಳ್ಳಲಾಗಿಲ್ಲ. ಇಲ್ಲಿ ಮೂಢನಂಬಿಕೆ ಖಳನಾಯಕನ ಸ್ಥಾನದಲ್ಲಿದೆಯೇ ಹೊರತು ಯಾವ ವ್ಯಕ್ತಿಗಳಲ್ಲ, ಆವೊತ್ತಿನ ಕಾಲಕ್ಕೆ ಅಕ್ಷರ - ವಿದ್ಯೆಗಳು ಗೊತ್ತಿದ್ದದ್ದು ಆ ವರ್ಗದವರಿಗೆ ಮಾತ್ರ. ಆದ್ದರಿಂದ ಅವರು ನಂಬಿಕೆಗಳಿಗೆ ನಾಲಗೆಯಾಗಿದ್ದಾರೆ; ಸಂಪ್ರದಾಯಗಳಿಗೆ ತೌರುಮನೆಯಾಗಿದ್ದಾರೆ.

ಭಾಗೀರತಿಯನ್ನು ಕೆರೆಗೆ ಹಾರವಾಗಿಸುವ ಸಂದರ್ಭದಲ್ಲಿ ಅಲ್ಲೇ ಬಿಟ್ಟಿದ್ದ ಬಂಗಾರ ಬಟ್ಟಲನ್ನು ತರಲು ಭಾಗೀರತಿಯನ್ನು ಕಳಿಸಬೇಕೆನ್ನುವ ನಿರ್ಧಾರ ಗೊತ್ತಿದ್ದದ್ದು ಜೋಯಿಸ ಮತ್ತು ಗೌಡರಿಗೆ ಮಾತ್ರ. ಆದರೆ ಅದನ್ನು ತರಲು ಗೌಡನ ಹಿರಿ ಸೊಸೆಯೂ ಹೋಗುತ್ತೇನೆ ಎನ್ನುತ್ತಾಳೆ. ಭಾಗೀರತಿ ಮತ್ತು ಮಲ್ಲವ್ವ ಇಬ್ಬರಲ್ಲೂ ತಳಮಳ ಶುರುವಾದಾಗ ಭಾಗೀರತಿ ತಾನೇ ಬಟ್ಟಲು ತರಲು ಹೋಗುತ್ತಾಳೆ. ಆಗಿನ ಸಂದರ್ಭದ ಚಿತ್ರೀಕರಣದಲ್ಲಿ ಇಡೀ ಗೌಡರ ಕುಟುಂಬದವರೆಲ್ಲ ತಳಮಳ, ಸಂಕಟದಿಂದ ಒದ್ದಾಡುತ್ತಾರೆ. ಅನಂತರ ಮೂಲ ಕತೆಯಲ್ಲಿ ಹಾರವಾದಂತೆಯೇ ಭಾಗೀರತಿ ಕೆರೆಗೆ ಹಾರವಾಗುತ್ತಾಳೆ. ಈ ಸಂದರ್ಭದಲ್ಲಿ ಭಾಗೀರತಿ ಆ ಸಾವಿನಿಂದ ಹೊರಬರುವ ಒದ್ದಾಟವನ್ನು ಇನ್ನಷ್ಟು ಪರಿಣಾಮಕಾರಿಯಾಗಿ ಚಿತ್ರೀಕರಿಸಲು ಸಾಧ್ಯವಿತ್ತು ಎಂಬುದನ್ನು ಬಿಟ್ಟರೆ ಇಡೀ ಸಿನಿಮಾ ಸಂಕಟದ ಸಂಕಥನವಾಗಿದೆ ಎಂಬುದನ್ನು ಅಲ್ಲಗಳೆಯಲು ಸಾಧ್ಯವಾಗುವುದಿಲ್ಲ, ಮೂಢನಂಬಿಕೆಯಂಥ ಸಾಮಾಜಿಕ ಸಮಸ್ಯೆಯೊಂದನ್ನು ಅತಿರೇಕಗೊಳಿಸದೆ, ಅತಿರಂಜಿತ ಗೊಳಿಸದೆ, ಅಳುವುದನ್ನೇ ಮೆಲೋಡ್ರಾಮಗೊಳಿಸದೆ ಅತ್ಯಂತ ವಾಸ್ತವಿಕ ನೆಲೆಗಟ್ಟಿನಲ್ಲಿ ಚಿತ್ರೀಕರಿಸಿರುವುದನ್ನು ಗಂಭೀರವಾಗಿ ಪರಿಗಣಿಸಬೇಕೆನ್ನಿಸುತ್ತದೆ.

ಭಾಗೀರತಿ ಕೆರೆಗೆ ಹಾರವಾದ ಮೇಲೆ ಮಾದೇವರಾಯ ಬರುತ್ತಾನೆ. ಅವನಿಗೆ ವಿಷಯ ಗೆಳತಿಯಿಂದ ತಿಳಿದು ಅವನೂ ಕೆರೆಗೆ ಹಾರವಾಗುತ್ತಾನೆ. ಇಲ್ಲಿಗೆ ಸಿಂಹಾವಲೋಕನ ಕ್ರಮದಲ್ಲಿ ಹೇಳಲ್ಪಡುತ್ತಿದ್ದ ಕತೆ ಮುಗಿದು ಇದನ್ನು ಕೇಳುತ್ತಿದ್ದ ಮಕ್ಕಳ ಕಣ್ಣಲ್ಲಿ ನೀರು ಬರುತ್ತಿರುತ್ತದೆ. ಒಬ್ಬ ಚಿಕ್ಕ ಹುಡುಗ ಭಾಗೀರತಿಗೆ ಆದ ಅನ್ಯಾಯಕ್ಕೆ ಪ್ರತಿಭಟನಾರ್ಥವಾಗಿ ಕೆರೆಯ ನೀರಿಗೆ ಒಂದು ಕಲ್ಲು ಹೊಡೆಯುವುದರ ಮೂಲಕ ತನ್ನ ಸಿಟ್ಟನ್ನು ತೀರಿಸಿಕೊಳ್ಳುತ್ತಾನೆ.



'ಭಾಗೀರತಿ' ಸಿನಿಮಾ ಆರಂಭವಾಗುವುದೇ ಶಾಲಾ ಬಾಲಕರ ಪ್ರವಾಸದಿಂದ. ಆ ಶಾಲಾ ಬಾಲಕರಿಗೆ ಅವರ ಮೇಡಂ ಊರಿನ ಕೋಟೆಕೊತ್ತಲ, ಊರಿನ ದಿಡ್ಡಿಬಾಗಿಲುಗಳನ್ನು ಪರಿಚಯ ಮಾಡಿಕೊಡುತ್ತಲೇ ಕೆರೆಯ ಬಳಿ ಕರೆತಂದು ಈ ಕೆರೆಯದೇ ಒಂದು ದುರಂತ ಕತೆಯಿದೆ ಎಂದಾಗ ಮಕ್ಕಳು ಆ ಕತೆ ಕೇಳಲು ಉತ್ಸುಕತೆ

ತೋರುತ್ತಾರೆ. ಆ ಮೇಡಂ ಕಲ್ಲನ ಕೇರಿಯಲ್ಲಿ, ಮಲ್ಲನ ಗೌಡರಿದ್ದರು ಎಂಬ ವಾಕ್ಯ ಆರಂಭಿಸಿದೊಡನೆ ಹಿನ್ನೋಟ ತಂತ್ರದಲ್ಲಿ ಸಿನಿಮಾದ ಭೂತಕಾಲದ ಕತೆ ಆರಂಭ ಗೊಳ್ಳುತ್ತದೆ. ಕೊನೆಯಲ್ಲಿ ಮಾದೇವರಾಯನೂ ತನ್ನ ಹೆಂಡತಿಯ ಮೇಲಿನ ಅಗಾಧ ಪ್ರೇಮದಿಂದ ಕೆರೆಗೆ ಬಲಿಯಾದ ಮೇಲೆ ಆ ಕತೆ ಕೊನೆಗೊಂಡು ಮತ್ತೆ ಶಾಲಾ ಬಾಲಕರು ಹಾಗೂ ಮೇಡಂ ಅವರ ಮೇಲೆ ಕ್ಯಾಮರಾ ಕೇಂದ್ರೀಕೃತವಾಗುತ್ತದೆ. ಅನಂತರ ಆ ಕೆರೆಯ ನೀರಿಗೆ ಹುಡುಗ ಕಲ್ಲೆಸೆಯುವುದರ ಮೂಲಕ ಮುಕ್ತಾಯವಾಗುತ್ತದೆ.

ಸಿನಿಮಾ ನೋಡಿದ ಅನೇಕ ಕನ್ನಡ ಅಧ್ಯಾಪಕರಿಗೆ ಹಾಗೂ ಕೆಲವು ಪ್ರಸಿದ್ಧ ವಿಮರ್ಶಕರಿಗೆ ಇದು ಹಿನ್ನೋಟ ತಂತ್ರದಲ್ಲಿ ಹೇಳುತ್ತಿರುವ ಕತೆ ಎಂಬುದೇ ಅರ್ಥವಾದಂತಿಲ್ಲ. ಭಾಗೀರತಿಯನ್ನು ನೀರಿನಲ್ಲಿ ಮುಳುಗಿಸಿದ್ದೇಕೆ, ಗಂಡನನ್ನೂ ಸಾಯುವಂತೆ ಮಾಡಿದ್ದೇಕೆ ಎಂಬ ಪ್ರಶ್ನೆಗಳು ಬಂದು ಬರಗೂರರು ಇಂಥ ಮೂಢನಂಬಿಕೆಯ ಸಿನಿಮಾ ಮಾಡಬಹುದೇ ಎಂಬ ಸಂದೇಹವನ್ನು ಹೊರಹಾಕಿದ್ದಾರೆ. ಬರಗೂರರಿಗೂ ಹಲವು ಪತ್ರಕರ್ತರು ಇದೇ ಪ್ರಶ್ನೆಗಳನ್ನು ಕೇಳಿದ್ದಾರೆ. ಅದೆಲ್ಲಕ್ಕೂ ಅವರು ಸಮಂಜಸವಾಗಿ ಉತ್ತರ ಕೊಟ್ಟಿದ್ದಾರೆ.

ಮೂಲ ಜನಪದ ಕತೆ ಮೂಢನಂಬಿಕೆಯ ಪರವಾದುದಲ್ಲ. ಅಲ್ಲಿ ಭಾಗೀರತಿ ಪಾತ್ರದಲ್ಲಿ ಮಾದೇವರಾಯನ ಪಾತ್ರದಲ್ಲಿ ಅದನ್ನು ವಿರೋಧಿಸುವ ಸಣ್ಣ ಎಳೆ ಹಾಸುಹೊಕ್ಕಾಗಿದೆ. 'ಬ್ಯಾಳೀಯ ಹಸನ್ಮಾಡ್ತಾ, ಬಿಟ್ಟಾಳು ಕಣ್ಣೀರ' ಎಂಬ ಸಾಲಿನಲ್ಲಿ ಈ ವಿರೋಧದ ಎಳೆ ದಾಖಲಾಗಿದೆ. 'ಮಗ ಸತ್ತರೆ ಮನೆಹಾಳು ಸೊಸೆ ಸತ್ರೆ ಸೋಬಾನ' ಎಂಬ ಗಾದೆ ಮಾತಿನಂತೆ ಭಾಗೀರತಿ ಸತ್ತಾಗ ಮಾದೇವರಾಯನಿಗೆ ತಾಯಿ ತಂದೆ ಇನ್ನೊಂದು ಮದುವೆ ಮಾಡಬಹುದಿತ್ತು. ಅದನ್ನು ಪ್ರಸ್ತಾಪ ಮಾಡಿರಲೂ ಬಹುದು. ಇದೆಲ್ಲ ಮೂಲ ಕತೆಯ ವಿವರದಲ್ಲಿ ಇಲ್ಲ. ಆದರೆ ಇದೆಲ್ಲ ಕತೆಯ ಒಡಲಲ್ಲಿರುವ 'ಮೌನ'ದಲ್ಲಿದೆ. ಕೆಲವರು ವ್ಯಾಖ್ಯಾನಿಸಿದಂತೆ ಇದು ತ್ಯಾಗ - ಬಲಿದಾನದ



ಕತೆಯೂ ಅಲ್ಲ. ಸಂಕಷ್ಟಕ್ಕೆ ಸಿಕ್ಕಿದ ಹೆಣ್ಣೊಬ್ಬಳು ಅಸಹಾಯಕತೆಯಿಂದ ಮೌನವಾಗಿ ರೋದಿಸುವ ಕಲಾತ್ಮಕ ಗೀತೆಯಾಗಿದೆ ಎಂಬುದು ಹೊಸ ಓದಿಗೆ ದಕ್ಕುವಂಥ ವಿಷಯ.

ಇಂಥ ಕತೆಯ 'ಮೌನರೋದನ'ದ ಎಳೆಯನ್ನು ಹಿಡಿದು ಡಾ।। ಬರಗೂರರು ಬಹಳ ಎಚ್ಚರಿಕೆಯಿಂದ ಚಿತ್ರೀಕರಣ ಮಾಡಿದ್ದಾರೆ. ಮೂಲ ಕತೆಗೆ ಪ್ರತಿಭಟನೆಯ ಸ್ಪರ್ಶ ಕೊಡಲು ಸಾಧ್ಯವಿಲ್ಲದ್ದರಿಂದ ಹಿನ್ನೋಟ ತಂತ್ರವನ್ನು ಬಳಸಿ ಕತೆ ಮುಗಿದ ಮೇಲೆ ಒಬ್ಬ ಸಣ್ಣ ಹುಡುಗನ ಮೂಲಕ ಪ್ರತಿಕ್ರಿಯೆ ವ್ಯಕ್ತಪಡಿಸುತ್ತಾರೆ. ಇದನ್ನು ಇನ್ನೂ ಸ್ಪಷ್ಟಪಡಿಸಲು ಕುವೆಂಪು ಅವರ 'ಕಲ್ಕಿ' ಪದ್ಯದ ಜೊತೆ ಹೋಲಿಸಬಹುದು. ಕವನದಲ್ಲಿ ಅವತಾರದ ಅಂಶಗಳಿವೆ. ಪಂಚಾಂಗ ಮತ್ತು ರಾಶಿಫಲಗಳನ್ನು ಹೇಳುವ ಪುಸ್ತಕಗಳಲ್ಲಿ ಸಂಕ್ರಾಂತಿ ಪುರುಷನ ವಿವರಗಳಿರುತ್ತವೆ. ಇವೆಲ್ಲ ಹೆದರಿಕೆ ಹುಟ್ಟಿಸುವ, ಆ ಮೂಲಕ ಮೂಢನಂಬಿಕೆ - ಸಂಪ್ರದಾಯದ ಸಂಕೋಲೆಗಳಲ್ಲಿ ಮುಗ್ಧ ಜನರನ್ನು ಸಿಕ್ಕಿಸುವುದಕ್ಕಾಗಿ ಹೆಣೆದ ಕತೆಗಳು ಎಂಬುದು ಈಗ ಗೊತ್ತಾಗಿದೆ. ಇದೇ ಮೂಢನಂಬಿಕೆಯ ವಿವರಗಳನ್ನು ಕುವೆಂಪು ಅವರು ಪ್ರಸ್ತಾಪಿಸುತ್ತಲೇ ಅವನ್ನು ಬದಲಾವಣೆಯ ಅಥವಾ ಕ್ರಾಂತಿಯ ಅಂಶಗಳನ್ನಾಗಿ ಪರಿವರ್ತಿಸುತ್ತಾರೆ. ಅದಕ್ಕೆ ಅವರು ಆರಿಸಿಕೊಳ್ಳುವ ತಂತ್ರ 'ನಿದ್ದೆಯ ಲೋಕದಿ ಕನಸಿನ ಬೀದಿ.' ಅಂದರೆ ಇಡೀ ಕವನ ವ್ಯಕ್ತವಾಗುವುದು ನಿದ್ದೆಯಲ್ಲಿ. ಬರಗೂರರ ಸಿನಿಮಾ ವ್ಯಕ್ತವಾಗುವುದು ಮೇಡಂ ಹೇಳುವ ಕತೆಯಲ್ಲಿ. ಕುವೆಂಪು ಕವನದಲ್ಲಿ ಕ್ರಾಂತಿ ಪುರುಷ ತನ್ನನ್ನು ಕೊಲ್ಲಲು ಬರುತ್ತಿದ್ದಾನೆ ಎಂದು ಕವಿ ದಿಕ್ಕೆಟ್ಟು ಓಡುವಾಗ ಕನಸು ಒಡೆದುಹೋಗುತ್ತದೆ. 'ಕನಸೊಡೆದೆದ್ದೆ ಇನ್ನೆಲ್ಲಿಯ ನಿದ್ದೆ' ಎಂದು ಕುವೆಂಪು ಕವನ ಮುಕ್ತಾಯ ಮಾಡಿದಂತೆ ಬರಗೂರರು ಹುಡುಗನ ಮೂಲಕ ನೀರಿಗೆ ಕಲ್ಲೆಸೆಯುವ ಕ್ರಿಯೆಯಲ್ಲಿ ಸಿನಿಮಾ ಮುಕ್ತಾಯ ಮಾಡುತ್ತಾರೆ.

ಒಟ್ಟಿನಲ್ಲಿ, ಬರಗೂರರ 'ಭಾಗೀರತಿ' ಕಲೆ ಮತ್ತು ವೈಚಾರಿಕತೆ ಎರಡನ್ನೂ ಮೇಳವಿಸಿರುವಂಥ ಸಿನಿಮಾ. 'ಜನಪ್ರಿಯ ಕಲೆಯೊಂದು ಜನರ ಆಶಯಗಳನ್ನೇ ಸ್ವೀಕರಿಸಿ ಕಲಾಕೃತಿ ನೀಡುತ್ತದೆ' ಎಂಬ ಬರ್ಟೋಲ್ಟ್ ಬ್ರೆಕ್ಟ್‌ನ ಆಶಯಕ್ಕೆ ಹತ್ತಿರವಾಗಿ ಈ ಸಿನಿಮಾ ನಿರ್ಮಾಣವಾಗಿದೆ. 'ಚೋಮನದುಡಿ'ಯ ನಂತರ ನೂರು ದಿನದ ಪ್ರದರ್ಶನ ಭಾಗ್ಯ ಕಂಡ ಕಲಾತ್ಮಕ ಸಿನಿಮಾ ಎಂಬ ಹೆಗ್ಗಳಿಕೆಯ ಜೊತೆಗೆ ೨೦೧೧ರ ಸಾಲಿನ 'ಪಂಪ ಪ್ರಶಸ್ತಿ' ಲಭ್ಯವಾಗಿರುವುದೂ ಕೂಡ ಬರಗೂರರ ಬದ್ಧತೆಗೆ, ನಿರಂತರ ಕ್ರಿಯಾಶೀಲತೆಗೆ, ಅವರು ಪ್ರತಿನಿಧಿಸುವ ಬಂಡಾಯದ ಆಶಯಗಳಿಗೆ ಸಂದ ಗೌರವ ಎಂದು ಭಾವಿಸಬೇಕಾಗಿದೆ.

**ಡಾ।। ರಂಗಾರೆಡ್ಡಿ ಕೋಡಿರಾಂಪುರ**
ನಂ. ೬೯೩, ಎರಡನೇ ಮಹಡಿ, ೨ನೇ ಮುಖ್ಯರಸ್ತೆ, ಹೆಬ್ಬಾಳ
ಬೆಂಗಳೂರು - ೫೬೦ ೦೨೪



## ಕರುಣೆ, ಬದುಕು, ಐಕ್ಯತೆ ಮತ್ತು ನನ್ನ ಕವಿತೆ

ನನ್ನ ಕವಿತೆ...
ಹಸಿದ ಒಡಲುಗಳ
ಕರುಳಿನಿಂದ
ಬದುಕಿನ ಕಾವನ್ನು ಹೀರಿಕೊಂಡು
ನೊಂದು ಅಲವತ್ತುಕೊಳ್ಳುವ
ಬವಣೆತರ ದನಿಯೊಳಗೆ
'ಕರುಣೆಯ' ಹಾಡಾಗಿ ಹರಿದು ಬರಲಿ.

ನನ್ನ ಕವಿತೆ...
ಉರಿವ ಸೂರ್ಯನ ಕೆಳಗೆ
ಮಣ್ಣು ನೆಚ್ಚಿಕೊಂಡು
ಬಿಸಿಲ ದಗೆಯಲಿ ದಹಿಸಿ
ಅವುಡುಗಚ್ಚಿ ದುಡಿವ ದೇಹದಿಂದ
ಬೆವರ ಹನಿಯಾಗಿ ಜಿನುಗಲಿ
ಮಣ್ಣಿನ ಮೇಲೆ 'ಬದುಕಿನ' ಹಾಡಾಗಿ ಹುಟ್ಟಲಿ.

ನನ್ನ ಕವಿತೆ...
ನೆತ್ತರು ಹರಿಸುವ
ಕೇಸರಿ-ಹಸಿರು ಬಾವುಟಗಳ ಮಧ್ಯೆ
ಬಿಳಿಯ ಬಣ್ಣವಾಗಲಿ
ಶಾಂತಿ, ಸಮರಸದ ಕಣ್ಣಾಗಿ
ನಮ್ಮೆದೆಯ ಉಸಿರಲ್ಲಿ ಮಿಡಿಯುವ
'ಐಕ್ಯತೆಯ' ಹಾಡಾಗಿ ಹೊಮ್ಮಿ ಬರಲಿ.

**ಸಂತೋಷ ಅಂಗಡಿ**
ಲಕ್ಷ್ಮೀ ನಗರ, ಬಾದಾಮಿ - ೫೮೭ ೨೦೧, ಬಾಗಲಕೋಟೆ ಜಿಲ್ಲೆ



# ಪ್ರಕ್ಷೇಪಣೆ





**''ನಾವು ಇತರರಲ್ಲಿ ಏನನ್ನು ಕಾಣುತ್ತೇವೆಯೋ ಅದು ಕೇವಲ ಪ್ರತಿಬಿಂಬ; ಇತರರು ನಮಗೆ ಕನ್ನಡಿಯಾಗಿರುತ್ತಾರೆ. ನಾವು ಬೇರೆಯವರಲ್ಲಿ ಏನನ್ನು ಕಾಣುತ್ತೇವೆಯೋ ಅದು ನಾವು ಏನನ್ನು ಕಾಣಲು ಇಚ್ಛಿಸುತ್ತೇವೆಯೋ ಅದನ್ನಷ್ಟೆ. ವಾಸ್ತವವಾಗಿ ನಾವು ಬೇರೆಯವರಲ್ಲಿ ಕಾಣುವುದು ನಮ್ಮನ್ನೆ.''**

ನನಗೆ ಮನಶ್ಶಾಸ್ತ್ರ ಗುರುಗಳಾಗಿದ್ದ ಪ್ರೊಫೆಸರ್ ಬಿ. ಕೃಷ್ಣನ್ ಸದಾ ಉಲ್ಲೇಖಿಸುತ್ತಿದ್ದ ಸಂಗತಿಯೊಂದು ನನ್ನ ನೆನಪಿನಲ್ಲಿ ಅಚ್ಚಳಿಯದೆ ಉಳಿದುಕೊಂಡು ಬಂದಿದೆ. ವೃದ್ಧ ವ್ಯಕ್ತಿಯೊಬ್ಬರು ಯಾವುದೋ ನಗರದ ಚೌಕವೊಂದರಲ್ಲಿ ಕುಳಿತು ಹೋಗಿ ಬರುವವರನ್ನು ವೀಕ್ಷಿಸುತ್ತಿದ್ದರು. ಪ್ರವಾಸಿಗನೊಬ್ಬ ಅವರ ಬಳಿ ಬಂದು ತಾನು ಮುಂದಿನ ಹಳ್ಳಿಗೆ ಹೋಗುತ್ತಿರುವುದಾಗಿ ತಿಳಿಸಿ, ಆ ಹಳ್ಳಿಯ ಜನರು ಎಂಥವರು ಎಂದು ವಿಚಾರಿಸಿದ. ಅದಕ್ಕೆ ಆ ಹಿರಿಯರು ಪ್ರವಾಸಿಗನನ್ನು ಕುರಿತು, ''ಹಿಂದಿನ ಹಳ್ಳಿಯ ಜನರು ಹೇಗಿದ್ದರು?'' ಎಂದು ಮರುಪ್ರಶ್ನೆ ಮಾಡಿದರು. ''ಓ, ಅವರು ಒಳ್ಳೆಯ ಸ್ವಭಾವದವರು. ಸ್ನೇಹಪರರು. ಜನರ ಕಷ್ಟಗಳಿಗೆ ಸ್ಪಂದಿಸುತ್ತಿದ್ದರು'' ಎಂದು ಉತ್ತರಿಸಿದ. ''ಸರಿ, ಹಾಗಿದ್ದರೆ ಮುಂದಿನ ಹಳ್ಳಿಯವರು ಕೂಡ ಒಳ್ಳೆಯ ಜನರೇ. ಅವರೂ ಸ್ನೇಹಪರರು. ಜನರ ಕಷ್ಟಗಳಿಗೆ ನೆರವಾಗುತ್ತಾರೆ'' ಎಂದು ಹೇಳಿ ಪ್ರವಾಸಿಗನನ್ನು ಬೀಳ್ಕೊಟ್ಟರು. ಸ್ವಲ್ಪ ಸಮಯದ ನಂತರ ಅದೇ ಹಾದಿಯಲ್ಲಿ ಇನ್ನೊಬ್ಬ ಪ್ರವಾಸಿಗ ಬಂದು, ವೃದ್ಧರನ್ನು ಕುರಿತು ಅದೇ ಪ್ರಶ್ನೆ ಕೇಳುತ್ತಾನೆ. ಪುನಃ ವೃದ್ಧರು ಪ್ರವಾಸಿಗನನ್ನು ಕುರಿತು ಮೊದಲಿನ ಪ್ರವಾಸಿಗನಿಗೆ ಕೇಳಿದ ಪ್ರಶ್ನೆಯನ್ನೇ ಕೇಳುತ್ತಾರೆ. ಅದಕ್ಕೆ ಪ್ರವಾಸಿಗ ಹೇಳುತ್ತಾನೆ: ''ಹಿಂದಿನ ಹಳ್ಳಿಯ ಜನರು ಕೆಟ್ಟವರು. ಜಗಳಗಂಟರು. ಜನರ ಕಷ್ಟಗಳಲ್ಲಿ ನೆರವಾಗುವ ಸ್ವಭಾವದವರಲ್ಲ'' ವೃದ್ಧರು ಹೇಳುತ್ತಾರೆ: ''ಮುಂದಿನ ಹಳ್ಳಿಯ ಜನರೂ ಅಂಥವರೇ. ಅವರೇನೂ ಬೇರೆಯಲ್ಲ'' ಅದೇಕೆ ಈ ವೃದ್ಧ ಒಂದೇ ಹಳ್ಳಿಯ ಜನರನ್ನು ಕುರಿತು ಇಬ್ಬರು ಪ್ರವಾಸಿಗರಿಗೂ ಬೇರೆ ಬೇರೆ ಬಗೆಯ ಉತ್ತರ ನೀಡಿದ ಎಂಬುದಕ್ಕೆ ವಿವರಣೆ ಅಗತ್ಯವಿಲ್ಲ; ಉತ್ತರ ಸ್ಪಷ್ಟವಾಗಿಯೇ ಇದೆ. ಜನರನ್ನು ನಾವು ಹೇಗೆ ಪರಿಗ್ರಹಿಸುತ್ತೇವೆ ಎನ್ನುವುದು ನಮ್ಮ ಸ್ವಭಾವವನ್ನೇ ಬಹುಮಟ್ಟಿಗೆ ಅವಲಂಬಿಸಿರುತ್ತದೆ.

ಈ ಕುರಿತು ಗುರು ರಜನೀಶ (ಓಶೋ) ಇಂಥದೇ ಮಾತುಗಳನ್ನು ಹೇಳುತ್ತಾರೆ: ''ನಾವು ಇತರರಲ್ಲಿ ಏನನ್ನು ಕಾಣುತ್ತೇವೆಯೋ ಅದು ಕೇವಲ ಪ್ರತಿಬಿಂಬ; ಇತರರು ನಮಗೆ ಕನ್ನಡಿಯಾಗಿರುತ್ತಾರೆ. ನಾವು ಬೇರೆ ಯವರಲ್ಲಿ ಏನನ್ನು ಕಾಣುತ್ತೇವೆಯೋ ಅದು ನಾವು ಏನನ್ನು ಕಾಣಲು ಇಚ್ಛಿಸುತ್ತೇವೆಯೋ ಅದನ್ನಷ್ಟೆ. ವಾಸ್ತವವಾಗಿ ನಾವು ಬೇರೆಯವರಲ್ಲಿ ಕಾಣುವುದು ನಮ್ಮನ್ನೆ.''

ಖ್ಯಾತ ಮನೋವಿಜ್ಞಾನಿ ಸಿಗ್ಮಂಡ್ ಫ್ರಾಯ್ಡ್ ಪ್ರಕಾರ ನಮ್ಮ ಮಾನಸಿಕ ಸ್ವಾಸ್ಥ್ಯವನ್ನು ಕಾಯ್ದುಕೊಳ್ಳಲು ನಾವು ಬಗೆಬಗೆಯ ರಕ್ಷಣಾ ತಂತ್ರಗಳನ್ನು ನಿರ್ಮಿಸಿ ಕೊಂಡಿದ್ದೇವೆ. ಅಂತಹ ತಂತ್ರಗಳಲ್ಲಿ ಪ್ರಮುಖವಾದದ್ದು ಪ್ರಕ್ಷೇಪಣೆ. ಇದೊಂದು ಅಪ್ರಜ್ಞಾಪೂರ್ವಕವಾಗಿ ನಡೆಯುವ ಕ್ರಿಯೆ. ಬಾಹ್ಯಾರೋಪಣೆ ಮಾಡುವ ಮೂಲಕ ವ್ಯಕ್ತಿಯೊಬ್ಬ ತನ್ನ ಭಾವನೆಗಳು, ಆಲೋಚನೆಗಳು, ಸ್ವಭಾವಗಳನ್ನು - ಅದರಲ್ಲೂ ವಿಶೇಷವಾಗಿ ತನ್ನ ಲೋಪ, ಕೊರತೆ, ಆಕಾಂಕ್ಷೆ, ರಾಗದ್ವೇಷಗಳನ್ನು ಬಾಹ್ಯ ವಸ್ತುಗಳಿಗೆ ಅಥವಾ ವ್ಯಕ್ತಿಗಳಿಗೆ ವರ್ಗಾಯಿಸುತ್ತಾನೆ. ತಾನು ಸ್ವಾರ್ಥಿ, ವಂಚಕ, ಕೆಡುಕ ಮುಂತಾಗಿ ಒಪ್ಪಿಕೊಂಡರೆ ತನ್ನ 'ಅಹಂ'ಗೆ ಧಕ್ಕೆಯಾಗುತ್ತದೆ; ಬದಲಾಗಿ ಈ ದುರ್ಗುಣಗಳನ್ನು ಇತರರಿಗೆ ಆರೋಪಿಸುವುದು ಸುಲಭ. ಪರೀಕ್ಷೆಗಳಲ್ಲಿ ಅನುತ್ತೀರ್ಣನಾದ ವಿದ್ಯಾರ್ಥಿ ತನ್ನ ವೈಫಲ್ಯಕ್ಕೆ ಅಧ್ಯಾಪಕನನ್ನು ದೂಷಿಸುತ್ತಾನೆ; ವ್ಯಾಪಾರದಲ್ಲಿ ನಷ್ಟ ಅನುಭವಿಸಿದ ವರ್ತಕ ತನ್ನ ಪಾಲುಗಾರರನ್ನು ಹೊಣೆಗಾರನನ್ನಾಗಿಸುತ್ತಾನೆ. ದಾಂಪತ್ಯ ದ್ರೋಹವೆಸಗುವ ಹೆಣ್ಣು ಅಥವಾ ಗಂಡು ತನ್ನ ಗಂಡ ಅಥವಾ ಹೆಂಡತಿಯನ್ನು ಅಪ್ರಾಮಾಣಿಕರೆಂದು ಭಾವಿಸಿ ವಂಚನೆಯ ಆರೋಪವನ್ನು ಹೊರಿಸುತ್ತಾರೆ. ಸುಪ್ತ ಚೇತನದಲ್ಲಿ ನಡೆಯುವ ಈ ಕ್ರಿಯೆ ವ್ಯಕ್ತಿಗೆ ತನ್ನ ಅವಗುಣಗಳನ್ನು ಮರೆಮಾಚುವ ಅವಕಾಶವನ್ನು ಕಲ್ಪಿಸುತ್ತದೆ ಮತ್ತು ಅಂತಹ ಅವಗುಣಗಳಿಂದಾಗಿ ಅನುಭವಿಸಬೇಕಾದ ಆತಂಕವನ್ನು ನಿವಾರಿಸುತ್ತದೆ.

ಇಲ್ಲಿ ನಾವು ಗಮನಿಸಬೇಕಾದ ವಿಚಾರ ಎಂದರೆ ಪ್ರಕ್ಷೇಪಣೆ ಒಂದು ಆತ್ಮರಕ್ಷಣಾ ತಂತ್ರವಾಗಿ ಒಂದು ಮಟ್ಟದಲ್ಲಿ ಸರ್ವೇಸಾಮಾನ್ಯ; ಅಪೇಕ್ಷಣೀಯ ಎಂದೂ ಒಪ್ಪಿಕೊಳ್ಳಬಹುದೇನೋ. ಆದರೆ ಅದು ತೀವ್ರವಾದಾಗ ವಿಕೃತ ಮಾನಸಿಕ ಲಕ್ಷಣವಾಗಿ ಪರಿಣಮಿಸುತ್ತದೆ. ಮಾನಸಿಕ ಸ್ವಾಸ್ಥ್ಯಕ್ಕೆ ಹಾನಿಯಾಗುವ ಸಾಧ್ಯತೆಗಳೂ ಉಂಟು.

**ಎಚ್. ಎಸ್. ಈಶ್ವರ**
ಎಚ್.ಐ.ಜಿ., ನಂ. ೧೧, ಕೆ.ಎಚ್.ಬಿ. ಕಾಲೋನಿ
ಮೊದಲ ಹಂತ, ಬಸವೇಶ್ವರನಗರ, ಬೆಂಗಳೂರು - ೫೬೦ ೦೭೯

## ಸನ್ಯಾಸ

ಬೇಸರಗೊಂಡ
ಪ್ರಾಮಾಣಿಕ
ರಾಜಕಾರಣಿಗಳಂದು
ತೆಗೆದುಕೊಳ್ಳುತ್ತಿದ್ದರು
ರಾಜಕೀಯ - ಸನ್ಯಾಸ;
ರಾಜಕೀಯದಲ್ಲಿಂದು
ಹೆಚ್ಚುತ್ತಿರುವುದು
ಸನ್ಯಾಸಿ ಸ್ವಾಮಿಗಳ
ಹಸ್ತಕ್ಷೇಪ
ಇದೆಂಥ
ವಿಪರ್ಯಾಸ ?!

**ಡಾ|| ವಿ. ಪುಗಳೇಂದಿ**
ಬಳ್ಳಾರಿ



**ಮಾಧ್ಯಮ : ಮರ**



**ಮಾಧ್ಯಮ : ಮರಳು ಶಿಲೆ**



**ಮಾಧ್ಯಮ : ಮರ ಮತ್ತು ಶೂ ಪಾಲಿಶ್ ಬ್ರಶ್**

# ಸಾಮಾಜಿಕ ಬದ್ಧತೆಯ ಸೃಜನಶೀಲ ಕಲಾವಿದ
# ಡಾ॥ ಶಿವಾನಂದ ಬಂಟನೂರ



**ಮಾಧ್ಯಮ : ಮರ ಮತ್ತು ಹಗ್ಗ**

ಸಮಕಾಲೀನ ಶಿಲ್ಪಕಲೆಯ ಸೃಜನಶೀಲ ಕೊಡುಗೆಗಳಿಗೆ ಕಾರಣರಾದ ಬಹುಮುಖ ಪ್ರತಿಭೆಗಳಲ್ಲಿ ಒಬ್ಬರು ಡಾ॥ ಶಿವಾನಂದ ಬಂಟನೂರ. ಸುತ್ತಲಿನ ಆಗುಹೋಗುಗಳ ಆಳದ ದರ್ಶನದಂತಹ ಹಲವು ಶಿಲ್ಪಸೃಷ್ಟಿಗಳು ಇವರಿಂದ ಮೂಡಿಬಂದಿವೆ. ಐತಿಹಾಸಿಕ ಪ್ರಜ್ಞೆಯ ಜೊತೆಜೊತೆಗೆ ಸಮಕಾಲೀನ ಪ್ರಜ್ಞೆಯನ್ನು ಅರಗಿಸಿಕೊಂಡ, ಕೆಲವೊಮ್ಮೆ ಸಮಾಜವನ್ನು ರಚಿಸಿದ ಸೃಷ್ಟಿಗಳು ಇವರದು.

ಶಿವಾನಂದ ಅವರು ಮೂಲತಃ ಬಿಜಾಪುರ ಜಿಲ್ಲೆ ಸಿಂದಗಿ ತಾಲೂಕಿನ ಖೈನೂರಿನವರು. ಚಿತ್ರಕಲೆಯಲ್ಲಿ ಸ್ನಾತಕೋತ್ತರ ಪದವಿ ಹಾಗೂ ಶಿಲ್ಪಕಲೆಯಲ್ಲಿ ಪಿಎಚ್.ಡಿ. ಪದವಿ ಪಡೆದಿರುವರು. ದೃಶ್ಯಕಲೆ ಮತ್ತು ಕಲಾವಿದರ ಕುರಿತು ಐದು ಪುಸ್ತಕಗಳನ್ನು, ಹಲವಾರು ಲೇಖನಗಳನ್ನು ಪ್ರಕಟಿಸಿರುವರು.

ಪ್ರಸ್ತುತ ಹಂಪೆ ಕನ್ನಡ ವಿಶ್ವವಿದ್ಯಾಲಯದಲ್ಲಿ ಸೌಂದರ್ಯಶಾಸ್ತ್ರ ಮತ್ತು ಚಿತ್ರಕಲೆಯನ್ನು ಕಲಿಸುತ್ತಿರುವರು.

– ಕೆ. ವಿ. ಸುಬ್ರಹ್ಮಣ್ಯಂ

**ಮಾಧ್ಯಮ : ಮರ ಮತ್ತು ಲೋಹದ ಹಿಡಿಕೆ**
***ಶೀರ್ಷಿಕೆ : ರೋಲರ್ -2***



**ಮಾಧ್ಯಮ : ಮೃದು ಶಿಲೆ**
***ಶೀರ್ಷಿಕೆ : ನಮ್ಮ ಪರಿಸರ ಮತ್ತು ಗಣಿಗಾರಿಕೆ***



**ಮಾಧ್ಯಮ : ಮರ**
***ಶೀರ್ಷಿಕೆ : ಶೋಷಣೆ (ತುಳಿತ)***



Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. Siddanagouda Patil
© All rights reserved. Reproduction in whole or in part without permission is prohibited.

